ರಾಘವಾಂಕ ವಿರಚಿತ

# ಹರಿಶ್ಚಂದ್ರ ಕಾವ್ಯ


ಸಂಪಾದಕರು :

ಆಸ್ಥಾನ ಪಂಡಿತ, ಸರ್ವದರ್ಶನ ತೀರ್ಥ

ವೈ. ನಾಗೇಶ ಶಾಸ್ತ್ರಿಗಳು,

ಬಳ್ಳಾರಿ

ಮತ್ತು

ವಿದ್ವಾನ್ ಎಂ. ಜಿ. ವೆಂಕಟೇಶಯ್ಯನವರು, ಎಂ.ಎ.,ಬಿ.ಟಿ.,

ಬಳ್ಳಾರಿ








ಪ್ರಕಾಶಕರು :

ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ,

ವಿಧಾನ ಸೌಧ, ಬೆಂಗಳೂರು

೧೯೫೭

# ಪೀಠಿಕೆ

## ಉದ್ದೇಶ

ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಪ್ರಕಟನ ಸಮಿತಿಯವರು ಕನ್ನಡ ನಾಡಿನಲ್ಲಿ ಬಹಳವಾಗಿ ಪ್ರಚಾರದಲ್ಲಿರುವ ಕುಮಾರವ್ಯಾಸನ ಮಹಾಭಾರತ, ಲಕ್ಷ್ಮೀಶನ ಜೈಮಿನಿ ಭಾರತ, ರಾಘವಾಂಕನ ಹರಿಶ್ಚಂದ್ರ ಕಾವ್ಯ ಮೊದಲಾದ ಗ್ರಂಥಗಳನ್ನು ಮುದ್ರಿಸಿ, ಪ್ರಚಾರ ಮಾಡುವ ಕಾರ್ಯವನ್ನು ಕೈಗೊಂಡಿರುವುದು ಸರ್ವವಿದಿತ. ಈ ಕಾರ್ಯದ ಉದ್ದೇಶವು ಮುದ್ರಿತ ಗ್ರಂಥಗಳ ಮೂಲಕವಾಗಿ ಕನ್ನಡ ಸಾಹಿತ್ಯ ಪ್ರಚಾರವಾಗಲಿ ಎಂಬುದಿಷ್ಟೇ ಅಲ್ಲ; ಮುದ್ರಿತ ಸಾಹಿತ್ಯ ಗ್ರಂಥಗಳು ಸರ್ವರಿಗೂ ಸುಲಭವಾದ ಬೆಲೆಗೆ ದೊರೆಯಬೇಕೆಂಬುದೇ ಉದ್ದೇಶದ ಮುಖ್ಯಾಂಶವಾಗಿರುವುದು. ಈ ದೃಷ್ಟಿಯಿಂದ ಮುದ್ರಿಸಿ ಪ್ರಚಾರಮಾಡುವ ಕಾವ್ಯಗಳಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯವೂ ಒಂದಾಗಿರುವುದು.

## ಕಾವ್ಯ ಕರ್ತೃವಿನ ವಿಚಾರ

ಕಾವ್ಯದ ಕರ್ತೃವು ರಾಘವಾಂಕ ಕವಿಯು. ಈ ಕವಿಯ ಕಾಲ, ಮತ, ರಚಿಸಿದ ಗ್ರಂಥಗಳು—ಇವೇ ಮೊದಲಾದವುಗಳ ವಿಚಾರವು–ಮೈಸೂರು ವಿಶ್ವವಿದ್ಯಾನಿಲಯದವರ ಹರಿಶ್ಚಂದ್ರ ಕಾವ್ಯಸಂಗ್ರಹ ಮತ್ತು ಇತರರಿಂದ ಪ್ರಕಟಿತವಾದ 'ಮಹಾಕವಿ ರಾಘವಾಂಕ', 'ಹರಿಶ್ಚಂದ್ರ ಕಾವ್ಯ' ಮೊದಲಾದ ಗ್ರಂಥಗಳಲ್ಲಿ ವಿಸ್ತಾರವಾಗಿ ಚರ್ಚಿಸಲ್ಪಟ್ಟಿದೆ. ಇಲ್ಲಿ ಮುಖ್ಯವಾಗಿ ಕವಿಯ ಕಾಲ, ಮತ, ರಚಿಸಿದ ಗ್ರಂಥಗಳು–ಇವುಗಳ ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಸಿ, ಹರಿಶ್ಚಂದ್ರ ಕಾವ್ಯವನ್ನು ಓದಲಪೇಕ್ಷಿಸುವವರಿಗೆ ಆ ಕಾವ್ಯದಲ್ಲಿ ಪ್ರವೃತ್ತಿಯುಂಟಾಗುವಂತೆ ಕಾವ್ಯ ವಿಷಯಕವಾದ ವಿಚಾರವು ಸ್ವಲ್ಪಮಟ್ಟಿಗೆ ವಿಸ್ತರಿಸಲ್ಪಟ್ಟಿದೆ.

## ಕವಿಯ ಕಾಲ

ರಾಘವಾಂಕನ ಕಾಲ ನಿರ್ಣಯದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿರುವುವು. ಈತನ ಕಾಲವು ಕ್ರಿ.ಶ. ೧೨೯೦ ಎಂದು ರೆ॥ ಕಿಟ್ಟೆಲ್‌ರವರೂ, ಕ್ರಿ.ಶ. ೧೧೬೫ ಎಂದು ಕರ್ಣಾಟಕ ಕವಿ ಚರಿತ್ರಕಾರರೂ, ಕ್ರಿ ಶ. ೧೩೦೦ ಎಂದು ಡಾ॥ ಅ. ವೆಂಕಟಸುಬ್ಬಯ್ಯನವರೂ, ಕ್ರಿ.ಶ. ೧೨೪೦ ಎಂದು ಶ್ರೀ ಡಿ. ಎಲ್. ನರಸಿಂಹಾಚಾರ್ಯರೂ, ಕ್ರಿ.ಶ. ೧೨೮೦ ಎಂದು ಹರಿಶ್ಚಂದ್ರ ಕಾವ್ಯಸಂಗ್ರಹ

ಕಾರರೂ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ರಾಘವಾಂಕನ ಕಾಲವು ಕ್ರಿ.ಶ. ೧೧೬೫ರಿಂದ ೧೩೦೦ರ ವರೆಗೆ ಇರಬಹುದೆಂದು ಚರ್ಚಿಸಲ್ಪಟ್ಟಿದೆ. ೧೩ನೆಯ ಶತಮಾನದ ಪೂರ್ವಭಾಗವೇ ರಾಘವಾಂಕನ ಜೀವಿತ ಕಾಲವೆಂದು ಸದ್ಯಕ್ಕೆ ತಿಳಿದುಕೊಳ್ಳಬಹುದು. ಈ ವಿಷಯದಲ್ಲಿ ಹೆಚ್ಚಿಗೆ ಭಿನ್ನಾಭಿಪ್ರಾಯವಿಲ್ಲ.

## ಕವಿಯ ಮತ

ರಾಘವಾಂಕನು ವೀರಶೈವನು. ಈತನ ವಿಷಯವಾಗಿ ರಾಘವಾಂಕ ಚಾರಿತ್ರ (ಕ್ರಿ.ಶ. ೧೬೫೦), ಚೆನ್ನಬಸವ ಪುರಾಣ (ಕ್ರಿ.ಶ. ೧೫೮೪), ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ(ಕ್ರಿ.ಶ.೧೬೭೨), ಗುರುರಾಜ ಚಾರಿತ್ರ (ಕ್ರಿ.ಶ. ೧೬೫೦), ಪದ್ಮರಾಜ ಪುರಾಣ (ಕ್ರಿ.ಶ. ೧೩೮೫), ಇವು ಗಳಿಂದ ಅನೇಕ ವಿಷಯಗಳು ಗೊತ್ತಾಗುವುವು. ರಾಘವಾಂಕ ಚಾರಿತ್ರ ದಿಂದ ರಾಘವಾಂಕನು ಹಂಪೆಯಲ್ಲಿ ಹುಟ್ಟಿದವನು; ಈತನ ತಂದೆ ಮಹಾ ದೇವಭಟ್ಟ ; ತಾಯಿ ರುದ್ರಾಣಿ ; ಸೋದರ ಮಾವ ಮತ್ತು ಗುರು ಹಂಪೆಯ ಹರೀಶ್ವರ ಎಂದು ತಿಳಿದು ಬರುವುದು. ರಾಘವಾಂಕನೇ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ತಾನು ಮಹದೇವನಾತ್ಮಜನೆಂದೂ ಹರೀಶ್ವರನ ವರಸುತ (ಶಿಷ್ಯ) ನೆಂದೂ ಹೇಳಿಕೊಂಡಿರುವನು ; ಮತ್ತು ತನ್ನ ಗುರು ಪರಂಪರೆಯಲ್ಲಿ ಹಂಪೆಯ ಶಂಕರಪ್ರಭು, ಹಂಪೆಯ ಮಾದಿರಾಜ, ಹಂಪೆಯ ಮಹಾದೇವ, ಹಂಪೆಯ ಹರೀಶ್ವರ ಇವರ ಸ್ತುತಿಯನ್ನು ಮಾಡಿರುವುದಲ್ಲದೆ; ಶಿವಕವಿಗಳಾದ ಉದ್ಭಟ, ಮಯೂರ, ಕಾಳಿದಾಸ, ಹಲಾಯುಧ, ಕೇಶಿರಾಜ, ಮಲುಹಣ, ಬಾಣ, ಭೋಜ, ಭಲ್ಲಟ, ಭಾರವಿ ಇವರನ್ನೂ ಸ್ತುತಿಸಿರುವನು.

ರಾಘವಾಂಕನು ವೀರಶೈವನೆಂಬ ವಿಷಯದಲ್ಲಿಯೂ, ವೀರಶೈವನಾದರೆ ವೀರಶೈವ ಕವಿ ಸಂಪ್ರದಾಯದಂತೆ ಬಸವೇಶ್ವರಾದಿ ಶಿವಶರಣರನ್ನು ಏಕೆ ಸ್ತುತಿಸಲಿಲ್ಲವೆಂದೂ ಕೆಲವರ ಸಂಶಯವಿರುವುದು. ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹೇಳಿದ ಗುರು ಪರಂಪರೆಯಲ್ಲಿ ಮೂರನೆಯವನಾದ ಮಹಾದೇವ ಗುರುವಿನ ನೇಮಗಳಲ್ಲಿ ಮುಖ್ಯವಾದ "ಶಿವಲಿಂಗ ಪೂಜೆಯ ನಜಸ್ರ ಹಿಂಗದನೇಮ" ವನ್ನೂ, ತನ್ನ ಮುಖ್ಯ ಗುರುವಾದ ಹರೀಶ್ವರನ ದಯಾದಿ ಗುಣಗಳಲ್ಲಿ ಮುಖ್ಯವಾದ "ಜಂಗಮ ಪ್ರೇಮ" ವನ್ನೂ ಎತ್ತಿ ಹೇಳಿರುವನು. ; ಮತ್ತು ರಾಘವಾಂಕನು ತಾನು ರಚಿಸಿದ ಇತರ ಕಾವ್ಯಗಳಲ್ಲಿ ಜಂಗಮ, ದೀಕ್ಷೆ, ಮಹೇಶ್ವರ, ಶಿವಯೋಗ, ಕಾಯಕ, ಶರಣ, ಲಿಂಗೈಕ್ಯ, ಭವಿ, ಪ್ರಸಾದ ಮೊದಲಾದ ವೀರಶೈವ ಮತದಲ್ಲಿ ರೂಢವಾದ ಅನೇಕ ಪದ ಗಳನ್ನು ಪ್ರಯೋಗಿಸಿರುವನು. ಜಂಗಮ ಪ್ರೇಮಿಯಾದ ಹರೀಶ್ವರನ ಶಿಷ್ಯ ನಾದ ರಾಘವಾಂಕನು ಹರೀಶ್ವರನಂತೆ ವೀರಶೈವನೆಂಬುದರಲ್ಲಿ ಯಾವ ಸಂಶ ಯವೂ ಇಲ್ಲ. ಗುರುವಾದ ಹರೀಶ್ವರನು ಬಸವೇಶ್ವರಾದಿ ಶರಣರ ರಗಳೆಗಳನ್ನು

ರಚಿಸಿ, ಅವರಲ್ಲಿ ಪೂಜ್ಯ ಬುದ್ಧಿಯನ್ನು ತೋರಿಸಿರುವನು. ಗುರುವಿನಂತೆ ಶಿಷ್ಯನಿಗೂ ಶಿವಶರಣರಲ್ಲಿ ಪೂಜ್ಯ ಬುದ್ಧಿಯಿದ್ದುದೆಂಬುದು, ರಾಘವಾಂಕನು ಶಿವಶರಣರಾದ ಸಿದ್ಧರಾಮೇಶ್ವರ, ಆದಯ್ಯ ಮೊದಲಾದವರ ಚರಿತ್ರೆಗಳನ್ನು ಬರೆದಿರುವುದರಿಂದ ಸಿದ್ಧವಾಗುವುದು. ಈ ಅಭಿಪ್ರಾಯವೇ ಅನೇಕ ವಿದ್ವಜ್ಜನರಿಗೆ ಮಾನ್ಯವಾಗಿರುವುದು.

## ಕವಿಯ ಕೃತಿಗಳು

ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಪುರಾಣ, ಸೋಮನಾಥ ಚರಿತೆ, ವೀರೇಶ್ವರ ಚರಿತೆ, ಶರಭ ಚಾರಿತ್ರ, ಹರಿಹರ ಮಹತ್ವ—ಈ ಗ್ರಂಥಗಳನ್ನು ರಾಘವಾಂಕ ಕವಿಯು ರಚಿಸಿರುವನು. ಈ ಗ್ರಂಥಗಳಲ್ಲಿ ಶರಭ ಚಾರಿತ್ರ, ಹರಿಹರ ಮಹತ್ವವೆಂಬೆರಡು ಇನ್ನೂ ಪ್ರಕಟವಾಗಿಲ್ಲ. ಈ ಗ್ರಂಥಗಳಲ್ಲಿ ಪ್ರಕೃತವಾದ "ಹರಿಶ್ಚಂದ್ರ ಕಾವ್ಯ" ಗ್ರಂಥದ ವಿಚಾರವು ಇಲ್ಲಿ ನಿರೂಪಿತವಾಗಿದೆ :—

ರಾಘವಾಂಕನ ಇತರ ಕಾವ್ಯಗಳಲ್ಲಿ ವೀರಶೈವ ಮತ ವಿಷಯಗಳು ಅಧಿಕವಾಗಿದ್ದು, ಕಾವ್ಯ ಲಕ್ಷಣಗಳು ಗೌಣವಾಗಿರುವುವು. ಹರಿಶ್ಚಂದ್ರ ಕಾವ್ಯದಲ್ಲಿ ರಸಾಲಂಕಾರಾದಿ ಕಾವ್ಯ ಲಕ್ಷಣಗಳೂ ಕಾವ್ಯಶೈಲಿಯ ಪ್ರೌಢಿಮೆಯೂ ಹೆಚ್ಚಾಗಿರುವುವು. ಕವಿಯೇ ತನ್ನ ಕಾವ್ಯ ಲಕ್ಷಣವನ್ನು—

ರಸಜೀವ ಭಾವವೊಡಲರ್ಥವವಯವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಿಗೆಯು ತ
ವೆ ಸುಲಕ್ಷಣವೆ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ ಸುಕುಮಾರತೆ।
ರಸಿಕತನ ಸುಳಿ ಸುಖಂ ನಿಳಯವಂತಪ್ಪವಿಾ
ಪೊಸಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯ
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ ಕೃತಕೃತ್ಯನೋ (೧-೨೪)

ಎಂಬ ಪದ್ಯದಲ್ಲಿ ಸೊಗಸಾಗಿ ಹೇಳಿರುವನು. ಈ ರೀತಿ ಕವಿಯೇ ಹೇಳಿದಂತೆ ಹರಿಶ್ಚಂದ್ರ ಕಾವ್ಯದಲ್ಲಿ ರಸ, ಭಾವ, ಶಬ್ದಾರ್ಥಗಳು, ಅಲಂಕಾರಗಳು, ಪದವಿನ್ಯಾಸ, ರೀತಿ ಮೊದಲಾದವು ಉತ್ತಮ ಕಾವ್ಯದಲ್ಲಿ ಬರಬೇಕಾದ ರೀತಿಯಿಂದ ಬಂದಿರುವುವು. ಈ ಬಗೆಯ ಕಾವ್ಯ ಲಕ್ಷಣಗಳಿಂದ ಕೂಡಿದ್ದರೂ ತನ್ನ ಕಾವ್ಯದಲ್ಲಿ ಎಲ್ಲಿಯಾದರೂ ದೋಷಗಳಿರಬಹುದೆಂಬುದಕ್ಕೆ "ನಡೆವರೆಡಹದೆ ಕುಳಿತರೆಡಹುವರೆ?" ಎಂದು ಕವಿಯು ತಾನೇ ಸಮಾಧಾನವನ್ನು ಹೇಳುತ್ತಾನೆ. ದೋಷಗಳಿದ್ದರೆ ಅವುಗಳನ್ನು "ಸಸಿನೆ ಮಾಡುವುದು, ತಿದ್ದುವುದು, ಕೊಂಡಾಡಿ ಲಾಲಿಸಿ ಕೇಳ್ವುದು" ಎಂದು ಶಿವಾರ್ಚಕರಿಗೆ ಹೇಳಿಕೊಳ್ಳುತ್ತಾನೆ; ಮತ್ತು ಕಾವ್ಯವನ್ನು ನಡಸುವಾತನೆಡಹುವುದಕ್ಕೆ

“ಕಾವ್ಯಮಂ ನಡಸುವಾತಂ ರಸಾವೇಶ ಮಱಹಾಲಸ್ಯವೆಡೆಗೊಳಲು ತಪ್ಪುಗು ಮಲ್ಲದೆ ಕಾವ್ಯಕರ್ತೃ ತಪ್ಪುವನೆ” ಎಂದು ರಸಾವೇಶಾದಿ ಕಾರಣಾಂತರಗಳನ್ನು ಕೊಡುತ್ತಾನೆ. ಕಾವ್ಯಕರ್ತೃ ತಪ್ಪುವುದಿಲ್ಲ, ಒಂದು ಪಕ್ಷ ಕಾವ್ಯದಲ್ಲಿ “ಒಂದೆರಡೆಡೆಯೊಳು ಎಡೆವಾಯ್ದು ಬಂದ ತಪ್ಪಂ ಸಾಧಿಸದೆ ಕಡೆ-ತನಕ ಬಂದ ಲೇಸಿಂಗೆ ತಲೆದೂಗೆ ತಲೆಯೊಡೆವುದೇ ಬೇನೆಯರಿಯದ ನೀರಸರನೇಕೆ ಪುಟ್ಟಿಸಿದನಬುಜಭವನು” ಎಂದು, ದೋಷೈಕ ದೃಷ್ಟಿಯ ನೀರಸರನ್ನು ತಿರಸ್ಕರಿಸುತ್ತಾನೆ.

ಹೀಗೆ ಕವಿಯು ತನ್ನ ಕಾವ್ಯದ ವಿಚಾರವನ್ನು ಹೇಳಿ ಕಾವ್ಯದ ಕಥಾ ಬೀಜವನ್ನು :

ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂ
ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ
ಹುಸಿ ಮಾಳ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ ಸತಿಪುತ್ರರ॥
ಅಸುವಂತ್ಯವೆನೆ ನಿಗ್ರಹವ ಮಾಡಿಯೊಪ್ಪದಿರೆ
ಶಶಿಮೌಳಿ ಶ್ರೀ ವಿಶ್ವನಾಥ ಭೂಪಂಗೆ ಕರು
ಣಿಸಿ ಸಕಲ ಸಾಮ್ರಾಜ್ಯ ವಿತ್ತಾತನಂ ಮೆರೆದ ಕೃತಿ ಪುಣ್ಯದಾಕೃತಿಯಿದು (೧-೧೭)

ಎಂಬ ಪದ್ಯದಿಂದ ತಿಳಿಸುವುದಲ್ಲದೆ, ಈ ಕಥಾ ಬೀಜವು ಶಿವಭಕ್ತಿವಲ್ಲರಿಯ ಹೊಸಬಿತ್ತು ; ಆದ್ದರಿಂದ ಈ ಕೃತಿ ಪುಣ್ಯದಾಕೃತಿಯೆಂದು ಸಾರಿರುವನು. ರಾಘವಾಂಕನು ಪುಣ್ಯದಾಕೃತಿಯಾದ ತನ್ನ ಕೃತಿಯನ್ನು ಕೇಳುವವರಿಗುಂಟಾಗುವ ಫಲವನ್ನು ತಾನೇ ಕಾವ್ಯದ ಕೊನೆಯಲ್ಲಿ ಹೀಗೆ ಹೇಳಿರುವನು :

ಧರೆಯೊಳು ಹರಿಶ್ಚಂದ್ರ ಚಾರಿತ್ರಮಂ ಕೇಳ್ದ
ನರರೇಳು ಜನ್ಮದಿಂ ಮಾಡಿರ್ದ ಪಾತಕವು
ತರಣಿಯುದಯದ ಮುಂದೆ ನಿಂದ ತಿಮಿರದ ತೆರದೆ
ಹರಿಯುತಿಹುದು,—ಏಕೆಂಡಡೆ।
ಹರನೆಂಬುದೇ ಸತ್ಯ ಸತ್ಯವೆಂಬುದೆ ಹರನು
ಎರಡಿಲ್ಲವೆಂದು ಶ್ರುತಿ ಸಾರುತಿರಲಾ ವಾಕ್ಯ
ವರರೆ ನಿರುತವ ಮಾಡಿ ಮೂಜಗಕೆ ತೋರಿದ ಹರಿಶ್ಚಂದ್ರ ಕಥೆಗೇಳ್ದಡೆ ॥ (೧೪-೩೩)

ಹರನೇ ಸತ್ಯ ಸತ್ಯವೇ ಹರನು ಎಂಬುದೇ ಕವಿಯ ನಂಬಿಕೆ. ಈ ನಂಬಿಕೆಯಂತೆ ಸತ್ಯವಂತನಾದ ಹರಿಶ್ಚಂದ್ರನ ಚರಿತ್ರೆಯನ್ನು ಬರೆದಿರುವನು. ಈ ಚರಿತ್ರ ಶ್ರವಣದಿಂದ ಜನರು ಪಾಪರಹಿತರಾಗುವರೆಂಬುದು ಕವಿಯ ವಿಶ್ವಾಸ. ಇಷ್ಟೇ ಅಲ್ಲ; ಜನರು ಪಾಪರಹಿತರಾಗಿ ಸತ್ಯರಕ್ಷಕರಾಗುವುದಕ್ಕೆ ಸತ್ಯಹರಿಶ್ಚಂದ್ರನ ಕಥೆಯನ್ನು ಕೇಳಬೇಕು, ಹೊಗಳಬೇಕು, ತಾವೂ ಸತ್ಯದಿಂದ ಬದುಕಬೇಕು ಎಂಬುದು ರಾಘವಾಂಕನ ಅಪೇಕ್ಷೆ. ಅತನಿಗೆ ಕೀರ್ತಿಧನಾದಿ

ಗಳಲ್ಲಿ ಯಾವುದೊಂದರ ಅಪೇಕ್ಷೆಯೂ ಇಲ್ಲ. ಜನತೆ ಸತ್ಯದಿಂದ ಬದುಕ ಬೇಕೆಂಬುದೇ ತನ್ನ ಕಾವ್ಯರಚನೆಯ ಉದ್ದೇಶವಾಗಿರುವುದು. ಇದನ್ನು ಕವಿಯ ವಾಕ್ಯದಿಂದಲೇ ತಿಳಿದುಕೊಳ್ಳೋಣ :—

ಅನೃತವರಿಯದ ಹೊರೆಯನಂ ನೆನೆಯೆ ಪುಣ್ಯವೆಂ
ದೆನೆ ಸೂರ್ಯಕುಲಜ ಕಲಿ ದಾನಿ ಸತ್ಯಂ ವಸಿ
ಷ್ಠನ ಶಿಷ್ಯನಧಿಕಶ್ರೈವಂ ಕಾಶಿಯೊಳ್ ಮೆರೆದ ವೇದಪ್ರಮಾಣ ಪುರುಷ।
ಘನನೃಪ ಹರಿಶ್ಚಂದ್ರನೆಂದದಾತನ ಪೊಗಳ್ದು
ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದ
ನನಪೇಕ್ಷೆಯಿಂದ ಕವಿ ರಾಘವಾಂಕಂ ಮಾಹಾಲಿಂಗ ಭಕ್ತರ ಭಕ್ತನು। (೧೪-೩೪)

ಮಹಾಲಿಂಗ ಭಕ್ತರ ಭಕ್ತನಾದ ಕವಿಯ ಈ ವಾಕ್ಯವು ಸತ್ಯವು ಮತ್ತು ಹರಿಶ್ಚಂದ್ರನಂತೆ ಸತ್ಯರಕ್ಷಣೆಗಾಗಿಯೇ ಈ ಕಾವ್ಯವನ್ನು ರಚಿಸಿರುವನೆಂದು ನಾವೂ ನಂಬಿ, ಹರಿಶ್ಚಂದ್ರ ಕಾವ್ಯವನ್ನು ಓದಬೇಕು. ಆಗ ಕಥಾಸಂವಿಧಾನದ ಹಿರಿಮೆಯು ನಮ್ಮ ಮನದಲ್ಲಿ ಮೂಡುವುದು.

## ಕಾವ್ಯಶೈಲಿ

ಹರಿಶ್ಚಂದ್ರ ಕಾವ್ಯವು ಶ್ರಾವ್ಯಕಾವ್ಯವಾಗಿದ್ದರೂ ಇದರಲ್ಲಿ ದೃಶ್ಯಕಾವ್ಯಗಳಲ್ಲೊಂದಾದ ನಾಟಕದ ರಚನಾಪದ್ಧತಿಯು ಕೂಡಿಕೊಂಡಿದೆ. ಆದುದರಿಂದ ಇದರಲ್ಲಿ ಬರುವ ಹರಿಶ್ಚಂದ್ರ, ವಿಶ್ವಾಮಿತ್ರ, ವಸಿಷ್ಠ, ನಕ್ಷತ್ರಕ, ಚಂದ್ರಮತಿ—ಈ ಪಾತ್ರಗಳು ಓದುವವರ ಕಣ್ಣುಮುಂದೆ ನಿಂತಂತೆ ಕಾಣುತ್ತವೆ. ವೀರಶೈವ ಕವಿಗಳಲ್ಲಿ ಹರಿಹರ ರಾಘವಾಂಕರು ಕಾವ್ಯರಚನೆಯಲ್ಲಿ ತಮ್ಮದೇ ಆದ ಒಂದು ಹೊಸ ಹಾದಿಯನ್ನು ಸೃಜಿಸಿದ್ದಾರೆ. ಇವರಿಗಿಂತ ಹಿಂದೆ ಕನ್ನಡ ಸಾಹಿತ್ಯವು ರಾಜಾಶ್ರಯವನ್ನು ಹೊಂದಿ ಪಂಡಿತ ಸಮೂಹಕ್ಕೆ ಮೀಸಲಾಗಿದ್ದಿತು. ಚಂಪೂ ಕಾವ್ಯಗಳಿಗೆ ಮಾತ್ರ ಗೌರವವಿದ್ದಿತು. ಹರಿಹರ ರಾಘವಾಂಕರು ಈ ಸಂಕೋಚ ಸ್ಥಿತಿಯನ್ನು ಪರಿಹರಿಸಿ, ಅಚ್ಚಗನ್ನಡದ ಛಂದಸ್ಸಿನಲ್ಲಿಯೇ ತಮ್ಮ ಕಾವ್ಯಗಳನ್ನು ಸರ್ವಜನಪ್ರಿಯವಾಗುವಂತೆ ರಚಿಸಿ, ಮುಂದಿನ ಜನಾಂಗಕ್ಕೆ ಮಾರ್ಗದರ್ಶಕರಾದರು. ಹರಿಹರನು 'ಗಿರಿಜಾಕಲ್ಯಾಣ' ವೆಂಬ ಚಂಪೂಕಾವ್ಯವನ್ನು ಬರೆದಿದ್ದರೂ ಕನ್ನಡದ ಛಂದಸ್ಸಿನಲ್ಲಿ ಶಿವಶರಣರ ಅನೇಕ ಚರಿತ್ರೆಗಳನ್ನು ಸರ್ವಜನಪ್ರಿಯವಾಗುವಂತೆ ರಚಿಸಿರುವನು. ರಾಘವಾಂಕನು ಮಾತ್ರ ಷಟ್ಪದಿಗಳಲ್ಲಿಯೇ ತನ್ನ ಕಾವ್ಯಗಳನ್ನು ಬರೆದಿರುವನು. ಆದುದರಿಂದಲೇ ಆತನಿಗೆ ಷಟ್ಪದಿ ನಿರ್ಮಾಪಕನೆಂಬ ಪ್ರತೀತಿಯುಂಟಾಗಿರುವುದು. ಹರಿಶ್ಚಂದ್ರ ಕಾವ್ಯ ಸಂಗ್ರಹಕಾರರು ಕಾವ್ಯಸಂಗ್ರಹದ ಪೀಠಿಕೆಯಲ್ಲಿ "ರಾಘವಾಂಕನು ಷಟ್ಪದಿ ನಿರ್ಮಾಣಕರ್ತೃವೆಂದು ಹೇಳಲಾರದಿದ್ದರೂ ಷಟ್ಪದಿ ಸಂಪ್ರದಾಯ ಸ್ಥಾಪಕನೆಂದು ಹೇಳಬಹುದು. ಚಂಪೂ ಸಂಪ್ರದಾಯಕ್ಕೆ ಪಂಪಾದಿಯಾದ

ಜೈನಕವಿಗಳು ಹೇಗೆ ಸ್ಥಾಪಕರಾದರೋ ಹಾಗೆ ಷಟ್ಪದಿ ಸಂಪ್ರದಾಯಕ್ಕೆ ಅದರಲ್ಲಿಯೂ ವಾರ್ಧಕಷಟ್ಪದಿ ಸಂಪ್ರದಾಯಕ್ಕೆ ರಾಘವಾಂಕಾದಿಯಾದ ವೀರಶೈವ ಕವಿಗಳು ಸ್ಥಾಪಕರಾದರೆಂದು ಹೇಳಬಹುದು. ಷಟ್ಪದಿಕಾರರಿಗೆ ಇದಕ್ಕಾಗಿ ಬರುವ ಕೀರ್ತಿಯಲ್ಲಿ ಒಂದು ದೊಡ್ಡ ಭಾಗವು ಈ ಸಂಪ್ರದಾಯಕ್ಕೆ ಮೂಲಕರ್ತರಲ್ಲಿ ಒಬ್ಬನಾದ ರಾಘವಾಂಕನಿಗೆ ಸಲ್ಲತಕ್ಕದ್ದಾಗಿದೆ'' ಎಂದು ಹೇಳಿದ್ದಾರೆ.

## ಕಾವ್ಯವಿಮರ್ಶೆ

ರಾಘವಾಂಕನ ಇತರ ಕಾವ್ಯಗಳನ್ನೂ ಹರಿಶ್ಚಂದ್ರ ಕಾವ್ಯವನ್ನೂ ಅನೇಕ ಪಂಡಿತರು ವಿಮರ್ಶಿಸಿರುವರು. ಹರಿಶ್ಚಂದ್ರ ಕಾವ್ಯವು ಉತ್ತಮ ಕಲಾಕೃತಿಯೆಂಬ ವಿಷಯದಲ್ಲಿ ಬಹುಜನರ ಅಭಿಪ್ರಾಯವು ಏಕೀಭವಿಸಿರುವುದು. ಹರಿಶ್ಚಂದ್ರ ಕಾವ್ಯವನ್ನು ವಿಮರ್ಶಿಸುತ್ತ ಶ್ರೀಯುತ ಕೆ. ವಿ. ಪುಟ್ಟಪ್ಪನವರು, ''ಏಳೆಂಟು ಶತಮಾನಗಳ ಹಿಂದಿದ್ದ ರಾಘವಾಂಕನು ಅಂದಿನ ಸಾಹಿತಿಗಳ ಅಭಿರುಚಿಗೆ ತಕ್ಕಂತೆ ಕಾವ್ಯರಚನೆ ಮಾಡಿದ್ದಾನೆ. ಉತ್ತಮವಾಗಿಯೇ ರಚಿಸಿದ್ದಾನೆ. ಆದರೆ ಇಪ್ಪತ್ತನೆಯ ಶತಮಾನದ್ದು ಭಿನ್ನರುಚಿ. ಅಂದಿನ ಮಂದಿಯ ಮತ್ತು ಮನೀಷಿಗಳ ಅಭಿರುಚಿಗೆ ಯೋಗ್ಯವೆಂದು ತೋರಿರಬಹುದಾದ ಶಬ್ದಾಲಂಕಾರಗಳು, ಅರ್ಥಾಲಂಕಾರಗಳು, ಶ್ಲೇಷಗಳು, ಕವಿಸಮಯಗಳು, ದೀರ್ಘ ವರ್ಣನೆಗಳು, ಇಂದಿನ ನಮಗೆ ಅಷ್ಟೇನೂ ಕಾವ್ಯವಾಗಿ ಕಾಣುವುದಿಲ್ಲ. ಆದ್ದರಿಂದ ಶತಮಾನಗಳ ಆಚೆ ನಿಂತು ತನ್ನ ಸುದೀರ್ಘ ಬಾಹುಗಳಲ್ಲಿ ಫಲಕುಸುಮಗಳಿಂದ ತುಂಬಿದ ಸ್ವರ್ಣಸ್ಥಾಲಿಯನ್ನು ಹಿಡಿದೆತ್ತಿ ಆಶೀರ್ವಾದಪೂರ್ವಕವಾಗಿ ನಮ್ಮೆಡೆಗೆ ಚಾಚಿರುವ ರಾಘವಾಂಕನಿಂದ ನಾವು ಬೇಕಾದ ಹಣ್ಣು ಹೂವುಗಳನ್ನು ತೆಗೆದುಕೊಂಡು ಆತನಡಿಗೆ ಮೈಚಾಚಿ ಕೃತಜ್ಞರಾಗುವುದು ನಮ್ಮ ಕರ್ತವ್ಯ. ಹಾಗೆ ಮಾಡಿದರೆ ಆತನನ್ನು ಅಗೌರವಿಸಿದಂತಾಗುವುದಿಲ್ಲ. ಅದಕ್ಕೆ ಬದಲಾಗಿ ಆತನ ಕೀರ್ತಿಕಲಶಕ್ಕೆ ಚಿನ್ನದ ಮುಲಾಮು ಕೊಟ್ಟಂತಾಗುವುದು.

''ರಾಘವಾಂಕನ ಕಥನಕೌಶಲ, ದೃಶ್ಯವಿಭಾಗ ರೀತಿ, ಪಾತ್ರಗಳ ಕ್ರಿಯೆ ಮತ್ತು ಅಭಿನಯ ಕ್ರಿಯೆಗಳ ವರ್ಣನೆ, ಅವರ ಸಂಭಾಷಣೆ, ಶೋಕ, ಕ್ರೋಧ, ಸತ್ಯಸಂಧತೆ, ಕರ್ತವ್ಯಪರಾಯಣತೆ, ಶ್ರದ್ಧೆ, ಭಕ್ತಿ—ಒಟ್ಟಿನಲ್ಲಿ ಕಾವ್ಯದಲ್ಲಿ ಚೆಲ್ಲನೂಸಿರುವ ನಾಟಕೀಯತೆ ಎಲ್ಲವೂ ಒಂದೊಂದಾಗಿ ಒಂದರ ಮೇಲೊಂದಾಗಿ ನುಗ್ಗಿಬಂದು, ನಮ್ಮನ್ನು ಭಾವನಾಪ್ರಪಂಚಕ್ಕೆ ಕೊಂಡೊಯ್ದು ನಗಿಸಿ, ಅಳಿಸಿ, ಸಿಟ್ಟುಗೊಳಿಸಿ, ಸಂತೋಷಪಡಿಸಿ, ತಣಿಸುತ್ತವೆ. ರಾಘವಾಂಕನು ಸಂಪೂರ್ಣವಾಗಿ ನಮ್ಮವನಾಗುತ್ತಾನೆ. ನಾವು ಸಂಪೂರ್ಣವಾಗಿ ಆತನವರಾಗುತ್ತೇವೆ. ವಸಿಷ್ಠ, ವಿಶ್ವಾಮಿತ್ರ, ಹರಿಶ್ಚಂದ್ರ, ಚಂದ್ರಮತಿ,

ಲೋಹಿತಾಶ್ವ, ನಕ್ಷತ್ರಕ, ವೀರಬಾಹು, ಹಂಪೆ, ಕಾಶಿ, ಇಂದ್ರನ ಆಸ್ಥಾನ, ಮಣಿಕರ್ಣಿಕೆಯ ಸ್ಮಶಾನ, ಎಲ್ಲವೂ ಸಜೀವವಾಗಿ ಆವಿರ್ಭೂತವಾಗಿ ಸತ್ಯವಾಗಿ ನಮ್ಮ ಕಣ್ಣಮುಂದೆ ನಲಿಯುತ್ತವೆ'' ಎಂದು ಹೇಳಿದ್ದಾರೆ.

## ಕಥಾಸಾರಾಂಶ

ದೇವೇಂದ್ರನ ಓಲಗದಲ್ಲಿ ವಸಿಷ್ಠವಿಶ್ವಾಮಿತ್ರರ ಸಂವಾದವು ತಲೆದೋರಿ ಕೊನೆಗೆ ವಿಶ್ವಾಮಿತ್ರನ ಪ್ರತಿಜ್ಞೆಯಿಂದ ನಿರಪರಾಧಿಯಾದ ಹರಿಶ್ಚಂದ್ರನು ಬಹು ಕಷ್ಟಪರಂಪರೆಗೆ ಗುರಿಯಾಗುವನು. ವಿಶ್ವಾಮಿತ್ರನು ಮುನಿಗಳನ್ನು ಹರಿಶ್ಚಂದ್ರನಲ್ಲಿಗೆ ಕಳುಹಿ ಹರಿಶ್ಚಂದ್ರನಿಂದ ಬಹುಸುವರ್ಣಯಾಗವನ್ನು ಮಾಡಿಸುತ್ತಾನೆ—ರಾಜನು ಬೇಡಿದವರಿಗೆ ಬೇಡಿದ ಧನವನ್ನು ಕೊಟ್ಟು ಕಳುಹಿಸಿದ ಮೇಲೆ, ವಸಿಷ್ಠನು ಹೋದ ಹೊತ್ತನ್ನರಿತು ವಿಶ್ವಾಮಿತ್ರನು ಹರಿಶ್ಚಂದ್ರನಲ್ಲಿಗೆ ಬರುತ್ತಾನೆ. ಹರಿಶ್ಚಂದ್ರನು ಆ ಋಷಿಯನ್ನು ಸತ್ಕರಿಸಿ ಬೇಡಿದರ್ಥವ ಬೆಸಸಿ ಎನಲು–'ಪಿರಿಯ ಕರಿಯಂ ಮೆಟ್ಟಿ ಕವಡೆಯಂ ಮಿಡಿದಡೆನಿತುದ್ದಕ್ಕೆ ಹೋಹುದದರ ಸರಿಯೆನಿಸಿ ಸುರಿದ ಹೊಸ ಹೊನ್ನ ರಾಶಿಯನೀವುದರಸ' ಎಂದು ಬೇಡಿ, ಬೇಡಿದ ಧನವನ್ನು ಕೊಟ್ಟಾಗ ಅದನ್ನು ಒಯ್ಯದೆ ಬೇಕಾದಾಗ ತರಿಸಿಕೊಳ್ಳುವೆನೆಂದು ವಿಶ್ವಾಮಿತ್ರನು ಹರಿಶ್ಚಂದ್ರನಲ್ಲಿಯೇ ಬಿಟ್ಟು ಹೋಗುತ್ತಾನೆ; ಮತ್ತು ಅವನ ರಾಜ್ಯದಲ್ಲಿ ಖಗಮೃಗಗಳ ಕಾಟವನ್ನುಂಟುಮಾಡಿ ಬೇಟೆಯ ನೆವದಿಂದ ತನ್ನಾಶ್ರಮದ ಕಡೆಗೆ ಬರಮಾಡಿಕೊಳ್ಳುತ್ತಾನೆ. ಮಾಯಾವರಾಹವನ್ನು ಸೃಜಿಸಿ, ಅದರ ಬೇಟೆಯಿಂದ ಹರಿಶ್ಚಂದ್ರನು ಆಯಾಸಗೊಂಡಾಗ ಚಂಡಾಲ ಕನ್ಯೆಯರನ್ನು ಸೃಷ್ಟಿಸಿ, ಅವನಲ್ಲಿಗೆ ಕಳುಹಿ, ಆ ಕನ್ಯೆಯರಿಂದ ಜಗಳವಾಡಿಸುತ್ತಾನೆ. ಹರಿಶ್ಚಂದ್ರನು ಆ ಹೊಲತಿಯರನ್ನು ಚಮ್ಮಟಿಗೆಯಿಂದ ಹೊಡೆಸಲು ಅವರು ವಿಶ್ವಾಮಿತ್ರನಲ್ಲಿ ಹೋಗಿ ಮೊರೆಯಿಡುತ್ತಾರೆ. ಅದನ್ನು ತಿಳಿದು ತನ್ನ ಮನೋರಥ ಸಿದ್ಧಿಸಿತೆಂದು ಮುನಿಯು ಕೋಪಾಟೋಪದಿಂದ ರಾಜನಲ್ಲಿಗೆ ಬರುತ್ತಾನೆ. ಆಗ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ನಮಸ್ಕಾರಮಾಡಲು, ಅವನನ್ನು ಒದ್ದು ಸಲ್ಲದ ಆರೋಪಗಳನ್ನು ಹೊರಿಸಿ, ಅವನ ರಾಜ್ಯವನ್ನೂ ವಸ್ತ್ರಾಭರಣಗಳನ್ನೂ ಸೆಳೆದುಕೊಳ್ಳುತ್ತಾನೆ. ಆಮೇಲೆ ಯಾಗ ಮಾಡಿದಾಗ ತನಗೆ ಕೊಟ್ಟ ದಕ್ಷಿಣಾದ್ರವ್ಯವನ್ನು ಕೊಟ್ಟು ಹೆಜ್ಜೆಯಿಡು ಎನ್ನುತ್ತಾನೆ. ಆಗ, ನಾಲ್ವತ್ತೆಂಟು ದಿನಗಳ ಅವಧಿಯನ್ನು ಕೇಳಿಕೊಂಡು ವಿಶ್ವಾಮಿತ್ರನ ತೆರಕಾರನಾದ ನಕ್ಷತ್ರಕನೊಡನೆ ಹರಿಶ್ಚಂದ್ರನು ಕಾಶಿಗೆ ಬರುತ್ತಾನೆ. ಅವಧಿ ಸಮೀಪಿಸಲು ಉಪಾಯಾಂತರವಿಲ್ಲದೆ ಸತಿಪುತ್ರರನ್ನು ಮಾರಿ, ಕಡೆಗೆ ತನ್ನನ್ನು ಚಂಡಾಲನಾದ ವೀರಬಾಹುಕನಿಗೆ ಮಾರಿಕೊಂಡು, ಕೊಟ್ಟ ಅವಧಿಯೊಳಗೆ ಧನವನ್ನು ಕೊಟ್ಟು ಋಣಮುಕ್ತನಾಗುತ್ತಾನೆ.

ದಾಸಿಯಾಗಿರುವ ಚಂದ್ರಮತಿಯು ಹಾವು ಕಡಿದು ಸತ್ತ ಮಗನನ್ನು ಸುಡುಗಾಡಿಗೆ ಹೊತ್ತುತಂದು ಯಾರಿಗೂ ಕಾಣದೆ ಸುಡಬೇಕೆಂದು ಪ್ರಯತ್ನ ಮಾಡುತ್ತಿರಲು ಅದನ್ನು ತಿಳಿದು, ವೀರಬಾಹುಕನಾಜ್ಞೆಯಂತೆ ಸುಡುಗಾಡು ಕಾಯುತ್ತಿದ್ದ ಹರಿಶ್ಚಂದ್ರನು "ಸುಟ್ಟೆಯಾದಡೆ ವೀರಬಾಹುಕನಾಣೆ ಸುಂಕ ಕೊಟ್ಟಲ್ಲದೆ ಸುಡಬೇಡ" ಎಂದು ಮುಟ್ಟಿಗೆಯ ಮೇಲಿದ್ದ ಶವದ ಕಾಲನ್ನು ಹಿಡಿದು ಬಿಸುಡುವನು. ಆಗ ಚಂದ್ರಮತಿಯು ಶೋಕದಿಂದ "ನಿನ್ನ ಶಿಶುವಿನೋಪಾದಿ ಸುಡಲನುಮತವನಿತ್ತು ಕರುಣಿಸು ತಂದೆ" ಎಂದು ಬೇಡಿಕೊಳ್ಳುತ್ತಾಳೆ. ಆಗ ಹರಿಶ್ಚಂದ್ರನು "ನಿನ್ನ ತಾಳಿಯನ್ನಾದರೂ ಅಡವಿರಿಸಿ ದಹನ ಕ್ರಿಯೆಯನ್ನು ನಡಸಿಕೋ; ಇಲ್ಲವೆ ಒಡೆಯನನ್ನಾದರೂ ಬೇಡಿ ತಾ". ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವನು. ಚಂದ್ರಮತಿ ಒಡೆಯನ ಮನೆಗೆ ಹೋಗುತ್ತಿರುವಾಗ ಮಾರ್ಗಮಧ್ಯದಲ್ಲಿ ವಿಶ್ವಾಮಿತ್ರನ ಕೃತ್ರಿಮದಿಂದ ಕಾಶೀರಾಜಪುತ್ರನ ಕೊಲೆಯ ಆರೋಪವನ್ನು ಹೊತ್ತು, ರಾಜನಿಂದ ಮರಣದಂಡನೆಗೆ ಗುರಿಯಾಗುತ್ತಾಳೆ. ರಾಜನಿಂದ ಆಜ್ಞಪ್ತನಾದ ವೀರಬಾಹುಕನು ಚಂದ್ರಮತಿಯನ್ನು ವಧಿಸಲು ತನ್ನ ಸೇವಕನಾದ ಹರಿಶ್ಚಂದ್ರನಿಗೆ ನಿಯಮಿಸುತ್ತಾನೆ. ಅವನು ಚಂದ್ರಮತಿಯನ್ನು ರುದ್ರಭೂಮಿಗೆ ಎಳೆತಂದು ಮೂಡ ಮುಂತಾಗಿ ಕುಳ್ಳಿರಿಸಿ, ಖಡ್ಗದಿಂದ ಹೊಡೆಯಲು ಸಿದ್ಧನಾಗಿ "ನಿನ್ನ ಇಷ್ಟದೇವರ ನೆನೆದುಕೋ" ಎನ್ನುತ್ತಾನೆ. ಆಕೆಯ ಹರಕೆಗಳನ್ನು ಕೇಳಿ ಬೆರಗಾಗಿ ಹರಿಶ್ಚಂದ್ರನು ತನ್ನ ಪತಿಯಾದ ವೀರಬಾಹುಕನಾಜ್ಞೆ ಉಳಿದರೆ ಸಾಕೆನುತ್ತ ತನ್ನ ಸತಿಯ ತಲೆಯನ್ನು ಕೈಯಾರೆ ಕಡಿಯಲನುವಾಗುವನು. ಅವನು "ಹೊಡೆದ ಕಡುಗದ ಬಾಯ ಕಡೆಯ ಹೊಡೆಗುಳನಾಂತು ಮಡದಿಯೆಡೆಗೊರಳ ನಡುವಡಸಿ ಕೆಂಜೆಡೆಯ ಶಶಿಕಳೆಯ ಸುರನದಿಯ, ಬಿಸುಗಣ್ಣ ಫಣಿಕುಂಡಲದ, ಪಂಚಮುಖದ, ಎಡದ ಗಿರಿಜೆಯ ತಳಿದ ದಶಭುಜದ ಪುಲಿದೊಗಲಿನುಡಿಗೆಯ, ಮಹಾವಿಷ್ಣುನಯನವೇರಿಸಿದ ಮೆಲ್ಲಡಿಯ ಕಾಶೀರಮಣ ವಿಶ್ವನಾಥ ಮೂಡಿದನು." ಮುರಹರಾದಿ ದೇವತೆಗಳೂ ವಸಿಷ್ಠವಿಶ್ವಾಮಿತ್ರರೂ ಅಲ್ಲಿ ನೆರೆದರು. ದೇವತೆಗಳು ಹರಿಶ್ಚಂದ್ರನಿಗೆ ಅನೇಕ ವರಗಳನ್ನು ಕೊಟ್ಟು ಸತ್ತ ಮಗನನ್ನು ಬದುಕಿಸಿದರು. ಪಾರ್ವತೀಪತಿಯು ವಿಶ್ವಾಮಿತ್ರನನ್ನು ಕುರಿತು "ಏನೇನ ಕೊಡುವೆನೆಂದೆಂದೆಯದ ಕೊಡು ಬೇಗದಿಂ" ಎನಲು, ವಿಶ್ವಾಮಿತ್ರನು ಐವತ್ತುಕೋಟಿ ವರ್ಷ ಬಿಡದೆ ಮಾಡಿದ ತಪಃಫಲದಲ್ಲಿ ಅರ್ಧವನ್ನು ಅವನಿಗೆ ಕೊಟ್ಟು, ಅಯೋಧ್ಯಾಪುರಕ್ಕೆ ಕರೆದೊಯ್ದು ಪಟ್ಟಾಭಿಷೇಕ ಮಾಡಿದನು.

## ಕವಿ ಪ್ರತಿಜ್ಞೆ

ಚತುರ ಕವಿರಾಯ ಹಂಪೆಯ ಹರೀಶ್ವರನ ವರಸುತನೂ, ಉಭಯ ಕವಿಕಮಲರವಿಯೆಂಬ ಬಿರುದನ್ನು ಪಡೆದವನೂ ಆದ ರಾಘವಾಂಕ

ಮಹಾ ಕವಿಯ ಭಾಷೆಯು (ಪ್ರತಿಜ್ಞೆ) ಸರ್ವಕವಿಗಳಿಗೆ ಆದರ್ಶವಾಗಿರುವುದು :—

ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ
ಪರರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ
ಪರರ ದೈವವ ನುತಿಸದಿಪ್ಪ ಭಾಷೆ ಪರರ ಕ್ಲೇಶವೀಕ್ಷಿಸದ ಭಾಷೆ।
ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ
ಪರರ ವಧುವಂ ಕಂಡು ಮನವೆಳಸದಿಹ ಭಾಷೆ
ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು (೧-೧೬)

## ಗ್ರಂಥಪಾಠ

ಈ ಪುಸ್ತಕದ ಪಾಠವನ್ನು ಮುಖ್ಯವಾಗಿ ೪ ಮುದ್ರಿತ ಗ್ರಂಥಗಳ ಸಹಾಯದಿಂದ ಸಿದ್ಧಪಡಿಸಲಾಗಿದೆ. (೧) ಕರ್ಣಾಟಕ ಕಾವ್ಯಕಲಾನಿಧಿಯ ಮುದ್ರಿತ ಪ್ರತಿ. (೨) ಮೈಸೂರು ವಿಶ್ವವಿದ್ಯಾನಿಲಯದವರ ಹರಿಶ್ಚಂದ್ರ ಕಾವ್ಯಸಂಗ್ರಹ. (೩) ಶ್ರೀ ಎನ್. ಬಸವಾರಾಧ್ಯ, ಎಂ.ಎ., ಶ್ರೀ ಪಂಡಿತ ಎಸ್. ಬಸಪ್ಪ ಇವರ ಸಂಪಾದಕತ್ವದಲ್ಲಿ ಮುದ್ರಿತವಾದ ಹರಿಶ್ಚಂದ್ರ ಕಾವ್ಯ. (೪) ಬಳ್ಳಾರಿ ಪ್ರಾಂತದಲ್ಲಿ ಪ್ರಚಾರದಲ್ಲಿರುವ ಪೂರ್ವಕಾಲದ ಮುದ್ರಣ. ನಮಗೆ ಸಹಾಯವಾದ ಈ ಗ್ರಂಥಗಳ ಸಂಪಾದಕರಿಗೂ ಪ್ರಕಾಶಕರಿಗೂ ಕೃತಜ್ಞತಾಪೂರ್ವಕ ವಂದನೆಗಳು.

ಬಳ್ಳಾರಿ,
೯ನೆಯ ಮಾರ್ಚ್, ೧೯೫೭.

ವೈ. ನಾಗೇಶ ಶಾಸ್ತ್ರಿ,
ಎಂ. ಜಿ. ವೆಂಕಟೇಶಯ್ಯ,
ಸಂಪಾದಕರು.



ಶ್ರೀ ವಿರೂಪಾಕ್ಷಸ್ವಾಮಿಯ ದೇವಾಲಯ, ಹಂಪೆ

## ರಾಘವಾಂಕ ವಿರಚಿತ

# ಹರಿಶ್ಚಂದ್ರ ಕಾವ್ಯಂ

---

## ೧

ದೇಶಾಧಿಪತಿ ಹರಿಶ್ಚಂದ್ರ ಭೂಪನ ಸತ್ಯ
ವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದೊಳು
ಕೌಶಿಕ ವಸಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿತಂದು ॥ ಸೂಚನೆ॥

ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ ।
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ ಸಂತೋಷದಿಂದ ॥ ೧ ॥

ಜಡೆಯಿಡುಕು ಱಿಡೆಯೆಡೆಯ್ದೆಳಡಿಯಿಡುವ ಕಡಲತಡಿ
ವಿಡಿದುಡುಗಡಣದೊಡೆಯು ನೊಡಲೊಡಕು ನಡನಡುಗಿ
ಬಡಕರಿಸಿ ಮಿಡು ಮಿಡುಕಲಡಿಗಡಿಗೆ ಜಡಿಜಡಿದು ಪಡಿಪಡಿಪ ನಡುನಯುನದ ।
ಮಡುವಿಡುವ ಜಲಧಿಯಂ ಕಡೆವ ಕಡೆಯೊಳ್ಮೂಡಿ
ಘುಡುಘುಡಿಸಿ ಪಡೆಯು ಪಡಲಿಡೆ ಕೆಡಪುವನ ತುಡುಕಿ
ಪಿಡಿದೊಡನೆ ಪೊಸೆದು ಕೊರಳೆಡೆ ತೊಡೆದ ಹಂಪೆಯು ಮೃಡಂ ಬಿಡದೆ ಸಲಹುಗೆಮ್ಮ ॥ ೨ ॥

ಸೋಮ ಸೋಮವಿಭೂಷ ಸುರರಾಜ ರಾಜರಿಪು
ಭೀಮ ಭೀಮಪೃಥುಲ ಭುಜ ಶಮನ ಶಮನಜಿತ
ಕಾಮ ಕಾಮವಿದೂರ ಗುಣಗಾತ್ರ ಗಾತ್ರಪಿಂಗಳ ಜಟಾರಾಮ ರಾಮ।
ನಾಮ ನಾಮಯ ಗರಳಧರ ಧರ ಸ್ಥಿರಪುಣ್ಯ
ಧಾಮ ಧಾಮಪ್ರಬಲ ಬಲವಂತ ಶ್ರುತಿಸಕಲ
ಸಾಮ ಸಾಮಸ್ತುತ್ಯ ಪಂಪಾಧಿಪತಿ ವಿರೂಪಾಕ್ಷ ಕರುಣಿಸುವದೆಮಗೆ ॥ ೩ ॥

ನಿರುಪಮ ನಿರಾಲಂಬ ನಿತ್ಯ ನಿರ್ಭಯ ನಿರಾ
ವರಣ ನಿರ್ಮಾಯ ನಿರ್ಮಳ ನಿರ್ವಿಕಲ್ಪ ನಿಜ
ನಿರಸೂಯ ನಿಶ್ಚಿಂತ ನಿರ್ಲೇಪ ನಿರ್ಗುಣ ನಿರಾಧಾರ ನಿತ್ಯತೃಪ್ತ ।
ನಿರವದ್ಯ ನಿರ್ಭಿನ್ನ ನಿರ್ದ್ವಂದ್ವ ನಿರ್ದೋಷ
ನಿರಪೇಕ್ಷ ನಿಷ್ಕಾಮಿ ನಿಷ್ಕಳ ನಿರಾಕಾರ
ನಿರಜ ನಿರಹಂಕಾರ ನಿರ್ಮಳ ನಿರಾಳ ಪಂಪಾವಿರೂಪಾಕ್ಷ ಶರಣು ॥ ೪ ॥

ನುತಕಾಯ ಜಿತಮಾಯ ಪುರಮಥನ ವರಕಥನ
ಧೃತಸೋಮ ಗತಕಾಮ ಚಿರಲಿಂಗ ವರಸಂಗ
ಶ್ರುತಿದೂರ ಮತಿಸಾರ ಗಿರಿಜೇಶ ಸ್ಮರನಾಶ ದುರಿತಹರ ಕರುಣಾಕರ ।
ಪ್ರತಿರಹಿತ ನುತವಿಹಿತ ಶರಣಮಯ ಭರಿತಜಯ
ವಿತತಗಣ ಚತುರಗುಣ ಸುರರಾಜ ವರತೇಜ
ಸಿತಗಳನೆ ಯತಿಬಳನೆ ಶರಣು ಸದ್ಗುರು ಮೂರ್ತಿ ಪಂಪಾಪುರಾಧೀಶ್ವರ ॥ ೫ ॥

ತರುಣ ಶಶಿ ಮಲ್ಲಿಕಾಮಾಲೆ ಕೆಂಜೆಡೆದುರುಬು
ವುರಿಗಣ್ಣು ಕಸ್ತೂರಿಯಬೊಟ್ಟು ಕಪಿಲಾಕ್ಷಿ ಸರ
ಸಿರುಹನಯನಂ ನಾಗಕುಂಡಲಂ ಪೊನ್ನೋಲೆಯೆಸೆವ ಕಱಿ ರನ್ನದಾಳಿ ।
ಸುರುಚಿರಸ್ಫಟಿಕ ಹಾರಂ ಹಾರವುಪ್ಪ ಕುಚ
ವರ ಪಯೋಧರಮಜಿನವಸನಂ ದುಕೂಲವಾ
ಕರ ಶೂಲಮಬುಜದೊಡರಂ ನೇವುರಂ ವೆಱೆವ ದೇವ ನೆಮ್ಮಂ ಸಲಹಲಿ ॥ ೬ ॥

ವಾಣಿಯುಱುವಿನ ಬೆಳಗು ಮುಕುತಿವನಿತೆಯ ಮುಡಿಯ
ಮಾಣಿಕಂ ಸರ್ವಮಂತ್ರಾದಿ ಪಂಚಾಕ್ಷರಿಯ
ಪ್ರಾಣ ಮಂಗಳದ ಮನೆ ದೇವಲೋಕದ ಜನ್ಮಭೂಮಿ ತಾವರೆಗಣ್ಣಿನ ।
ರಾಣಿಯೆಸೆವೋಲೆ ವಾಗ್ಯಂ ಸರ್ವಸಿದ್ಧಿಗಳ
ತಾಣಂ ವಿರೂಪಾಕ್ಷನುನ್ನತೈಶ್ವರ್ಯದ
ಕ್ಷೋಣಿ ಪಂಪಾಂಬಿಕೆ ಮದೀಯ ಮತಿಗೀಗೆ ಪ್ರಸನ್ನತೆಯನುತ್ಸವದೊಳು ॥ ೭ ॥

ಶ್ರೀಯುಮಾವರನಿಂದುಧರನಭಯಕರನುಗ್ರ
ಮಾಯಾರಿ ಭಕ್ತಭಯಹಾರಿಗಂಗಾಧಾರಿ
ವಾಯುಭುಗ್ಭೂಷನುತ್ತಮವೇಷನಘ ತಿಮಿರ ಪೂಷನತಿವಿಗತದೋಷ ।
ಸ್ವಾಯತಾಖಿಲ ಲೋಕನಾಯಕವ್ರಜಪುಣ್ಯ
ದಾಯಕಂ ಹರಿವಿರಿಂಚ್ಯಾದಿ ಪ್ರಮುಖದೇವ
ರಾಯ ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನ ಸಂಪದವನು ॥ ೮ ॥

ಶ್ರೀವಿರೂಪಾಕ್ಷನೊಲು ನಿತ್ಯನಭಿನವಮಹಾ
ದೇವಂ ಜಿತೇಂದ್ರಿಯಂ ನಿಷ್ಕಾಮಿ ದೇಹಗುಣ
ವಾವರಿಸದಮಲ ನಿರ್ಲೇಪ ನಾರೂಢ ಲೌಕಿಕವಂಟದಪ್ರತಿಮನು।
ಭೂವಂದಿತಂ ನಿತ್ಯತೃಪ್ತ ಸಮಸ್ತಮುಖ
ಜೀವಾನುಕಂಪಿಯೆಂದೆನಿಸಿ ರಾಜಿಪ ಸುಕೃತ
ಭಾವಿ ಹಂಪೆಯ ಶಂಕರಪ್ರಭು ಮದೀಯ ಮತಿಗೀಗೆ ಪ್ರಸನ್ನತೆಯನು ॥ ೯ ॥

ಸಕಲಾಗಮಾಚಾರ್ಯನನಸೂಯನಪ್ರತಿಮ
ನಕಳಂಕನುತ್ತಮನನಂತವೇದಾರ್ಥ ಸಾ
ಧಕನವಿದ್ಯಾತೀತನಾನಂದಮಯನು ಶಾಪಾನುಗ್ರಹಾಧಿಕಾರಿ।
ಪ್ರಕಟಿತ ಯಶೋಮಯಂ ಸಪ್ತಲಿಂಗಪ್ರೇಮಿ
ಸುಕವಿ ಹಂಪೆಯ ಮಾದಿರಾಜನ ಜ್ಞಾನದೀ
ಪಿಕೆ ಕವಿವ ಮಾಯಾತಮಂಧವಳಿವಾತೆನ್ನಹೃದಯದೊಳು ಬೆಳಬೆಳಗುಗೆ ॥ ೧೦ ॥

ಭವಭಕ್ತರಲ್ಲದೊಡೆ ಕೈಮುಗಿಯದುದು ತನ್ನ
ಯುವತಿಗಲ್ಲದೆ ಮನವನೆಳಸದದು ಕಾಯದಿ
ಷ್ಟವ ಹಿಡಿಯದಿಹುದು ನಿಂದೆಯನಾಡದಿಹುದು ಪರದೈವವಂ ಬಗೆಯದಿಹುದು।
ಶಿವಲಿಂಗ ಪೂಜೆಯಲಿ ಶಾಂತಿ ಹಿಂಗದುದು ಕಾ
ಮವಿಕಾರವಾದಿ ಷಡುವರ್ಗವಜಿಯದುದು ನೇ
ಮವಿದೆಂದು ನಡೆದ ಹಂಪೆಯ ಮಹಾದೇವ ಗುರುರಾಯ ರಕ್ಷಿಸುಗೆಮ್ಮನು॥ ೧೧ ॥

ಆ ಮಹಾದೇವನುದರದೊಳು ಗುರುಭಕ್ತಿ ನಿ
ಷ್ಕಾಮವಜಿದಾಚಾರ ನೀತಿ ದಯೆ ಜಂಗಮ
ಪ್ರೇಮ ಶಮೆ ದಮೆ ಶಾಂತಿ ದಾಂತಿ ಚಾತುರ್ಯ ಸತ್ಯವುದಾರವೇಕನಿಷ್ಠೆ।
ಸಾಮರ್ಥ್ಯವೆಲ್ಲಾ ಕಲಾಪ್ರೌಢಿ ಸದ್ಗುಣ
ಸ್ತೋಮವೆಲ್ಲಂ ನೆರೆದು ರೂಪಾದುದೆನಿಸುವ ಮ
ಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ ನೆಲಸಿರ್ಕೆನ್ನ ಚಿತ್ತದೊಳಗೆ ॥ ೧೨ ॥

ವೇದನಾಲ್ಕಜೊಳು ಹದಿನಾಱು ಶಾಸ್ತ್ರಂಗಳೊಳು
ವಾದಿಸುವ ಹದಿನೆಂಟು ಪೌರಾಣದೊಳು ಕೇಳ್ದು
ಸಾಧಿಸಿದೆ ತಿಳಿದೆ ತೂಗಿದೆನೊರೆದೆನಾನಯ್ಯ ಶ್ರೀಗುರುವಿರೂಪಾಕ್ಷನ।
ಪಾದವೇ ದಿವ್ಯವಿದಱೊಳಗೊಂದು ಕುಂದಿಲ್ಲ
ಭೇದಿಸುವೊಡೀಕೃತಿಗೆ ಪ್ರತಿಯಿಲ್ಲ ಹಂಪೆಯ ಮ
ಹಾದೇವನಾತ್ಮಜನ ರಾಘವಾಂಕನ ಕಾವ್ಯತರ್ಕಗಿಕ್ಕಿದ ಮುಂಡಿಗೆ ॥ ೧೩ ॥

ಮನವಚನ ಕಾಯದೊಳಗೊಮ್ಮೆಯುಂ ಭಾಳಲೋ
ಚನನನಲ್ಲದೆ ಪೊಗಳದುದ್ಭಟಯ್ಯನ ಮಯೂ
ರನ ಕಾಳಿದಾಸನ ಹಲಾಯುಧನ ಕೇಶಿರಾಜನ ಮಲುಹಣನ ಬಾಣನ ।
ವಿನುತಭೋಜನ ಭಲ್ಲಟನ ಭಾರವಿಯ ಪದವ
ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯ
ನೆನಗೆ ನೆರವಾಗಿ ನಡೆಸುಗೆ ರಸಂಗೊಡುಗೆ ತಿರ್ದುಗೆ ಸುನಿರ್ವಿಘ್ನದಿಂದ ॥ ೧೪ ॥

ಕೃತಿಗೆ ನಾಮಂ ಹರಿಶ್ಚಂದ್ರ ಚಾರಿತ್ರವೀ
ಕೃತಿಗೊಡೆಯನಮಳ ಪಂಪಾವಿರೂಪಾಕ್ಷ ನೀ
ಕೃತಿಗೆ ಪಾಲಕರು ಲೋಕದ ಭಕ್ತಜನವಿದಂ ಪೇಳ್ದಾತನಾರೆಂದೊಡೆ ।
ಚತುರ ಕವಿರಾಯ ಹಂಪೆಯ ಹರೀಶ್ವರನ ವರ
ಸುತನುಭಯಕವಿ ಕಮಲರವಿ ರಾಘವಾಂಕ ಪಂ
ಡಿತನೆಂದೊಡೀ ಕಥಾರಸದ ಲಹರಿಯನು ಬಣ್ಣಿಸದರಾರೀ ಜಗದೊಳು ॥ ೧೫ ॥

ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ
ಪರರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ
ಪರರ ದೈವವ ನುತಿಸದಿಪ್ಪಭಾಷೆ ಪರರ ಕ್ಲೇಶವೀಕ್ಷಿಸದ ಭಾಷೆ ।
ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ
ಪರರ ವಧುವಂ ಕಂಡು ಮನವೆಳಸದಿಹ ಭಾಷೆ
ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು ॥೧೬॥

ವಸುಧಾಧಿಪತಿ ಹರಿಶ್ಚಂದ್ರ ಘನ ಸತ್ಯನೆಂ
ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ
ಹುಸಿಮಾಳ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ ಸತಿಪುತ್ರರ ।
ಅಸುವಂತ್ಯವೆನೆ ನಿಗ್ರಹಂಮಾಡಿಯೊಪ್ಪದಿರೆ
ಶಶಿಮೌಳಿ ಶ್ರೀ ವಿಶ್ವನಾಥ ಭೂಪಂಗೆ ಕರು
ಣಿಸಿ ಸಕಲ ಸಾಮ್ರಾಜ್ಯವಿತ್ತಾತನಂ ಮೆಱೆದ ಕೃತಿ ಪುಣ್ಯದಾಕೃತಿಯಿದು ॥ ೧೭ ॥

ಇದು ಕಥಾಬೀಜವೀಬೀಜಮಂ ಬಿತ್ತಿ ಬೆಳೆ
ಸಿದಪೆನೀ ಕಾವ್ಯವೃಕ್ಷವನಿದಕೆ ನಿಮ್ಮ ಪುಳ
ಕದ ಗೊಬ್ಬರವನು ತಳಿದಾನಂದ ಜಲವೆಱೆದು ಸಲಹಿವುಡಲಱಿದರ್ಥದ ।
ಹೊದಱ ನೆಳಲಂ ಸಾರ್ದು ತುದಿವೊದಲ್ತನಕ ಹೇ
ಱಿದ ಕಾವ್ಯಫಳರಸಂಗಳನು ಸವಿಸುವುದು ಲೋ
ಕದ ಶಿವಪದಾರ್ಚಕರು ಮಾನಿಗಳು ರಸಿಕರುತ್ತಮರು ಸುಕಲಾಪ್ರೌಢರು ॥ ೧೮ ॥

ಚಿತ್ತದೊಳು ವಿಮಲ ರಸ ಭಾವ ಭರಿತಾರ್ಥ ಸಂ
ಪತ್ತು ಸಜ್ಜನರ ಪುಳಕಾಂಕುರಂಗಳನು ಹೊ
ತ್ತಿತ್ತಿ ಯಾನಂದಾಶ್ರುಬಿಂದುವ್ರಜಂಗಳಿಂ ಸಲಹಿ ಮಡಲಱಿದು ಬೆಳೆದು ।
ಮತ್ತೊಂದಱಭಿಲಾಪೆಯುಂ ಮಱೆದು ಕಳೆದು ತ
ಮ್ಮ ತ್ತಲೆಱಗಿಸುವ ಶಿವಭಕ್ತಿವಲ್ಲರಿಯ ಹೊಸ
ಬಿತ್ತಿದೆಂದೆನಿಸುವ ಹರಿಶ್ಚಂದ್ರನೃಪ ಕಥಾವೃತ್ತಾಂತವೆಂತೆಂದೊಡೆ ॥ ೧೯ ॥

ರಸದೊಳರ್ಥದೊಳು ಭಾವದೊಳಲಂಕಾರದೊಳು
ಪೊಸರೀತಿಯೊಳು ಬಂಧದೊಳು ಲಕ್ಷಣದೊಳು ಪದ
ವಿಸರದೊಳು ಕಾವ್ಯದೊಳು ತಪ್ಪುಳ್ಳೊಡಿದಱೊಳಗೆ ಪರರು ಕೈಯಿಕ್ಕದಂತೆ ।
ಸಸಿನೆ ಮಾಡುವುದು ತಿದ್ದುವುದು ಕೊಂಡಾಡಿ ಲಾ
ಲಿಸಿ ಕೇಳ್ವುದೆಲ್ಲಾ ಶಿವಾರ್ಚಕರು ನಾಂ ನಿಮ್ಮ
ಶಿಶುವೆನಗೆ ಕುಂದಿಲ್ಲವೇತಱಿಂದೆನಲೆನ್ನ ಭರಭಾರ ನಿಮ್ಮದಾಗಿ ॥ ೨೦ ॥

ನುಡಿ ಲಕ್ಷಣಾರ್ಥರಸಭಾವಜ್ಞರೆನಿಸುವು
ಗ್ಗಡದ ಕವಿಗಳ ಕಾವ್ಯದಿದಿರಲೇಕೋ ತನ್ನ
ಜಡಮತಿಯೊಳೀಶನಂ ಬಣ್ಣಿಸುವನೆಂದೆನ್ನ ನಗಲಾಗದೇಕೆಂದೊಡೆ ।
ಬಡವರ ಮನೆಯ ಸೊಡರು ಕಂದುವುದೆ ಗುಡ್ಡಿಹಸು
ಬಿಡೆ ಕಱೆದ ಹಾಲು ಕಹಿಯಪ್ಪುದೇ ಎನ್ನ ಕೃತಿ
ಪೊಡವಿಯೊಳು ಸಲುವುದಿದಕೇಕೆ ಸಂಶಯವೆಲವೊ ನಂಬುನೀಡಿದೆ ಕೈಯನು ॥೨೧॥

ನೆರೆದು ನೆರದೀಕೃತಿಯೊಳುಳ್ಳ ಲೇಸುಗಳನಾ
ದರಿಸಬೇಡುಳ್ಳ ತಪ್ಪಂ ಹಿಡಿವುದೆಂದು ನಿ
ಷ್ಠುರ ದುರ್ಜನರ್ಗೆ ವಂದಿಸುವೆನೆನ್ನಂ ಜನಂ ನಗಲಾಗದೆಂತೆಂದೊಡೆ ।
ವರ ಮುಕುರಮಂ ತೊಡೆವರಾರಂಗಳವನು ಬೋ
ಹರಿ ಪರಾಮರ್ಶಲನಾಂಬರವನೊಗೆವರಾರಿದಂ
ಪರಿಕಿಪೊಡೆ ಸುಜನರಂತಿರ್ದಡೀ ಕೃತಿಗವರು ಕುಂದುಗಾಣಿಸಲಱಿಯರು ॥ ೨೨ ॥

ನಡೆವರೆಡಹದೆ ಕುಳಿತರೆಡಹುವರೆ! ಕಾವ್ಯಮಂ
ನಡೆಸುವಾತಂ ರಸಾವೇಶ ಮಱಹಾಲಸ್ಯ
ವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ ಪೊಂದೆರಡೆಡೆಯೊಳು ।
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆವುದೇ! ಬೇನೆಯಱಿಯದ ನೀರಸರನೇಕೆ ಪುಟ್ಟಿಸಿದನಬುಜಭವನು ॥ ೨೩ ॥

ರಸಜೀವ ಭಾವವೊಡಲರ್ಥವವಯುವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಿಗೆಯುಱ ತ
ವೆಸುಲಕ್ಷಣವೆ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ ಸುಕುಮಾರತೆ।
ರಸಿಕತನ ಸುಳಿ ಸುಖಂ ನಿಳಯವಂತಪ್ಪ ಯಿಾ
ಪೊಸಕಾವ್ಯ ಕನ್ಯಕೆಯ ಪಡೆದು ಪಂಪಾಂಬಿಕೆಯ
ರಸ ವಿರೂಪಾಕ್ಷಂಗೆ ಕೊಟ್ಟು ಹಂಪೆಯ ರಾಘವಾಂಕನೇಂ ಕೃತಕೃತ್ಯನೋ ॥ ೨೪ ॥

ವ್ಯಾಕರಣ ಪರಿಣತನಲಂಕಾರ ಪರಿಚಿತನ
ನೇಕರಸ ನಿಪುಣನಭಿದಾನ ಪ್ರವೀಣ ನೆ
ಲ್ಲಾ ಕಳಾಕುಶಲನೆನಿಪಾತಂ ಕವೀಶನವನಿದಿರೊಳೇನುವನಱಿಯದ।
ಕಾಕುದುರ್ಬೋಧಕಂ ಕವಿಯೆನಿಸೆ ಕುಂದೇ ಮ
ಹಾಕವಿಗೆ! ಜಲಶಯನ ವಿಷ್ಣು ಹರಿಯೆನಿಸಿದೊಡೆ
ಭೇಕನುಂ ನೀರೊಳಗೆ ಹರಿಯೆನಿಸಿಕೊಂಡೊಡದಕೊಂದನೇ ಚಕ್ರಧರನು ॥ ೨೫ ॥

ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ ಗಾ
ನವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ ಜಾ
ತಿವಿದಗ್ಧೆಯಿರ್ದೊಡೇಂ ರಸಿಕರಿಲ್ಲದೊಡೆ ಪೊಸಪೂಮಾಲೆಯಿರ್ದೊಡೇನು।
ತವೆ ಮುಡಿವರಿಲ್ಲದೊಡೆ ನಾನಾ ಕಳಾನ್ವಿತರ
ನಿವಹವಿದ್ದೇನಾ ಕಲಾಪ್ರೌಢರಿಲ್ಲದೊಡೆ
ಇವನೆಯ್ದೆ ಬಲ್ಲವನ ಪೂರ್ವ ಮೇಣುಳ್ಳಡವ ದೇವನಲ್ಲದೆ ಮನುಜನೆ ॥ ೨೬ ॥

ಇಳೆಯೊಳೊಂದೂರೊಳೆಂತಕ್ಕೆ ಪುಣ್ಯಾಧೀನ
ದೊಳು ಸಮಂತೊಬ್ಬಿಬ್ಬರಂ ಮೆಚ್ಚಿಸುವನಲ್ಲ
ತಿಳಿದು ಕೇಳದೊಡಱಿಯೆ ಕೇಳ್ದೆನ್ನ ಕಾವ್ಯಾರ್ಥಮಂ ಕಿವಿಯ ಸೆಱಗುಗಳಲ।
ತಳೆದ ಕವಿಗಳ ಗಮಕಿಗಳ ವಾದಿಗಳ ವಾಗ್ಮಿ
ಗಳ ರಸಾವೇಶಿಗಳ ತಲೆದೂಗಿಸುವೆನೆಂದ
ಡುಳಿದ ದುರ್ಜನರು ಮೆಚ್ಚದೊಡೆಂತೆನಲ್ಕದಕೆ ಕೇಳು ಮೇಲುತ್ತರವನು ॥೨೭॥

ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೇ! ಹಗಲ
ಗೂಗೆ ಕಾಣದೊಡೆ ರವಿ ಕಂದುವನೆ! ಕಂಗುರುಡ
ನೇಗ್ಮೆದುವಂ ಕಾಣದೊಡೆ ಮುಕುರ ಕೆಡುವುದೇ ದುರ್ಜನರು ಮೆಚ್ಚದಿರಲು।
ನಾಗಭೂಷಣನ ಕಾವ್ಯಂ ಕೆಡುವುದೇ! ಮರುಳೆ
ಹೋಗಲಾ ಮಾತದೇಕಂತಿರಲಿ ಕಡೆತನಕ
ಮೇಗುತ್ತರೋತ್ತರವನೀವ ಭಾಷೆಗಳನವಧರಿಸುವುದು ಸದ್ಭಕ್ತರು ॥೨೮॥

ಬಗೆವೆರಸಿ ಸಂದಷ್ಟವಾದದಱಿಯೆಂ ಪರೋ
ಕ್ತಿಗಳರ್ಥಮಂ ಕಳುವುದಧಮತನವಱಿದಳುಪಿ
ತೆಗೆದೆನಾದೊಡೆ ಬಳಿಕವರ್ ಮಿಂದನೀರ್ಗೆ ಮುಡಿಯಿಂ ತೆಗೆದ ಪೂಮಾಲೆಗೆ ।
ಉಗುಳ್ದ ತಂಬುಲ ಕುಟ್ಟುಕಳೆದ ವೆಯ್ಯಲಿಗೆಗೆ ಸವಿ
ದೊಗಡಿಸಿದ ಕೂಳ್ಗೆ ಕೈಯಾಂತವಂ ದೇಱೆ ನಂ
ದೆಗವಿಲ್ಲೆನಿಪ್ಪಾ ಪ್ರತಿಜ್ಞೆ ಹಂಪೆಯ ರಾಘವಾಂಕ ನಿನಗಲ್ಲದಹುದೇ ॥೨೯॥

ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೋಱಮಟ್ಟ
ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ
ಕೊಂತಗವಿತೆಯ ತೂಂಬನುರ್ಚಿ ನೆರೆದೂರುಗರ ನಡುವೆ ನಿಜ ನಿಳಯದೊಳಗೆ।
ಮಂತಣಂಗೊಂಡು ಕಾಳ್ಗೆಡೆದೂಳ್ವ ಕವಿಯೆದೆಯ
ಕೊಂತ ಮೂಗಿನ ಕತ್ತಿಯಧಟಕವಿ ನಿಕರ ಚೌ
ದಂತ ಹಂಪೆಯ ರಾಘವಾಂಕ ಪಂಡಿತನುಭಯಕವಿ ಶರಭ ಭೇರುಂಡನು ॥೩೦॥

ಗಿರಿಜಾ ವಿವಾಹಮುಪಮನ್ಯು ಚರಿತಂ ಗಜಾ
ಸುರ ಮಥನ ದಕ್ಷಾಧ್ವರಂ ಕಾಲದಲನ ವಿಷ
ಹರಣ ಪಂಪಾಕ್ಷೇತ್ರ ಭಿಕ್ಷಾಟನಂ ಕಾಮದಹನ ಕಾಶೀವರ್ಣನಂ ।
ಪುರ ವಿಜಯಮಂಧಾಸುರಧ್ವಂಸನಂ ಜಲಂ
ಧರದಹನ ಕಾಳಿಕಾಕಾಂಡದೊಳಗಾದ ಶಂ
ಕರಲೀಲೆಗಳನು ಹಲವಿತಿಹಾಸಕಥನಮಂ ಪೇಳ್ವೆನೀ ಕಾವ್ಯದೊಳಗೆ ॥೩೧॥

ಕೆಳೆತನದ ಬಂಧು ವಿಷಯದ ನಂಟುವೆಱಗುಗಳ
ಬಲದೊಳಾಂ ಕವಿಯೆಂದು ಕವಿರಾಯನೆಂದು ವೆ
ಗ್ಗಳಿಸಿ ಕಾಳ್ಗೆಡೆದಡದ ಸೈರಿಸುವೆನಲ್ಲದಾ ನಂಟನೀಡಾಡಿ ಮಲೆತು ।
ಬಳಿಕ ಕವಿಯೆಂದು ವೈಯಾಕರಣಿಯೆಂದು ವೆ
ಗ್ಗಳಿಸಿ ದನಿಗೈವ ದುಷ್ಕವಿಯ ಗರ್ವದ ಮೂಗ
ನಿಳುಹದಿರನುಭಯಕವಿ ಶರಭ ಭೇರುಂಡ ಹಂಪೆಯ ರಾಘವಂ ಸಭೆಯೊಳು ॥೩೨॥

ಎನಿತು ಸಿರಿಸಾರ್ವಡಂ ಮಾಣ್ಬಡಂ ನಿತ್ಯತ್ವ
ವನುವಪ್ಪಡಂ ಸಾವಡಂ ಮೆಚ್ಚಿ ಹಂಪೆಯರ
ಸನಪೊಗಳ್ವ ನಾಲಗೆಯೊಳನ್ಯ ದೈವವ ಭವಿಗಳಂ ಕೀರ್ತಿಸಿದೆನಾದೊಡೆ ।
ಮನಸಿಜಾರಿಯ ಭಕ್ತನಲ್ಲ ತಾನೆನಿಪ ಬಿರು
ದಿನ ಕವಿಯೆನಿಪ್ಪ ಹಂಪೆಯ ರಾಘವಾಂಕನೊ
ಯ್ಯನೆ ಪೇಳ್ದನೆಂಬಾಗಳೀ ಕೃತಿಯನಾವ ಸಜ್ಜನರು ಕೊಂಡಾಡದಿಹರು ॥೩೩॥

ಧರೆಯಜುಯಲೀ ಕೃತಿಗೆ ಮೊದಲಾದುವುದೆನೆ ತರಳ
ತರ ತರಂಗಾವರ್ತ ಗರ್ತ ನೀಹಾರ ಶೀ
ಕರದ ನಿಕರಂ ಜರಠಕಮಠ ಪಾಠೀನ ಚಯ ಡಿಂಡೀರ ಪಿಂಡ ಷಂಡ ।
ಕರಿ ಮಕರ ನಕ್ರ ಶೈವಾಳ ವಿದ್ರುಮ ರತ್ನ
ವರ ಶಿಂಶುಮಾರ ಬುದ್ಬುದ ತಿಮಿ ತಿಮಿಂಗಿಳೋ
ತ್ಕರ ಜಳೂಕ ವ್ಯಾಳ ಕೋಳಾಹಳ ಧ್ವಾನವೆರಸಿ ಜಲನಿಧಿ ಮೆಱೆದುದು ॥೩೪॥

ಆ ರುಚಿರವನಧಿ ಪರಿವೃತ ಧರಾ ಮಧ್ಯದೊಳು
ಮೇರುವಿನ ದಕ್ಷಿಣಾಶೆಯೊಳು ಕಬ್ಬಿನ ಬಿಲ್ಲ
ವೀರನರಲಂಬಿನಾಡುಂಬೊಲಂ ಸಕಲ ಸುಖಸಂಪದದ ಜನ್ಮಭೂಮಿ ।
ಭಾರತಿಯ ನೆಲೆವೀಡು ಮಂಗಳಂಗಳ ನಿಜಾ
ಗಾರ ಲಕ್ಷ್ಮಿಯ ರಾಜಧಾನಿಯೆನಲೊಪ್ಪುವುದು
ಚಾರುತರ ಲಾಳದೇಶಂ ಪರಮ ಭಕ್ತಿಕೋಶಂ ಶ್ರುತಿಚಯಾದೇಶವು ॥೩೫॥

ಆ ಲಾಳ ದೇಶಮಧ್ಯಸ್ಥಳದೊಳಧಟ ಭೂ
ಪಾಲವೆಸರಂ ತಳೆದ ಪಂಕೇಜ ಸಖ ಕುಲದ
ಪೀಳಿಗೆಯ ರಾಯರ್ಗೆ ವೀರಸಿರಿ ಸಲೆನಲದು ಕೈಗೆಯ್ದು ಜಯ ತವಗದ ।
ಮೇಲಿಟ್ಟ ರತ್ನಸಿಂಹಾಸನದ ಚೆಲುವಿನಿಂ
ತ್ರೈಲೋಕ್ಯದೊಳು ಪ್ರತಿವಿಹೀನವೆನಿಸಿರ್ಪ ಕೀ
ರ್ತ್ಯಾಳಾಪದಿಂದೆಸೆವಯೋಧ್ಯಾಪುರಂ ಮೆಱೆವುದೇನೆಂಬೆನದಱುರವನು ॥೩೬॥

ಕಾಲಭೈರವನ ಕದನದ ಕಳನೊ ಭೂಸತಿಯ
ಭಾಳಾಕ್ಷವೋಪ್ರಳಯ ಕಾಲದಗ್ಗದ ಸಿಡಿಲ
ಹೋಳೊ ರವಿಕುಲದ ವೈರಿಗಳ ಶುಭಕೀರ್ತಿ ಶಶಿಯಂ ಪಿಡಿವ ರಾಹುವಿಪ್ಪ ।
ಹೇಳಿಗೆಯೊ ರಿಪುವಿಪಿನದವ ಹರಿಶ್ಚಂದ್ರ ಭೂ
ಪಾಲನ ಪ್ರಬಳ ಪ್ರತಾಪ ಶರಧಿಯ ಸುಳಿಯೊ
ಹೇಳೆನಲಯೋಧ್ಯಾಪುರದ ದುರ್ಗವೆಸೆದುದು ಭಯಂಕರಾಕಾರದಿಂದ ॥೩೭॥

ಅಟ್ಟಣೆಯೊ ಸುರರ ನಗರಕ್ಕೆ ಧಾಳಿಡಲು ತಂ
ದಿಟ್ಟ ನಿಚ್ಚಣಿಗೆಗಳೊ ಕೊತ್ತಳವೊ ಗಗನದೊಳು
ಬಟ್ಟೆಯಂ ನಡೆದು ಬೆಂಡಾದ ಖಚರರು ಸಾರಲೆಂದಿಟ್ಟ ಭದ್ರಂಗಳೊ
ನಟ್ಟ ಡೆಂಕಣಿಗಳೊ ಹಗೆಗಳನು ದುರ್ಗವಱೆ
ಯಟ್ಟಲೆತ್ತಿದ ಹಲವು ಕೈಯೊ ಪರಿಖೆಯು ಪರ್ವಿ
ನೊಟ್ಟಜೆಯೊ ಪುರದ ಪರಿವೇಷವೊ ಎನಿಸಿತೆಂದಾಗಳಿನ್ನೇವೊಗಳ್ವೆನು ॥೩೮॥

ಸಲೆನಿಲೆ ದಿನೇಶ ವಂಶದ ಲಕ್ಷ್ಮಿ ನೆಲಸಿರ್ಪ
ಜಲಜದೆಸಳ್ಗಳೊ ವೈರಿಗಳ ಭಯಂಕರ ಬೀಜ
ಕುಲದಗೆಯ ಸಾಲೊ ನೆಱೆ ಮೇಲೆತ್ತಿ ಬರ್ಪ ರಿಪು ರಾಯರಂ ಮೋದಿ ಮುಱಿದು।
ಮೆಲಲೆಂದು ದುರ್ಗ ಬಾಯ್ದೆಱೆದೆಸೆವ ದಂತಪ್ರೋ
ತಿಳಿಯಲರಿದೆನಲಯೋಧ್ಯಾಪುರದ ಕೋಂಟೆಯೊಳು
ತಳಿತ ರನ್ನದ ತೆನೆಯು ತೆಕ್ಕೆ ಮಿಕ್ಕೊಪ್ಪಿದವು ಮೇಘಮಂಡಲವ ಬಗಿದು ॥ ೩೯ ॥

ಭರದೊಳಮರಾವತಿಯು ಸೊಬಗನಳಕಾಪುರಿಯು
ಸಿರಿಯು ಮಧುರಾ ಪುರದ ಮಂಗಳವ ಶೋಣಿತಾ
ಪುರದ ದರ್ಪವನು ಲಂಕಾಪುರದ ಜಸವ ಯಮಪುರದ ರೌದ್ರತ್ವವ।
ಉರಗೇಂದ್ರಪುರದ ರಚನೆಗಳನಿಂದ್ರಪ್ರಸ್ಥ
ಪುರದ ಬಲವಂ ಹಿಳಿದು ಬಳಿದು ಕರುವಂ ಕಟ್ಟಿ
ಸರಸಿಜದ ಕಂದನೀ ಪುರವನೆಱೆಯದೆ ಮಾಣನೆನಿಸಿತಂತಾ ದುರ್ಗವು ॥೪೦॥

ಸುರಪತಿಯ ಭೋಗ ವಹ್ನಿಯ ತೇಜವಂತಕನ
ಭರದದಟು ನೈರುತಿಯ ಕಾಯ್ಪು ರತ್ನಾಕರೇ
ಶ್ವರನ ಗಂಭೀರವನಿಲನ ಬಲಂ ವಿತ್ತಪನ ಸಿರಿ ರುದ್ರನುಗ್ರತ್ವವು।
ತರಣಿಯ ಪ್ರಭೆ ಧರೆಯ ಧೈರ್ಯ ಚಂದ್ರನ ಶಾಂತಿ
ವೆರಸಿ ರೂಪಾದುದೆನಿಸುವ ಹರಿಶ್ಚಂದ್ರ ಭೂ
ವರನಾ ಪುರಕ್ಕೊಡೆಯನರಿಶರಧಿ ವಡಬನಾರಾತಿ ಗಜ ಪಂಚಾಸ್ಯನು ॥ ೪೧ ॥

ತನು ರುಚಿಯ ಮುಂದೆ ದಿನಪನ ಕಾಂತಿ ಕಪ್ಪಕ
ಪ್ಪನೆ ಕೋಪದಿದಿರೊಳೂರ್ವಾನಳಂ ತಣ್ಣತ
ಣ್ಣನೆ ಕೊಡುವ ಕೈಯಿದಿರೊಳಮರತರು ಮೆಲ್ಲಮೆಲ್ಲನೆ ಮೋಹನವನಪ್ಪಿದ।
ಘನರೂಪಿನಿದಿರೊಳಂಗಜ ರೂಪು ನೊಪ್ಪನೊ
ಪ್ಪನೆ ಗಭೀರತೆಯಿದಿರೊಳಂಬುನಿಧಿ ತೆಳ್ಳತೆ
ಳ್ಳನೆ ಶಾಂತಿಯಿದಿರ ಶಶಿ ಬೆಚ್ಚಬೆಚ್ಚನೆಯೆನೆ ಹರಿಶ್ಚಂದ್ರನೆಸೆದಿರ್ದನು ॥ ೪೨ ॥

ಧರೆಯೊಳು ಹರಿಶ್ಚಂದ್ರ ಭೂಭುಜಂ ತನ್ನ ಸಾ
ರ್ದರ ಬೇಡಿದರ ಬಯಸಿದರ ಸೋಂಕಿದರ ಬೆರಸಿ
ದರನು ತನ್ನಂತೆ ಮಾಳ್ಪುನ್ನತಿಕೆಯಂ ಕಂಡು ನಾಚಿ ಸಿಗ್ಗಾಗಿ ಸೆಡೆದು।
ಮರನಾಯ್ತು ಚಂದನಂ ಸ್ವರ್ಗಸ್ಥವಾಯ್ತು ಸುರ
ತರು ಮೂಗುವಟ್ಟುದಮರರ ಧೇನು ಕಲ್ಲಾಯ್ತು
ಪರುಷ ಕಟ್ಟನೆ ಕರಗಿತೆನೆ ಸಿದ್ಧರಸವಂದು ಮೊದಲಾಗಿ ಮೂಜಗದೊಳು ॥ ೪೩ ॥

ಪರಿಭವಿಸಿ ನಂದಿಸಿ ತಗುಳ್ದೊರಸಿ ಪೀರ್ದುರ್ಧಿ
ಕ್ಕರಿಸಿ ಡೊಕ್ಕರಿಸಿ ಝುಂಕಿಸಿ ಸುರಪನಗ್ನಿ ಯಮ
ನಿರುತಿ ವರುಣ ಮರುತ ಧನದನೀಶಾನ್ಯರೆಂಬವರ ಪವಿಶಕ್ತಿದಂಡ ।
ವರಕೊಂತಪಾಶಧ್ವಜಂ ಖಡ್ಗ ಶೂಲ ತತಿ
ವೆರಸಿ ಕರಿ ತಗರು ಕೋಣಂ ನರಂ ಮಕರ ಬೆ
ಳ್ಗಿರಲೆ ಹಯ ವೃಷಭಂಗಳಂ ಸೆಳೆದು ತಹನು ತತ್ತಡೆ ಹರಿಶ್ಚಂದ್ರ ನೃಪನು ॥೪೪॥

ವರ ರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು
ಸಿರಿಗೆ ಹೊಯಿಕೈ ಜಾಣಿನೊಳು ವಾಣಿಗೆಕ್ಕ ಸ
ಚ್ಚರಿತದೊಳು ಸುರನದಿಗೆ ಸಾಮ್ಯ ಪತಿಭಕ್ತಿಯೊಳರುಂಧತಿಗೆ ಸರಿ ಜನದೊಳು ।
ಪರಮ ರೋಹಿಣಿಗೆ ಹೆಗಲೆಣೆ ಪುಣ್ಯದೊಳು ಸ್ವಧಾ
ತರುಣಿಗೋರಗೆ ವಂದ್ಯತೆಯೊಳು ಗಾಯತ್ರಿಗೊರೆ
ದೊರೆಯೆನಿಸಿ ಮೆಱೆದಳು ಹರಿಶ್ಚಂದ್ರನೃಪನರಸಿ ಚಂದ್ರಮತಿ ಭೂತಳದೊಳು ॥೪೫॥

ತೊಡರ್ವ ರಾಯರನೊರಸಿದಪೆನೆಂದು ನುಡಿನುಡಿದು
ನುಡಿಗಲಿತು ರಣದೊಳಾಂತವರ ಸರ್ವಸ್ವಮಂ
ಪಿಡಿ ಪಿಡಿದು ಪಿಡಿದುನಿಂದಿರ ಕಲಿತು ಹಗೆಯ ಬಯ್ತಲೆಯ ಬಟ್ಟೆಯೊಳೊವ್ಮೆಯುಂ ।
ನಡೆನಡೆದು ನಡೆಗಲಿತು ರಿಪುಗಳಲಿ ಕಪ್ಪಮಂ
ಬಿಡಬಿಡದೆ ಕೊಂಡು ಕೊಂಡುಣ ಕಲಿತು ಕೀರ್ತಿಯೊಡ
ನೊಡನೆ ಪರಿಪರಿದು ಪರಿದಾಡ ಕಲಿತಂ ಲೋಹಿತಾಶ್ವನೆಂಬ ಕುಮಾರನು ॥ ೪೬ ॥

ಪತಿ ಹಿತಂ ಪೌರಜನದುತ್ಸವಂ ದೇಶದು
ನ್ನತಿ ದುಷ್ಟರೆದೆಗಿಚ್ಚು ಶಿಷ್ಟರಾನಂದವತಿ
ಚತುರ ಚೌಷಷ್ಟಿಕಳೆ ಸಾಮ ಭೇದಾದಿ ಮಂತ್ರಾಳಾಪವೀಶಭಕ್ತಿ ।
ನುತವೀರ ವಿತರಣ ಗುಣಂ ಪುಣ್ಯನೀತಿ ಸಂ
ತತಿಗಳೆಲ್ಲಂ ನೆರೆದು ರೂಪಾದುದೆಂಬಂತೆ
ಮತಿವಂತ ಸತ್ಯಕೀರ್ತಿಯೆನಿಪ್ಪನೇಕ ಪ್ರಧಾನನಾ ಭೂಮಿಪತಿಗೆ ॥೪೭॥

ಪೊಡವಿಯಂ ಬಗಿವ ಫಣಿಪನ ನುಗಿವಜಲಧಿಯಂ
ಕುಡಿವ ವಡಬನ ಹಿಡಿವ ಗಿರಿಗಳಂ ಪೋಳ್ವ ಹಗ
ಲೊಡೆಯನಂ ತೂಳ್ವ ಮೃತ್ಯುವನು ತುತ್ತುವ ದಿಶಾಧಿಪರ ಮುತ್ತುವ ಸಿಡಿಲನು ।
ಹುಡಿಗೈವ ದೆಸೆಯ ಮೂಲೆಯ ಕೊಯ್ವ ದಿಗ್ಗಜದ
ಕುಡುದಾಡೆಯಂ ಮುಱಿವ ನಕ್ಷತ್ರಮಂ ತಱಿವ
ಕಡುಗಲಿಗಳೆಂಬತ್ತು ಪದ್ಮನಾಯಕರುಳಿದ ಪಡೆಯನಿನ್ನಾರೆಣಿಪರು ॥ ೪೮ ॥

ತ್ಯಾಗಕ್ಕೆ ಬುಧರ ತಣಿವವಧಿ ರಾಜ್ಯಕ್ಕೇಳು
ಸಾಗರದ ತಡಿಯುವಧಿ ಭಕ್ತಿಗೀಶ್ವರನ ತಲೆ
ದೂಗಿಸುವುದವಧಿ ಕೀರ್ತ್ಯಂಗನೆಯ ಸುಳಿವಿಂಗೆ ಮೂಲೋಕವವಧಿ ವಿಪುಳ ।
ಭೋಗಕ್ಕೆ ಸರ್ವಸುಖವವಧಿ ವೀರಕ್ಕೆ ಭೂ
ಭಾಗದೊಳು ನಿಷ್ಕಂಟಕತ್ವವೇ ಅವಧಿ ತಾ
ನಾಗಿ ಪಿರಿಯರಸುತನಮಂ ಮಾಡುತಿರ್ದನು ಹರಿಶ್ಚಂದ್ರ ಭೂನಾಥನು ॥ ೪೯ ॥

ಮಸುಳಿಸದ ತೇಜ ಮಾಸದ ಕೀರ್ತಿ ಕಲಿ ಹುಗದ
ಹೆಸರಿಂಗದೋಜೆ ಕೊರಗದ ದರ್ಪವುಗದ ಬಗೆ
ಹುಸಿ ಹುಗದ ನುಡಿ ಮಾಯೆ ಮುಸುಕದಱಿವಾಲಸ್ಯವಡಿಯಿಡಿದ ಪರಮ ಭಕ್ತಿ ।
ನಸು ಲೋಭ ನಡದ ಸಿರಿ ಭೀತಿ ಬೆರಸದ ವೀರ
ದೆಸಕವಿದಿರೊಗೆಯದುನ್ನತಿ ಸಹಜವೆನಿಸಿ ರಾ
ಜಿಸುತಂ ಹರಿಶ್ಚಂದ್ರ ಭೂಭುಜಂ ಸುಖದೊಳಿರಲಿತ್ತಲಮರಾವತಿಯೊಳು ॥ ೫೦ ॥

---

## ೨

ಭೂವರ ಹರಿಶ್ಚಂದ್ರ ನೃಪನ ಘನ ಸತ್ಯವಾ
ದೇವ ಸಭೆ ನಡುಗೆ ವಾಸಿಷ್ಠ ಮುನಿ ಕೌಶಿಕಂ
ಗಾವಗಂ ಕದನಮಂ ಬೆಳಸಿ ಪ್ರತಿಜ್ಞೆಯಂ ನುಡಿಸಿತೇಪಣ್ಣಿಸುವೆನು ‖ ಸೂಚನೆ ‖

ಪರುಷವಂಗಣದ ಕಲು ಸುರಭಿ ಕಱಹಂ ಕಲ್ಪ
ತರು ವನಂ ಸ್ವರ್ಗ ನಿಜದೇಶವಮರಾವತಿಯೆ
ಪುರದುರ್ಗವಮರರಾಳ್ ಮೇರು ಕೇಳೀ ಶ್ಯೆಲವಮೃತವೇ ಮನೆಯ ಬೀಯ।
ವರ ರಂಭೆ ಸೂಳೆ ಶಚಿ ರಾಣಿಯ್ಯೆರಾವತಂ
ಕರಿ ವಜ್ರವಾಯುಧಂ ನವನಿಧಿಯೆ ಭಂಡಾರ
ಹೊರೆವಾಳ್ದನಭವನೆಂದೆನಿಪ ದೇವೇಂದ್ರನೊಂದಿರುಳೋಲಗವನಿತ್ತನು ‖ ೧ ‖

ತರದ ತಂಡದ ಗಡಣದೋರಣದ ವಂಗಡದ
ಪರಿವಿಡಿಯ ಸಾಲ ಸೇರುವೆಯ ಪರಿಪಂಕ್ತಿಗಳ
ಸುರರ ವಿದ್ಯಾಧರರ ಕಿನ್ನರರ ಖೇಚರರ ಗುಹ್ಯಕರ ಗಂಧರ್ವರ ।
ತುರಗ ವದನರ ಮಯೂರರ ಮಹೋರಗರ ಸಿ
ದ್ಧರ ಧರಾಚರರ ಗರುಡರ ಕಿಂಪುರುಷರ ಮು
ಖ್ಯರ ನಟ್ಟನಡುವೆ ಮಣಿಭದ್ರಾಸನದೊಳಿರ್ದನಿಂದ್ರನನಿಮಿಷಚಂದ್ರನು ‖ ೨ ‖

ಹಿಂದೆಮುಂದೆಡಬಲನನೆಡೆಗೊಂಡ ಪಟುಭಟರ
ಗೊಂದಣದ ಮಕುಟದಿಡುಕುಱತಳಿತ ಕೈದುಗಳ
ಸಂದಣಿಯ ತುಱುಗಿ ತುಂಬಿದ ದೀವಿಗೆಯ ಸುಧಾ ಭಿತ್ತಿಯ ವಿಳಾಸಿನಿಯರ।
ಹೊಂದೊಡಿಗೆಗದಿರ ನಗೆಗಂಗಳೊಳಗಂ ಪುಟ್ಟಿ
ಮಂದ್ಯೆಸಿ ಬೆಳೆದ ಬೆಳತಿಗೆ ವೆಳಗಿನೊಳಗಿರ್ದ
ನಂದುಗಿರಿದಳನ ದೋರ್ದಂಡಂ ಶಚೀ ಸತಿಯ ಗಂಡ ರಂಭೆಯ ರಸಿಕನು ‖ ೩ ‖

ಸನಕ ಕಶ್ಯಪ ಜಹ್ನು ಜಮದಗ್ನಿ ಭೃಗು ಸನಂ
ದನ ಕುತ್ಸ ವತ್ಸ ಶುಕನತ್ರಿ ವಾಲ್ಮೀಕಿ ಜ್ಯೆ
ಮಿನಿ ಭರದ್ವಾಜ ರೋಮಜ ಭಗೀರಥ ಕುಶಾವರ್ತ ನಾರದ ಮರೀಚಿ ।
ಮನು ಮತಂಗ ವ್ಯಾಸ ಗರ್ಗ ಗೌತಮ ಸನಾ
ತನನಗಸ್ತ್ಯ ದಧೀಚಿ ಪೌಲಸ್ತ್ಯ ಮಾಂಡವ್ಯ
ಮುನಿ ಮುಖ್ಯರಿರ್ದರಮರಾವತಿಯ ಬಲ್ಲಹನ ಬಳಸಿನೊಡ್ಡೋಲಗದೊಳು ‖ ೪ ‖

ಒಡಲನಾವರಿಸಿದಂಗೋಪಾಂಗ ಸಂಕುಳದ
ನಡುವೆ ನಯನ ದ್ವಯಂಗಳು ಸಲೆ ನವಗ್ರಹದ
ನಡುವೆ ಚಂದ್ರಾದಿತ್ಯರುರ್ವಿಯಂ ಪರ್ವಿ ಪಸರಿಸಿದ ನಾನಾ ನದಿಗಳ।
ನಡುವೆ ಸುರುಚಿರ ಗಂಗೆ ತುಂಗಭದ್ರೆಗಳೊಪ್ಪ
ವಡೆದು ಮಹಿಮೆಯೊಳೆಸೆವ ತೆಱದಿ ಸುರಪನ ಸಭೆಯ
ನೆಡೆಗೊಂಡ ಮುನಿಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು ॥ ೫ ॥

ಅಲಸದೆ ಸಮಸ್ತ ಭೂಮಂಡಲವನಾಳ್ವ ರವಿ
ಕುಲಜರಪ್ಪಿಕ್ಷ್ವಾಕು ವಂಶದರಸುಗಳೊಳತಿ
ಬಲರೆನಿಸಿ ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ।
ಕಲಿಗಳಾರಯ್ಯ ಹೇಳವರ ಪಾರಂಪರೆಗೆ
ಸಲೆಸಂದ ರಾಜಗುರು ನೀನಱಿಯದವರಿಲ್ಲ
ವೆಲೆ ಮುನಿಪ ಹೇಳೆಂದು ಹಲವು ಕರ್ಣಾಣದವಂ ನುಡಿದನು ವಸಿಷ್ಠ ಮುನಿಗೆ ॥ ೬ ॥

ಬೆಸಗೊಂಡೊಡಿಕ್ಷ್ವಾಕು ವಂಶದೊಳಗಣ ಚತು
ರ್ದಶ ಭುವನ ಪತಿಗಳೊಳಗಿಂದು ತನಕಾನಱಿಯೆ
ಹುಸಿಹೊದ್ದದವರಿಲ್ಲ ಹಿಂದಣರಸುಗಳನುದ್ಧರಿಸಲೆಂದವತರಿಸಿದ।
ವಸುಧಾಧಿಪತಿ ಹರಿಶ್ಚಂದ್ರನಾತನ ಸತ್ಯ
ದೆಸಕಮಂ ಪೊಗಳಲೆನ್ನಳವೆ! ಫಣಿಪತಿಗರಿದು!
ಶಶಿಮೌಳಿಯಾಣೆಯೆನಲಾ ವಸಿಷ್ಠಂಗೆ ಕೋಪಿಸಿದ ವಿಶ್ವಾಮಿತ್ರನು ॥ ೭ ॥

ತೀವಿದೊಡ್ಡೋಲಗದ ನಡುವೆ ತನ್ನಂ ಮೊದಲೊ
ಳೋವಿ ನುಡಿಸದ ಕೋಪವೊಂದಾ ವಸಿಷ್ಠಮುನಿ
ಯಾವುದಂ ಪೇಳ್ದಡದನಲ್ಲೆಂಬ ಭಾಷೆಯೆರಡಖಿಳ ಜೀವಾವಳಿಯಲ।
ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ
ಭಾವ ಮುಪ್ಪುರಿಗೊಂಡು ಕುಡಿವರಿದು ಕಡುಗೋಪ
ವಾವರಿಸಿ ಕೌಶಿಕಂ ನಿಂದು ನಿಲ್ ನುಡಿಯಬೇಡೆಂದು ಜಱದಿಂತೆಂದನು ॥ ೮ ॥

ಬೇಸಱದೆ ಕೇಳ್ವ ದೇವೇಂದ್ರನುಂಟೆಂದಿಂತು
ಹೇಸದಕಟಕಟ ಸೊರಹುವರೆ ವಾಸಿಷ್ಠಯೆನ
ಲಾ ಸೊರಹುವನೆಯಾತನಧಿಕನಲ್ಲವೆ ಹೇಳು ಮುನಿದವೋಜೆಯೊಳೆಂದೆನೆ।
ರಾಸಿ ಹೊನ್ನುಂಟಧಿಕನಹನೆನಲು ಹೊನ್ನವಾ
ತೀ ಸಭೆಯೊಳೇಕೆ ಸತ್ಯನೆ ಹೇಳೆನಲು ಸತ್ಯ
ಲೇಶವಂತವನಾಳ್ವ ದೇಸದೊಳು ಕೇಳ್ದಱಯೆನೆಂದ ವಿಶ್ವಾಮಿತ್ರನು ॥ ೯ ॥

ಶಿವನಱಿಯಲಾತನೆಂತುಂ ಸತ್ಯನವನಾಳ್ವ
ಭುವನದೊಳಗನೃತವನ್ಯಾಯ ಪಾಲೇಧತ್ವ
ವವಿಚಾರ ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲೆಂದೆನೆ ।
ತಪ ಬೇರ ಬಲ್ಲವಂಗೆಲೆದೋಱಲೇಕೆ ನಿ
ನ್ನವನೀಶನಾಳ್ವ ನಾಡೆಯ್ದೆ ಮುನಿನಾಥ ನೋ
ಡುವಡೆನ್ನ ಕಾರಾಟದೊಳಗಣದು ಪೇಳ್ವೆನದಱನುವ ಕೇಳೆನ್ನೆಂದನು ॥ ೧೦ ॥

ನುತ ವಿಚಾರೋನ್ನತಂ ಕಾನನಂಗಳೊಳು ಪಶು
ಪತಿ ರತಿತ್ವಂ ಗೋಕುಲದೊಳು ಸ್ವರಾಗ ಸಂ
ತತಿ ಶುನಕ ಗೋಷ್ಠಿಯೊಳು ಚತುರ ದ್ವಿಜೋಪಚಾರಂ ದಂತಧಾವನದೊಳು ।
ವಿತತ ಧರ್ಮಶ್ರವಣವಂತ್ಯಕಾಲದೊಳಗಾ
ಶ್ರಿತ ಪರ್ವವಿಭವ ವೇಣುಗಳೊಳು ಸ್ವಸ್ಥತಾ
ಗತಿ ಮುಕ್ತರಾದವರೊಳಲ್ಲದಾ ನಾಡೊಳಿಲ್ಲೆಂದ ವಿಶ್ವಾಮಿತ್ರನು ॥ ೧೧ ॥

ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತಂಬ
ಕ್ಷೋಣಿಯಾಡುವ ಗಾದೆಯಂತೆ ವಿಶ್ವಾಮಿತ್ರ
ನೂಣೆಯುವ ಹಿಡಿವ ವಾಸಿಷ್ಠಮುನಿ ಸತ್ಯವಂ ಕೊಂಡಾಡುವೆರಡಱಿಂದ ।
ಕ್ಷೋಣೀಶನೆನಿಸುವ ಹರಿಶ್ಚಂದ್ರ ಭೂಪಂಗೆ
ಪ್ರಾಣ ಪರಿಯಂತಲ್ಲದಪಮೃತ್ಯು ಸಾರ್ಗೆಂದು
ಕ್ಷೀಣಮಂ ತೋಱಿ ನುಡಿವಂದದಿಂ ಕೋಪದೊಳು ಜಂಭಮರ್ದನ ನುಡಿದನು ॥ ೧೨ ॥

ಏನನಾಂ ಬೆಸಗೊಂಡೆಡೇನನಾಡುವಿರಿಳೆಯ
ಭೂನಾಥರೊಳು ಸತ್ಯರಾರೆಂದು ಬೆಸಗೊಂಡ
ಡೀ ನಾಡ ಮಾತು ಮಾಱುತ್ತರವೆ ಮುನಿಗಳಿರ ಎಂದು ಸುರಪತಿ ನುಡಿಯಲು ।
ಏನಂದದಂ ಹರಿಶ್ಚಂದ್ರನೇ ಸತ್ಯ ಸಂ
ಧಾನನೆಂದಾ ವಸಿಷ್ಠಂ ನುಡಿಯಲಲ್ಲ ನಿ
ಲ್ಲಾನಱಿಯಲಾ ನೃಪಂ ಸತ್ಯನಲ್ಲವನ ಮಾತೀ ಸಭೆಯೊಳೇಕೆಂದನು ॥ ೧೩ ॥

ಇಳೆ ತಳಕ್ಕಿಳಿದು ಶಶಿ ಬಿಸಿಯಾಗಿ ಮೇರುಗಿರಿ
ಚಳಿಸಿ ರವಿ ಕಂದಿ ಜಲನಿಧಿ ಬತ್ತಿ ಶಿಖಿ ಹಿಮಂ
ದಳೆದ ದಿನದೊಳು ಸತ್ಯನಿಧಿ ಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ।
ಮೊಳೆಯವಿದು ನಿರುತವಾನಱಿಯಲಾತನ ಸತ್ಯ
ದಳವನಱಿಪೊಡೆ ನೊಸಲ ಕಣ್ಣುಳ್ಳನಾಗಬೇ
ಕುಳಿದವರಿಗಳವಡದು ನೀನೇ ಪರೀಕ್ಷಿಸುವೆ ಕೇಳೆಂದನಾ ಮುನಿಪನು ॥ ೧೪ ॥

ಇಂತಿವಕೆ ವರ್ಪಂದುತನಕವಂ ಸ್ಥಿರನೆಯಾ
ದಂತಿರ್ಕೆ ಸತ್ಯಮಾತ್ರದೊಳಿಪ್ಪುದೇಂ ಸತ್ಯ
ವಂ ತಳೆದುದಕ್ಕೆ ಸಾಧನವಾಗಿಬಿಡಬೇಹುದುಂಟವಂ ಬಿಡದಿರ್ದಡೆ ।
ಎಂತು ಹೇಳೆಂದಡವನುಸುರೆನಲು ಲೋಭ ವಾ
ರ್ತಂ ತೀವ್ರ ಭೀತಿ ನಿಷ್ಕರುಣ ಮೂರ್ಖತ್ವ ಜಾ
ಡ್ಯಂ ತನಗೆ ಬಿಡಬೇಹುದಲ್ಲೆಂಬಡಲ್ಲೆಂದು ನುಡಿಯೆಂದನಾ ಮುನಿಪನು ॥ ೧೫ ॥

ಕನಕದಲಿ ಕಂಪ ಮಾಣಿಕ್ಯದಲಿ ರಸವ ಮು
ತ್ತಿನಲಿ ಮೃದುವಂ ದೀಪ್ತಿಯಲಿ ತಂಪನಮಳ ಚಂ
ದನದಲಿ ಬಿಸುಪ ನವ್ಯ ಕುಸುಮಂಗಳಲಿ ದನಿಯನಱಸುವುದು ಸಾಹಿತ್ಯವೆ ।
ಘನ ವಾದಿಯೆಂದಾಂ ಪೊಗಳ್ದಡದಱೊಳಾ
ತನನೀಕ್ಷಿಸುವುದಲ್ಲದೀ ಗುಣವನಱಸುವರೆ
ಮುನಿಪಹೇಳೆಂದಡೀ ಗುಣವಿಲ್ಲದಿರ್ದಡಂತದು ಸತ್ಯವಲ್ಲೆಂದನು ॥ ೧೬ ॥

ಮುನಿವರ್ಗೆ ಬೆಂಗೊಡದ ದೆಸೆಯೊಳತಿ ಲೋಭ ದು
ರ್ಜನರ ಮಾತಂ ಕೇಳದೆಡೆಯೊಳತಿ ಮೂರ್ಖ ಪರ
ವನಿತೆಯರ ನೋಡುವೆಡೆಯೊಳು ಭೀತನೀಶ ಭಕ್ತಿಯನು ಬಯಸುವ ದೆಸೆಯೊಳು ।
ವಿನುತಾರ್ಥಿ ವಿಬುಧ ಜನದಾರ್ತಮಂ ಕೊಲುತ ಬ
ರ್ಪನಿತಱೊಳು ನಿಷ್ಕರುಣಿ ತನುಧರ್ಮ ಪಥದೊಳೊ
ಯ್ಯನೆ ನಡೆಯಲಾಱನದಱಿಂ ಜಾಡ್ಯಮಿದಱೊಳಲ್ಲದೆ ಬೇಱೆ ತಲೆದೋಱವು ॥ ೧೭ ॥

ಎಸೆವ ಮಗನಿಲ್ಲದೊಡೆ ನರಕವಹುದೆಂದು ಚಿಂ
ತಿಸಿ ವರುಣನಲಿ ವರಂಬಡೆಯಲಾತನ ಯಾಗ
ಪಶುವ ಮಾಡುವೆನೆಂದು ಮರಳೀವೆಯಾದಡೀವೆನು ಮಗನ ನಿನಗೆಂದೆನೆ ।
ಶಿಶುವಾದನೆಂಬುದಾದೆಡೆ ಸಾಕೆನಲ್ ಕೊಡಲು
ಹುಸಿದಡವಿಗಟ್ಟಿ ದೈಟಿಟ್ಟನೆಂಬುದ ನಿಂತು
ಎಸೆವ ವೇದಂಗಳೊಳು ಕೇಳಿ ಪೊಗಳುವಡರಿದು ನಿನ್ನ ಧೀವಶವೆಂದನು ॥ ೧೮ ॥

ಕಿರಿದು ಹುಸಿಗಬುಧಿಪತಿ ಮುನಿದು ಮಾಡಿದ ಜಳೋ
ದರವ ಭಾವಿಸದೆ ಕಂಗೆಟ್ಟು ಜಾಡ್ಯಂ ಮಹಾ
ಧ್ವರಕೆ ಪಶುವಂ ಮಗನ ಮಾಡಲಾಱದೆ ಮೋಹದಿಂದ ಜೀಗರ್ತಮುನಿಯ ।
ವರಸುತ ಶುನಶ್ಶೇಫನಂ ತಂದು ಯಾಗ ವಿಧಿ
ಗೆರಿದು ಬೇಳಲ್ಕೆ ಮನದಂಡ ಪಾತಕನು ಭೂ
ವರನನೇತಕ್ಕೆ ಹೇಸದೆ ಹೊಗಳ್ವೆಯೆಂದು ವಾಸಿಷ್ಠನಂ ಕೆಡೆನುಡಿದನು ॥ ೧೯ ॥

ಹಲವು ಮಾತೇಕಾ ಹರಿಶ್ಚಂದ್ರ ಭೂನಾಥ
ನೊಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿ
ಯೊಳು ಮುನ್ನ ಹುಟ್ಟಿದವರಿಲ್ಲಿನ್ನು ಹುಟ್ಟುವರ ಕಾಣೆನಾನಿದ ಬಲ್ಲೆನು ।
ಉಳಿದವರ ಹವಣಾವುದೆಂದು ವಾಸಿಷ್ಠ ಮುನಿ
ಕುಲ ತಿಲಕನೆನಲು ವಿಶ್ವಾಮಿತ್ರ ಮನದೊಳತಿ
ಮುಳಿದು ನಿಲ್ಲಾಡದಿರು ಬಾಯಿ ಹರಿದುಂಟೆಂದೆನುತ್ತ ಮತ್ತೆಂದವನು ॥ ೨೦ ॥

ವನಧಿ ಪರಿಯಂತ ಧರೆಗರಸಾತನದಱೊಳಂ
ಧನವುಳ್ಳ ಶಿಷ್ಯನಾಗಿಹನು ನಿನಗತಿ ವಿಪುಳ
ಧನವನಾರಾಧಿಸುವನಂತಲ್ಲದಾತನಾರೈಕೆಯೊಳಗಿಪ್ಪೆ ನೀನು ।
ಎನಿತಗ್ಗಳಿಸಿ ಬಣ್ಣಿಸಲೊಪ್ಪದಯ್ಯ ಹೇ
ಳೆನಲು ರಾಜಪ್ರತಿಗ್ರಹದ ಬಲದವನೆ ನಾ
ನೆನೆ ಮುನಿಯ ಬೇಡಾತ ಹುಸಿದನಾದಡೆ ನಿನ್ನನೇಗಯ್ಯಬಹುದೆಂದನು ॥ ೨೧ ॥

ಶ್ರುತಿಮತಕುಲಾಚಾರ ಧರ್ಮಮಾರ್ಗಂ ಮಹಾ
ವ್ರತವನುಷ್ಠಾನ ಗುರುವಾಜ್ಞೆ ಲಿಂಗಾರ್ಚನೋ
ನ್ನತ ತಪಂ ಬ್ರಹ್ಮಕರ್ಮಂ ಬೆಳೆದ ಪುಣ್ಯವೊಳಗಾದವಂ ತೊಱೆದು ಕಳೆದು ।
ಸತಿಯನುಳಿದತಿ ದಿಗಂಬರನಾಗಿ ಮುಕ್ತಕೇ
ಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿ
ಯುತ ತೆಂಕಮುಖವಾಗಿ ಹೋಹೆಂ ಹರಿಶ್ಚಂದ್ರ ಮಱೆದು ಹುಸಿಯಂ ನುಡಿದಡೆ॥೨೨॥

ಧರೆ ಗಗನವಡಸಿ ಕಾದುವಡೆಡೆಯುಲಹ ಚರಾ
ಚರವೆಲ್ಲ ಹೊಗಲಿ ಮುನಿದಖಿಳಮಂ ಸುಟ್ಟೊಸೆದು
ಮರಳಿ ಹುಟ್ಟಿಸಬಲ್ಲ ಮುನಿಗಳಿಬ್ಬರ ಶಾಂತಿ ಸವೆದ ಕದನದ ಮುಖದಲಿ ।
ಇರಬಾರದೇಳಬಾರದು ನುಡಿಯ ಬಾರದಂ
ತಿರಬಾರದಹುದೆನಲುಬಾರದಲ್ಲೆನಬಾರ
ದೆರಡುಂ ನಿರೋಧದಿಂದೊಡ್ಡೋಲಗಂ ಚಿಂತೆ ಮುಸಿಕಿ ಸೈವೆಱಗಾದುದು ॥ ೨೩ ॥

ಒಂದಕ್ಕೆ ಹಿತನುಡಿಯೆ ಪಕ್ಷವೆಂದೆರಡುವಂ
ಹಿಂದುಗಳೆದಿರಲುಪೇಕ್ಷಿತನೆಂದು ಜಱೆದೊಡೆ
ಮ್ಮಿಂದಧಿಕನೇ ಎಂದು ಹೊಗಳ್ದೊಡುಪಚಾರವೆಂದೆತ್ತಿದೊಡೆ ಧೂರ್ತನೆಂದು ।
ನೊಂದು ಶಾಪವನೀಯದಿರರೆಂದು ಸುರಪನಾ
ನಂದರಸವಱತು ಬೆಱಗಿನ ಮೊಗದೊಳಿರಲು ನಾ
ರಂದ ಧಟ್ಟಿಸುತೆದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು ॥ ೨೪ ॥

ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾ
ವಿರ ಬಾರಿ ಬಂದಡಜಗೊಂದು ದಿನವಾ ದಿನದ
ಪರಿ ದಿನಂ ಮೂವತ್ತು ಬರಲೇಕಮಾಸಮಾಮಾಸ ಹನ್ನೆರಡಾಗಲು।
ವರುಷವಾ ವರುಷ ಶತವೆಂಬುದೀ ಸುರಪತಿಗೆ
ಪರಮಾಯುವೀತನೀರೇಳ್ಭವಂ ಬಪ್ಪನ್ನೆ
ವರ ದೇವಲೋಕಕ್ಕೆ ಬಾರೆಂ ಪ್ರತಿಜ್ಞೆಯೆನಗೆಂದ ವಿಶ್ವಾಮಿತ್ರನು ॥ ೨೫ ॥

ಹೊಟ್ಟೆ ನೊಂದಡೆ ತುಱುಬ ಕೊಯ್ವುವನ ಪಶು ಕಱುವ
ಮೆಟ್ಟಿದಡೆ ಗೂಳಿಯುಂ ಸದೆವವನ ಸೂಳೆ ಮೊಱೆ
ಯಿಟ್ಟಡೂರಗುಸೆಯುಂ ಮುಱುವವನ ನಗೆಯು ಕತೆಯುಂ ಕಾಣಲಾದುದಿಂದು।
ನೆಟ್ಟನೆ ಹರಿಶ್ಚಂದ್ರ ಹುಸಿಕನಾದಡೆ ಸಾವು
ಗೆಟ್ಟಿರಧಿನಾಥ ನೀರೇಳ್ಭವಂ ನೆಱೆ ಸತ್ತು
ಹುಟ್ಟುವನ್ನಬರ ಸ್ವರ್ಗಂಬುಗೆನೆನಿಪ್ಪ ಬಿರುದರಿದರಿದು ನಿನಗೆಂದನು ॥ ೨೬ ॥

ಭಕ್ತಿ ಶಮೆ ದಮೆ ಯೋಗ ಯಾಗ ಶ್ರುತಿಮತಮಯು ವಿ
ರಕ್ತಿ ಘೋರವ್ರತ ತಪೋನಿಷ್ಠೆ ಜಪ ಗುಣಾ
ಸಕ್ತಿತೆ ಸ್ನಾನ ಮೌನ ಧ್ಯಾನವಾಚಾರ ಸತ್ಯ ತಪ ನಿತ್ಯ ನೇಮ॥
ಯುಕ್ತಿ ಶೈವಾಗಮಾವೇಶ ಲಿಂಗಾರ್ಚನಾ
ಸಕ್ತಿಯಿಂ ಬೆಳೆದ ಪುಣ್ಯದೊಳರ್ಧಮಂ ಸುಧಾ
ಭುಕ್ತರಱಿಯಲು ಕೊಡುವೆನಾ ಹರಿಶ್ಚಂದ್ರ ಹುಸಿಯುಂ ನುಡಿಯದಿರಲೆಂದನು॥೨೭॥

ಎಂದು ಭೂವರನಂ ಪರೀಕ್ಷಿಸುವೆಯೆನ್ನ ಮನ
ಬಂದ ದಿನವೆನಿತು ಸೂಳಾತನೀ ಧರೆಯೊಳಿ
ಪ್ಪಂದುತನಕಾವಾವ ಪರಿಯೊಳು ಸಹಸ್ರ ವಿಧದೊಳು ದಿಟವೆ ದಿಟವೆಂದೆನೆ।
ಹಿಂದುಗಳೆಯಲದೇಕೆ ನಡೆಯೆನಲು ನೀನಾಡು
ವಂದವನುವಾಗಿರದೆನುತ್ತ ಕೌಶಿಕನಣಕ
ದಿಂದಾಡಲೆಮ್ಮ ಕೂಡಿನಿತಣಕವೇಕೆಂದು ವಾಸಿಷ್ಠಮುನಿ ನುಡಿದನು ॥ ೨೮ ॥

ಇನಿತು ಮುಳಿಸಾವುದು ಹರಿಶ್ಚಂದ್ರ ಭೂಭುಜನ
ಮನೆಗೀಗಳಿಂತು ನೀ ಹೋಗಿ ಕೌಶಿಕನು ನೆ
ಟ್ಟನೆ ನಿನ್ನನಂತಿಂತು ಕೆಡಿಸಿದಪ ನೀನಾವ ಪರಿಯುಲೆಚ್ಚತ್ತಿರೆಂದು।
ನೆನಸಿಕೊಡು ಹೋಗೆಂದಡಾನಾಡುವವನೆ ಹೇ
ಳೆನಲೆನ್ನ ಗಾಸಿಗಾಱದೆ ನೃಪಂ ಹುಸಿ ನುಡಿಯೆ
ಮುನಿತನವನೀಡಾಡಿ ಹೋಹಂತಿರಾದಪುದು ಹೋಗಿ ನೀಂ ಹೇಳೆಂದನು ॥ ೨೯ ॥

ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು
ಸರಸಿರುಹ ವೈರಿ ತಂಪಾ ಬಿಡದಿರೆಲೆಲೆ ಮಂ
ದರವೆ ಚಲಿಸದಿರೆಂದು ಬೋಧಿಸಲದೇಕೆ ನಿಜವಳಿವವೇ ಸುಮ್ಮನಿರಲು।
ವರ ಹರಿಶ್ಚಂದ್ರ ಸತ್ಯಂಗೆಡದಿರೆಂದು ಬೋ
ಸರಿಸುವಂತಾಗಿ ಹುಸಿಯುಂಟೆ ಕೊಂಡೆಯವೆಮಗೆ
ಹಿರಿಯುತನ ಕೆಟ್ಟಿಂತು ನುಡಿಯಲಹುದೇಯೆಂದು ವಾಸಿಷ್ಠಮುನಿ ನುಡಿದನು ॥೩೦॥

ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ ಮುನಿದು
ಪೊಡವಿ ನುಂಗುವಡೆ ಮನೆ ತಾಂಗುವುದೆ ಕವಿದು ಹೆ
ಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡಬಹವೇ ಹೇಳು ಮುನಿಪ ನಿನ್ನ।
ಬಡ ಬೋಧೆಗೀಧೆಗಳು ರಕ್ಷಿಸುವುವಲ್ಲ ನಾಂ
ಕಡು ಮುಳಿದ ಬಳಿಕರೇಗುವವು ನೀ ಹೇಳದಿ
ರ್ದಡೆ ಮದನಹರನಾಣೆ ಹೋಗೆಂದು ಕೌಶಿಕಂ ನುಡಿದನು ವಸಿಷ್ಠಮುನಿಗೆ ॥ ೩೧ ॥

ಕುಲವ ನಾಲಗೆಯಱುಹಿತೆಂಬ ನಾಣ್ನುಡಿಗಿಂದು
ನೆರೆಯಾಯ್ತುಲಾ ಬ್ರಹ್ಮಋಷಿಯಾದಡೊಳಗು ನಿ
ರ್ಮಳವಪ್ಪುದಯ್ಯ ನೀಂ ರಾಜರ್ಷಿ ಕೋಪಿಸದೆ ಧಟ್ಟಿಸದೆ ಕಡೆನುಡಿಯದೆ।
ನಿಲಲೆಂತು ಬಲ್ಲೆಯೆನಲೆನ್ನ ನೀನೀಗ ಹೆ
ಪ್ಪಳಿಸದಾಡಿದೆಯೆಂದಡಹುದಹುದು ನಿನ್ನಲಿಹ
ನೆಲೆಯಾಡಿತೆನೆ ಕೌಶಿಕಂ ಕುಪಿತನಾದನದನಾವ ಕವಿ ಬಣ್ಣಿಸುವನು ॥ ೩೨॥

ನುಡಿಯುರಿಯನುಗುಳೆ ಕಣ್ ಕಿಡಿಗೆದಱೆ ವದನ ಕೆಂ
ಪಡರೆ ನಿಟಿಲಂ ಬಿಸಿಯ ಬಿಂದುವಂ ತಳೆಯೆ ಕೈ
ನಡುಗೆ ಪುರ್ಬಲುಗೆ ಮಿಸುಪಧರ ಜಡಿಯೆ ಲಾಕುಳ ಹೊಗೆಯೆ ಕಾರ್ ಕುಂಬಿಡೆ ॥
ತೊಡೆದ ಭಸಿತಂ ಧೂಮವಿಡೆ ಮೆಯ್ಯ ರೋಮ ಕಾ
ಱಡೆ ಕಮಂಡುಲ ಜಲಂ ತೆಕ್ಕತೆಕ್ಕನೆ ಕುದಿಯೆ
ಮೃಡನ ಹಣೆಗಿಚ್ಚು ಮುನಿಯಾದಂತೆ ಕೌಶಿಕಂ ಮುನಿದನು ವಸಿಷ್ಠಮುನಿಗೆ ॥ ೩೩ ॥

ನೋಡು ನೋಡಿಂದೆನ್ನ ರಾಜಋಷಿಯೆಂದು ಕ
ಟ್ಟಾಡಿತಕ್ಕಾ ಹರಿಶ್ಚಂದ್ರನನಸತ್ಯನಂ
ಮಾಡಿಸುವೆನಧಿಕ ಪ್ರತಿಜ್ಞೆಗಳಾನಾಂತ ನಿನ್ನಂ ವ್ರತಭ್ರಷ್ಟನೆನಿಸಿ॥
ಜೋಡಾಡಿ ಕಾಡುವೆನೆನುತ್ತೆದ್ದು ಸಾವಸೀ
ಡಾಡಿದವರೊಡೆಯನೋಲಗದಿಂದ ಹೊಱವಂಟು
ನಾಡಂಬರದ ಸಿಡಿಲು ಗಜಱಿ ಗರ್ಜಿಸಿ ಮೇಘದಿಂದ ಪೊಱಮಡುವಂದದಿ ॥ ೩೪ ॥

ನಡೆದು ತನ್ನಾಶ್ರಮಮಂ ಪೊಕ್ಕು ಹಲುವೊರೆವುತ್ತ
ಪೊಡವೀಶನಂ ಭಂಗಿಸುವುದಕ್ಕುಪಾಯಮಮಂ
ಬಿಡದೆ ಕೌಶಿಕ ನೆನೆವುತಿರಲತ್ತಲೆದ್ದವನಿಪಂಗೆ ಸೂಚಿಸದೆ ಪೋಗಿ।
ಮೃಡಮೂರ್ತಿ ವಾಸಿಷ್ಠಮುನಿ ನಿಜ ತಪೋವನದ
ನಡುವೆ ಸುಖದಿಂದಿರೆ ಹರಿಶ್ಚಂದ್ರ ಭೂಭುಜಂ
ಜಲಧಿ ಮುದ್ರಿತ ವಸುಧೆಯೆಲ್ಲವಂ ಪಾಲಿಸುತ್ತಿರ್ದನೇವಣ್ಣಿಸುವೆನು ॥ ೩೫ ॥

---

೩

ವಸುಧೆ ತಣಿಯಲು ಬಹುಸುವರ್ಣಯಾಗವ ಮಾಡಿ
ಹೊಸಬನವ ಹೊಕ್ಕು ಸುಖಮಂ ಸವಿದು ಮುನಿಯ ಕೈ
ಮಸಕದಿಂದೊಗೆದ ಖಗಮೃಗ ನಾಡ ಮೊರೆಯಿಡಿಸುತಿರ್ದವೇವರ್ಣ್ಣಿಸುವೆನು ॥ ಸೂಚನೆ ॥

ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತೆಂಬ
ಕ್ಷೋಣಿಯಾಡುವ ಗಾದೆಯುಂ ದಿಟಂ ಮಾಳ್ಪಂತೆ
ಹೂಣಿಸಿ ವಸಿಷ್ಠಂಗೆ ಕೌಶಿಕಂ ನುಡಿದ ಪ್ರತಿಜ್ಞೆಯಂ ಗೆಲುವೊಡಿನ್ನು ।
ಜಾಣಿಂ ಹರಿಶ್ಚಂದ್ರರಾಯನುನ್ನತಿಯುಳಿವ
ಕಾಣದೇಕೆಂದಖಿಳ ಸಾಮಾರ್ಥದ ಕಲಾ ಪ್ರ
ವೀಣನಂತಸ್ಥದೇಕಾಂತದೊಳು ಚಿಂತೆಯಿಂ ಭ್ರಾಂತಿಯೋಗದೊಳಿರ್ದನು ॥ ೧ ॥

ಧರೆಯೊಳು ಹರಿಶ್ಚಂದ್ರನಂ ಹುಸಿಕನೆಂದೆನಿಪ
ಪರಿಯಾವುದೆಂದು ಚಿಂತಿಸಲೊಂದುಪಾಯಮಂ
ಕುರಿಸೆ ಕಂಡುಬ್ಬಿ ಭುಜವೊಯ್ದು ನಿಜವೈರದಂತಸ್ಥವಱಿಯದ ಮುನಿಗಳ।
ಕರೆದು ನೀವಿಂತೀಗ ಹೋಗಿ ಭೂವರನನುಪ
ಚರಿಸಿ ಬೋಧಿಸಿ ಬಹುಸುವರ್ಣಯಾಗವನಾವ
ಪರಿಯೊಳಂ ಮಾಳ್ಪನುವನುಱೆ ಮಾಳ್ಪುದೆಂದು ಕಳುಹಿದನು ವಿಶ್ವಾಮಿತ್ರನು ॥ ೨ ॥

ಕೌಶಿಕನ ಕುಟಿಲವಱಿಯದೆ ಹೋದ ಮುನಿಗಳವ
ನೀಶಂಗೆ ಮಂಗಳಾಶೀರ್ವಾದಸೇಸೆಯುಂ
ಸೂಸಲೇಂ ಕಾರ್ಯ ಬಿಜಯಂಗೆಯ್ದುರೆನೆ ಸಕಲ ವೇದಪೌರಾಣಾಗಮ
ರಾಶಿಗಳೊಳೊಂದಧಿಕ ಧರ್ಮಮಂ ಕಂಡಱುಪ
ಲೋಸುಗಂ ಬಂದೆವೆನಲಾವುದೆನೆ ಮಾಳ್ಪ ವಿ
ಶ್ವಾಸಮಂ ನುಡಿಯೆ ಪೇಳ್ದಪೆವದಂ ಮಾಡದೊಡೆ ನುಡಿದು ಫಲವೇನೆಂದರು ॥ ೩ ॥

ಮನವೊಸೆದು ಮಾಡುವಂತಾಗಿ ಗುರುವಾಸಿಷ್ಠ
ಮುನಿಯ ಪದಪಂಕೇಜದಾಣೆ ನೆಟ್ಟನೆ ಪೇಳ್ವ
ದೆನೆ ಬಹುಸುವರ್ಣಯಾಗಂ ಯಾಗಕೋಟಾನುಕೋಟಿಗಳೊಳಧಿಕ ಫಲವು
ನಿನಗಲ್ಲದಿನ್ನುಳಿದವರ್ಗಾಗದೆಂದಡದ
ಱನುವಾವುದೆನೆ ನೆರೆದ ಮುನಿಗಳತಿದೋಷ ನೆ
ಟ್ಟನೆ ನಿನಗೆ ಬಾರದಂದದಿ ಬೇಡಿದನಿತು ವಸ್ತುವನೀಯಬೇಕೆಂದರು ॥ ೪ ॥

ಆ ವಿಮಳಮುನಿಗಳ ಹಿತೋಪದೇಶವನಾಂತು
ಭೂವರಂ ಸರ್ವಮುನಿವರ್ಗಮಂ ಬರಿಸಿ ನಾ
ನಾವೇದವಿಧಿವಿಹಿತಧರ್ಮಾಗಮಾರ್ಥದಿಂ ಯಾಗಮಂ ಮಾಡಿ ಬಳಿಕ ।
ಆವಾವ ಮುನಿಗಳಾವಾವ ಧನವಂ ಬೇಡ
ಲೋವಿ ಕೊಟ್ಟುಪಚರಿಸುತಿರೆ ಬಂದ ಸುಜನ ಮೃಗ
ಧೀವರಂ ಕಪಟಪಟು ಕೌಶಿಕಂ ವಾಸಿಷ್ಠಮುನಿ ಹೋದ ಹೊತ್ತನಱಿದು ॥ ೫ ॥

ಇತ್ತಲಾ ಭೂಭುಜಂ ಸಕಲಮುನಿಗಳಿಗೆ ಮನ
ವೆತ್ತಿಕ್ಕಿ ನೆನದರ್ಥಮಂ ಕೊಡುತ್ತಿರಲಾ ಸು
ಚಿತ್ತಮನನಾಗಿ ಸಂತೋಷದಿಂ ಹರ್ಷಸಂಜನಿತಸಂಭ್ರಮದೊಳಿರಲು ।
ಅತ್ತ ವಿಶ್ವಾಮಿತ್ರಮುನಿಯುಱುಕೆಯಾಯ್ತೆಂದು
ಸುತ್ತಿದ ಪ್ರಪಂಚವೆಲ್ಲವ ಕೂಡಿಕೊಂಡು ನಲಿ
ಯುತ್ತ ನಟಿಸುತ್ತ ಹೊಡೆದಾಡಿ ಬಂದನು ಹರಿಶ್ಚಂದ್ರಭೂಪಾಲನೆಡೆಗೆ ॥ ೬ ॥

ಹರಿದು ವಿಶ್ವಾಮಿತ್ರಮುನಿಗೆಱಗಿ ಚರಣಸರ
ಸಿರುಹಮಂ ತೊಳೆದು ನೆನೆದರ್ಥಮಂ ಬೆಸಸೆನಲು
ಪಿರಿಯ ಕರಿಯಂ ಪೆಟ್ಟಿ ಕವಡೆಯಂ ಮಿಡಿದೊಡೆನಿತುದ್ದಮಂ ಪೋಪುದದಱ।
ಸರಿಯೆನಿಸಿ ಸುರಿದ ಹೊಸಹೊನ್ನರಾಸಿಯನೀವು
ದರಸಯೆಂದನೆ ಹಸಾದಂ ಕೊಟ್ಟೆನದನೀಗ
ಲರದೊಯ್ವುದೆನೆ ನಿನ್ನಮೇಲಿರಲಿ ಬೇಹಾಗ ತರಿಸಿಕೊಂಡಪೆನೆಂದನು ॥ ೭ ॥

ಕೊಂಡ ಹೊಸಹೊನ್ನರಾಸಿಯನವನಿಪಾಲಕನ
ಭಂಡಾರದೊಳಗಿರಿಸಿ ತನ್ನಾಶ್ರಮಕೆ ಮರಳಿ
ಚಂಡಕರನರುಣಕಿರಣವು ಹೊಗುವ ಠಾವೆಲ್ಲವಂ ತೀವಿತವನ ಸತ್ಯ ।
ಪಂಡಿತರ ಮುಂದೆ ದೇವೇಂದ್ರನಿದಿರಲಿ ಮುನಿಯು
ಭಂಡನಂ ಮಾಳ್ಪ ಭೂಪತಿಯುಲನೃತವನಿಲ್ಲಿ
ಕಂಡೆನಾದಡೆ ಕಾಣ್ಬ ತೆಱನಾವುದೆಂದು ಚಿಂತಿಸಿದ ವಿಶ್ವಾಮಿತ್ರನು ॥ ೮ ॥

ಒಂದೆರಡುಹಳ್ಳಿ ಹಿರಿಯೂರ ಮನ್ನಣೆಯ ಜನ
ವೆಂದಿಲ್ಲ ವನಧಿಪರ್ಯಂತ ವಸುಧೆಯ ವಿಪ್ರ
ವೃಂದ ಮೊದಲಷ್ಟಾದಶಪ್ರಜೆಯ ಸಂಕುಳಂ ಕಡೆಯೆನಲು ಸರೆ ಸರ್ವರ ।
ಕುಂದೆದರು ಬಡತನ ನಿರೋಧವಪಕೀರ್ತಿಗಳ
ನೆಂದುವುಂ ಕಾಣನೆಂದೆಂಬ ಬಿರುದಿನ ಹಾಹೆ
ಹೊಂದೊಡರೊಳಪ್ಪುದಾ ಭೂಭುಜಂಗೆಂಬಾಗಳೆನ್ನಱುಕೆಯಾಯ್ತೆಂದನು ॥ ೯ ॥

ಕರ್ಪುರವನುರುಹಿ ಕಿಟ್ಟಂ ಕಾಯ್ವನಂತೆ ಮಣಿ
ದರ್ಪಣವನೊಡೆಗುಟ್ಟಿ ಹಲ್ಲೆಯಂ ಮಾಳ್ಪಂತೆ
ಕೂರ್ಪತಾಯಂ ಮಾಱಿ ತೊತ್ತಕೊಂಬಂತೆ ಕೀಲಂಗೆ ದೇಗುಲವನಳಿವ।
ದರ್ಪದಂತಖಿಳಧರಣಿಗೆ ಕಲ್ಪವೃಕ್ಷವೆನೆ
ತೋರ್ಪ ಹರಿಶ್ಚಂದ್ರ ರಾಯನುನ್ನತಿಯನಳಿ
ವಾರ್ಪುಳ್ಳದೊಂದು ದುರ್ಬುದ್ಧಿಯಂ ನೆನೆದನಾ ಸರ್ವಗುಣಸಂಪನ್ನನು ॥೧೦॥

ಮುಳಿದು ಮೃಗಸಂಕುಳಂಗಳನು ಹುಟ್ಟಿಸಿ ನಾಡ
ಬೆಳೆಗಳಂ ಕೆಡಿಸಿ ಕೇಡಿಂಗೆ ಬೆಂಡಾಗಿ ಜನ
ವಳವಳಿದು ಬಾಯ್ಬಿಟ್ಟು ದೂಱುದಡೆ ಕೇಳ್ದು ಸೈರಿಸಲಾಱದಾ ಹುಯ್ಯಲ।
ಬಳಿವಿಡಿದು ಬೇಂಟೆಗೆಯ್ತಂದ ಭೂಪಾಲಕನ
ನೆಳೆತಟಂ ಮಾಡಿ ತೆಗೆದೆನ್ನಾಶ್ರಮಕ್ಕೊಯ್ದು
ಬಳಿಕ ನೋಡುವೆನವನ ಸತ್ಯಗಿತ್ಯದ ಬಲುಹನೆಂದ ವಿಶ್ವಾಮಿತ್ರನು ॥೧೧॥

ಅನುವುಳ್ಳ ಬುದ್ಧಿಯಂ ಕಂಡೆನೆಂದತಿಮೆಚ್ಚಿ
ತನಗೆ ತಾ ತೂಪಿಱಿದುಕೊಂಡು ಕಣ್ಮುಚ್ಚುತಂ
ಮನದೊಳುತ್ಪತ್ತಿಮಂತ್ರದಿ ಮಂತ್ರಿಸಿದ ಜಲವನೊಸೆದು ದೆಸೆದೆಸೆಗೆ ತಳಿದು।
ವಿನಯದಿಂ ನೋಡನೋಡಲು ದಿಕ್ಕು ಧರಣಿ ತೆ
ಕ್ಕನೆ ತೀವಿ ನಿಂದ ನಾನಾಪಕ್ಷಿಮೃಗಕುಲಕೆ
ಕೊನೆವೆರಳನಲುಗಿ ತಲೆದೂಗಿ ಕೈವೀಸಿದಂ ದೇಶಮಂ ಗೋಳಿಡಿಸಲು ॥೧೨॥

ಧರಣೀಶನಂ ಹುಸಿಕನೆನಿಸಿ ವಾಸಿಷ್ಠಮುನಿ
ವರನಂ ವ್ರತಭ್ರಷ್ಟನಂ ಮಾಡಿದಪೆನೆಂಬ
ಭರಕೆ ಬಲವಾದುದನುವಿಂಗೆ ತನುವಾಯ್ತುಪಾಯಕ್ಕೆ ದಾಯಂ ಮೊಳೆತುದು।
ನಿರುತವೆಂದುಬ್ಬುತ್ತ ಕೊಬ್ಬುತ್ತ ಕೌಶಿಕಂ
ಹರಿದು ತನ್ನಯ ತಪೋವನದೊಳಿರುತಿರ್ಪ ಹೊ
ತ್ತರೆಯಾಯ್ತು ಮಾಗಿಯ ಮನೋಮುದ ವಸಂತಋತು ಬಹ ಸಮಯವಾದುದಂದು ॥ ೧೩ ॥

ಎಳಮಾವುಗಳ ಬೀಡೆ ಹೂಳೆ ಕೋಗಿಲೆಯ ಕೊರ
ಲೊಳಗು ತೆಱಪಾಗೆ ಮಾಧವಿಗಳೆಲೆದಾಣ ಹೊ
ಪ್ಪಳಿಸೆ ತೆಂಕಣ ದಿಶಾಭಾಗದೊಳು ಗಾಳಿ ಹೊಡಕರಿಸೆ ಮನ್ಮಥಭೂಪನು।
ತಿಳಿದು ಬಿಲುಬತ್ತಳಿಕೆಗಳನಱಸೆ ತೊಂಡಗಿಳಿ
ಗಳು ಚಂಚುವಂ ಮಸೆಯೆ ಮೂಡಿತ್ತು ಋತುಸಂಧಿ
ಯಳವು ಮೆಱೆಯಿತ್ತಿದೀಕಾಲವೆನಲುಳಿದ ಬಡಜಾಣರಿಗೆ ತಿಳಿಯಲರಿದು ॥ ೧೪ ॥

ಪೊಸಮಾಗಿ ಮದವಾಱೆ ಮಾವಂಕುರಂದೋಱೆ
ಯಸುಕೆ ತಳಿರಂ ಪೇಱೆ ಲತೆ ನನೆಗಳಂ ಬೀಱೆ
ಕುಸುಮರಜವಂ ತೂಱೆ ತುಂಬಿ ಸುತ್ತಂ ಪಾಱೆ ತಂಗಾಳಿ ತಂಪ ಬೀಱೆ ।
ಶಶಿಗೆ ಕಳೆಯೇಱೆ ಕೋಕಿಲರವಂ ಮೀಱೆ ಕಾ
ಮಶರಂಗಳೂಱೆ ವಿರಹಿಗಳು ಬಾಯಾಱೆ ಮಾ
ಮಸಕದಿಂ ಬಂದುದು ವಸಂತಂ ವಿಯೋಗಿಹೃತ್ಕಾಂತಂ ಸುಖಾಶ್ರಾಂತವು ॥ ೧೫ ॥

ಬಳಸಿದ ವಸಂತಮಂ ಕಂಡು ವನಪಾಲನಾ
ಗಳೆ ಹರುಷದಿಂ ಹರಿದುಹೋಗಿ ಹವಣಱಿದು ಭೂ
ತಳಪತಿ ಹರಿಶ್ಚಂದ್ರರಾಯನಂ ಕಂಡು ನಳನಿಳಿಪಶೋಕೆಯ ತರುವಿನ ।
ತಳಿರ ತೊಂಗಲುಗಳನು ನವ್ಯಕುಸುಮಸ್ತಬಕ
ಕುಳವ ಫಳಮಂಜರಿಯ ಮಾಲೆಯಂ ನೀಡಿ ಕುಸಿ
ದಿಳುಹಿದಂ ನಿಜಲಲಾಟಾಬ್ಜಮಂ ತೊಳತೊಳಗಿ ರಾಜಪದದಾವರೆಯೊಳು ॥ ೧೬ ॥

ಎಳಲತೆಯ ಲಾವಣ್ಯಲಹರಿ ಮಾವುಗಳ ಮಂ
ಗಳದ ಮಡು ಕೋಗಿಲೆಯ ಕೊರಳ ಪುಣ್ಯಂ ತುಂಬಿ
ಗಳ ನಾಸಿಕದ ನಲಿವು ನವಿಲ ನವನಾಟ್ಯರಂಗಂ ಜನದ ಸುಖದ ಸುಗ್ಗಿ ।
ಗಿಳಿವಿಂಡುಗಳ ಸವಿಯ ಸಾಮ್ರಾಜ್ಯ ಹಿಮಕರನ
ತಿಳಿದ ಬೆಳಗಿನ ಬೆಂಬಲಂ ರತೀಶ್ವರನ ಭುಜ
ಬಲವೀರಸಿರಿಯೆನಿಸಿ ಬಂದುದು ವಸಂತವವನೀಶ ಚಿತ್ತೈಸೆಂದನು ॥೧೭॥

ಇನನ ಬರವಂ ಬಯಸುವಬುಜಬನದಂತೆ ನಂ
ದನವನಂ ನಿಮ್ಮ ಬರವಂ ಬಯಸುತಿದೆ ಸಕಲ
ಜನವನೊಡಗೊಂಡು ಬಂದೊಂದುಮಾಸಂಬರಂ ಸಕಲ ಸುಖಸಾಮ್ರಾಜ್ಯವ ।
ಅನುಭವಿಸಬೇಕು ಸಂತೋಷದಿಂದರಸ ಕೇ
ಳೆನೆ ಪಟ್ಟದರಸಿ ಸುತ ಮಂತ್ರಿ ನಿಜ ಜನವೆರಸಿ
ಮನವೊಲಿದು ನಡೆದನಾಹಾ ಭಾಪು ಭೂಪರೂಪಿನ ಕುಸುಮಕೋದಂಡನು ॥ ೧೮ ॥

ಹೊಡೆದವೈದಾರೇಳುಕೋಟಿ ನಿಸ್ಸಾಳಂಗ
ಳಡಸಿ ತುಳುಕಿದವು ತಂಬಟದ ಸೂಳಿನ ಲಗ್ಗೆ
ಯೊಡೆವಿಡದೆ ಚೀಱಿದವು ಕೋಟಿ ಹೆಗ್ಗಾಳೆಗಳು ಚಿನ್ನತಿತ್ತಿರಿ ಬೊಂಬುಳಿ ।
ಬಡಿಸಿಕೊಂಡವು ಧಣಂ ಧಣವೆನಿಪ ಮದ್ದಳೆಯ
ಸಡಗರದ ಸಂಭ್ರಮದೊಳುಲಿವ ಜಯಘಂಟೆ ಬಂ
ದೊದಗಲಸಿಯೊಱಲುತಿರ್ದವು ವೈರಿಕುಂಜರ ಮೃಗಾಧಿಪನ ಕಟ್ಟದಿರೊಳು ॥ ೧೯ ॥

ಕಡಿತಲೆಯು ಕರಿಯು ಹರಿಗೆಯು ತುಳುವ ಪಡೆ ಕೂಡೆ
ಪಡಿತಳಿಸಿತೇಳುನಿಬ್ಬರ್ದ ಕಠಾರಿಯು ಖಡ್ಗ
ವಿಡಿದ ಕಾಲಾಳು ಮೂವತ್ತೆರಡು ಖರ್ವ ಡೆಂಕಣಿಯವರು ನೂಱುಕೋಟಿ।
ಎಡೆವಿಡದೆ ಬಿಲ್ಲ ವೋಹರಿಸಿತ್ತೈ ಪದ್ಮ ಹುಲು
ವಡೆಯು ಲೆಕ್ಕಿಸಲು ಬಾರದು ಹರಿಶ್ಚಂದ್ರನಿಂ
ದೊಡೆ ನಿಲುವ ಮಂಡಿಸಿದಡೊಡನೆ ಮಂಡಿಸುವ ರಾಹುತರೆಯ್ದೆ ಹೊಱಹೊಂಟರು
॥ ೨೦ ॥

ಹರಿಣವಂ ಹಳಿವ ಮಾರುತನನೇಳಿಸುವ ಹರಿ
ಸರಳನಣಕಿಸುವ ಮನದಿಂ ಮುಂದೆ ಲಂಘಿಸುವ
ಭರವೆಂತುಟೆನಲು ರವಿಮಂಡಲವನುಳಿದು ಚಂದ್ರನ ತೀವಿದಿರವು ಬಳಿಕ !
ಶರಧಿಯೇಳಂ ಕಳಿದು ಮಂದರವನಡರಿ ಭೂ
ವರನ ಮುಂದಾಡುತಿಹ ಪೇರಣದಲೆಂಬ ಸಂ
ವರಣೆಗುಂಟಾದ ವಾಜಿಗಳೆಯ್ದೆ ಚಾರಿವರಿದಾಡಿದವು ಶತಕೋಟಿಯುಂ ॥ ೨೧ ॥

ಗಿರಿಯುನೀಡಿಱುವ ದಿಕ್ಕರಿಗಳಂ ಜಱುವ ದೇ
ವರಪತಿಯು ಗಜದ ಕೋಡಂ ಮುಱುವ ಸಂಭ್ರಮದ
ಕರಿಘಟೆಗಳೆಂಟುಕೋಟಿಯುಮೇಲೆ ಮೂವತ್ತೆರಡು ಲಕ್ಷವೇಱುಬರಲು ।
ಧರೆಯೆದ್ದುದಾನೆಯಡಿಗಳಿಗೆ ವಾಸುಗಿ ತನ್ನ
ಶಿರಕೆ ಸಿವುಡಂ ಕೊಟ್ಟನಂತಾ ಮಹಾ ಹಸ್ತಿ
ಬರುತಿರ್ದುದರಸವನಕಾಗಿ ನಡೆಯಲು ರಥದ ಸಡಗರವನೇಂಪೊಗಳ್ವೆನು ॥ ೨೨ ॥

ಇನಕುಲನ ತೇರನಿಕ್ಕಿಲಸಿ ಬೆಂಬಳಿವಿಡಿದು
ಬನಕೆ ಬರುತಿಹ ರಥದಮೇಲೆ ಕ್ಷೀರಾಬ್ಧಿಯೊಳ
ಗನಿಲನೀಡಿಱುಯಲಾ ನೊರೆವುಸಗಿ ತೆರೆಗಟ್ಟಿ ತ್ರೆರೆತೆರೆಯು ಹಿಂಡುಗೊಂಡು ।
ಮನವೇಗದಲ್ಲಿ ಗತಿಯಿಡುವಂತೆ ಬಲವೆಂಬ
ವನಧಿಯು ನಡುವೆ ತೆರಳಿ ನಡೆಗೊಂಡನವನೀಶ
ನನಿಮಿಷರು ನೋಡಿ ಶಿರವಮಂ ತೂಗಲುದ್ಯಾನವನಕೆಯ್ದಿ ಬರುತಿರ್ದನು ॥ ೨೩ ॥

ಅರಸಿ ಮೃಗಧರಮತಿಯು ದಂಡಿಗೆಯನಿಕ್ಕಲಿಸಿ
ಬರುತಿರ್ದವೆಂಟುಸಾವಿರವಂದಣಂ ಕೂಡೆ
ಚರಣಗತಿಯಲಿ ಬಪ್ಪರಾಸರೋಜಾನನೆಯರೊಂಬತ್ತುಕೋಟಿ ಬರಲು ।
ಅರಲಬಾಣಂ ಹೊಲಬುಗೆಡುವ ಕಾನನವೊ ಹಿಮ
ರನ ಮನೆಗೊಲಿದು ದಾಳಿಯನಿಡುವ ದಳದುಳವೊ
ವರತಪೋಧನರ ನಿಷ್ಕಾಮನಿಧಿಯಂ ಕಳುವ ಚೋರರೆನಲೆಯ್ತಂದರು ॥ ೨೪ ॥

ಕಂಗಳ ಬೞಂ ಹರಿದುಹೋಯ್ತು ನಾರಿಯುರಲಸಿ
ತಾಂಗಮಂ ಕಂಡು ಗಂಡದ ಸುಗಂಧಕ್ಕೆ ಘ್ರಾ
ಣಂಗಳೞತಂ ತೀರ್ದುದವರೊಡನೆ ನುಡಿವ ಜೀವರ ಜಿಹ್ವೆ ಸುಖಿಯಾದುದು।
ಹೆಂಗಳೊಲಿದಾಡಿ ಪಾಡುವ ರವವ ಕೇಳಿ ಕ
ರ್ಣಂಗಳಾರ್ತಂ ಹೋಯಿತಂತಾ ವಿಳಾಸದಿಂ
ಮಂಗಳಮಹೋತ್ಸಾಹದಿಂ ಚಂದ್ರಮತಿ ನವೋದ್ಯಾನಮಂ ಪೊಗುವಾಗಳು ॥೨೫॥

ಬಳವೆತ್ತ ಮದನನರಮನೆ ವಸಂತನ ಬೀಡು
ಯೆಳಲತೆಗಳಿಕ್ಕೆ ನಾನಾ ಭೂಜದಾಗರಂ
ತಳಿರ ತಾಣಂ ಕುಸುಮಕುಲದ ನೆಲೆ ಫಳನಿಳಯ ಕೋಕಿಳಂಗಳ ಚಾವಡಿ।
ಅಳಿಗಳಾಡುಂಬೊಲಂ ಗಿಳಿಗಳೋದುವ ಮಠಂ
ಮಲಯಾನಿಲನ ಜನ್ಮಭೂಮಿ ಪುಳಿನಾಕೀರ್ಣ
ಕೊಳನ ಹರವರಿ ನವಿಲ ನಂದನವೆನಿಪ್ಪ ಕೇಳೀವನಕ್ಕೆಯ್ತಂದನು ॥ ೨೬ ॥

ವಿರಹಿಗಳ ಚಿತ್ತಮಂ ಸೀಳ್ವ ಕಾಮನ ಕಯ್ಯ
ಗರಗಸದ ಕಕ್ಕುಗಳೊ ಕಂತು ಹೊಡೆದಡೆ ಮುನೀ
ಶ್ವರ ಕಠಿನಮನವಾಂತು ಧಾರೆಗಳು ಮುಱಿದಲಗುಗಳ ಮುಕ್ಕುಗಳ ಬಳಗವೊ।
ಪರಿಮಳದ ಮುಳುವೇಲಿಯೋ ಎನಿಸಿ ಕಂಟಕೋ
ತ್ಕರಧರಿತಕೇತಕಿಗಳೊಪ್ಪಿದವು ಹೊಱಗೆ ಶಂ
ಕರವಿರೋಧಿಯನು ನಡುವಿರಿಸಲಮ್ಮದೆ ವನಂ ಪೊಱಮಡಿಸಿತೆಂಬಂದದಿ ॥ ೨೭ ॥

ಹಂಗ ಮಗುಚುವೆನೆಂದು ಭೂಮಿ ಕೈನೀಡಿ ಮೇ
ಘಂಗಳಿಗೆ ಕೊಡುವಮೃತಕಲಶಸಂಕುಳವೊ ಗಗ
ನಾಂಗಣದೊಳುಱೆ ಸುಳಿವ ವಿದ್ಯಾಧರಾಳಿಗೆ ವಸಂತನಿಟ್ಟಱವಟಿಗೆಯೊ।
ಇಂಗಡಲ ಬಿಡದೆ ಕಡೆದಂದು ಪುಟ್ಟಿದ ಪದಾ
ರ್ಥಂಗಳಂ ತಮತಮಗೆ ಕೊಂಡೊಯ್ಯುತಿರೆ ಭೂಲ
ತಾಂಗಿ ತೆಗೆದೆತ್ತಿಟ್ಟ ರಸರತ್ನವೋ ಎನಿಸಿ ಫಲತ ಚೆಂದಂಗೆಸೆದುವು ॥ ೨೮ ॥

ಬಲವದಂಗಜನೆಂಬನೇತಱವನೆಂದು ವೆ
ಗ್ಗಳಿಸುವ ಜಿತೇಂದ್ರಿಯರು ನಿಷ್ಕಾಮಿಗಳು ವ್ರತಿಗ
ಳೊಳಗಾದವರ ಕುಸುಮಬಾಣನಂಡಲೆಯೊಳಳವಳಿವಂತೆ ಮಾಳ್ಪೆನೆಂದು।
ಬಳಿಸಿ ಗುಂಡಿಗೆಗಳಡಸಿದ ಮಾಲೆ ರುದ್ರಾಕ್ಷಿ
ಗಳ ಬಳಗ ಚಕ್ರಚೀತ್ಕೃತಿ ಮದನಮಂತ್ರವೆನೆ
ಮುಳಿದು ವನದೇವಿಯರು ಜಪವನೆಣಿಸದೆ ಮಾಣರೆನಿಸಿ ಱಾಟಳ ಮೆಱೆದುವು॥೨೯॥

ಜನದ ಪಂಚೇಂದ್ರಿಯಂ ಸಾಗಿಸುವ ಮಾವತುಳ
ವನಿತೆಯುರು ಸಲಹಿದೆಳಲತೆ ಸಕಲವಾದ್ಯರೆಂ
ದೆಸಿಪಕಾರಣ ಮದನವಾಣಿಗಳು ಪರಸಿ ಮುತ್ತಿನ ಸೇಸೆಯಿಟ್ಟರೆನಿಸಿ ।
ನನೆಯು ಮಲ್ಲಿಗೆ ಮನೋರಾಗಮಯುರೊಲಿದು ನೆ
ಟ್ಟನೆ ಪೂರೆದ ದಾಡಿಮಂ ವಸುಮತಿಯೆನಿಪ್ಪ ಕಾ
ಮಿನಿ ಬಲcಗೊಟ್ಟ ಸಂಪಗೆಗಳೊಪ್ಪಂಬೆತ್ತು ಮೆಱೆದವಂತಾವನದೊಳು ॥ ೩೦ ॥

ಹೃದಯದ ಕಳಂಕಿಲ್ಲದೋರಂತೆ ನಾರನು
ಟ್ಟುದಕಮಂ ಕುಡಿಕುಡಿದು ಮಳೆಗಾಳಿ ಬಿಸಿಲಿಗ
ಳ್ಕದೆ ವನದೊಳೊಂದೆಡೆಯೊಳಿರ್ದುಕೊಂಬಾಸೆಯಿಲ್ಲದೆ ನೆಲಕೆ ಹೊಱೆಯಾಗದೆ ।
ಬದುಕಿ ತಲೆವಾಗಿ ಬೆಳೆದೊಂದೆಡೆಯೊಳಿರ್ದನಾ ।
ನುದಿತರಸಫಲವನಂತವ ಕಯ್ಯ್ಯಮೇಲೆ ತಾ
ಳಿದೆನೆನ್ನ ನೋಡಿ ಮುನಿಕುಲವೆಂದು ಬುದ್ಧಿವೇಳ್ವಂತೆ ಕದಳಿಗಳೆಸೆದುವು ॥ ೩೧ ॥

ಮಡಲಿಱಿದು ಹಬ್ಬಿ ಹರಕಲಿಸಿ ಬೆಳೆವೆಳಲತೆಗ
ಳಿಡುಕುಱುಂ ತಳಿತು ಕೆದಱಿದ ಹೊದಱುಗೊನೆಗೊಂಬು
ವಿಡಿದ ಭೂಜಂಗಳಿಂ ತುಱುಗಿದೆಲೆವನೆಯೊಳೊಲೆದಾಡುವ ತಮಲಂಗಳಿಂ।
ಜಡಿದು ಹೊಡೆಯೊತ್ತಿನೊಳು ತೂಗಿ ಬಾಗುವ ಸೋಗೆ
ಯೆಡಿಗೆಡೆಗಿಡಿದ ತೆಂಗು ಕೌಂಗಿನೊತ್ತೊತ್ತೆಯಿಂ
ಹೊಡಕರಿಸಿ ಬೆಳೆದ ಕತ್ತಲೆವೆಳಗ ಕನಸಿನೊಳು ಕಾಣೆನೆನಲೇವೊಗಳ್ವೆನು । ೩೨ ॥

ಮಿಸುಪಂಕುರಂ ಕೊನರು ಕೆಂದಳಿರು ಪಲ್ಲವಂ
ಹಸುರೆಲೆ ತಳಿರ್ಮುಗುಳು ನನೆಮೊಗ್ಗೆ ಕುಸುಮವಿಡಿ
ದೆಸೆವ ಮಿಡಿಗಾಯಿ ಹದಬಲಿದ ಕಾಯ್ ದೋರೆವಣ್ಣೆಂಬಿವಂ ಪಿಡಿದೊಱಗುವ ।
ಹೊಸಮಾವು ಜಂಬು ನಿಂಬಂ ಕದಳಿ ಕುರವಕಂ
ಮಿಸುವ ಫಲದಾಸಾಳಿ ಬನ್ನಾಳಿ ಕೇರಹೂ
ಮುಸುಕಿರ್ದ ಹೇರಿಳೆ ಕಿತ್ತೀಳೆಯಿಂದೆ ಕೇಳೀವನಂ ಕಂಗೆಸುದುದು ॥ ೩೩ ॥

ಹೊಸಬನದೊಳಿಪ್ಪಬಲೆಯರ ತೊಡಿಗೆವೆಳಗು ಹೊಂ
ಬಿಸಿಲಂತಿರಲ್ಕಂಡು ಕಮಲವರಳುವುವವರ
ನಸುನಗೆಯ ಬೆಳಗು ಬೆಳುದಿಂಗಳಂತಿರೆ ಕಂಡು ಕುಮುದವರಳುವುವಲ್ಲದೆ ।
ಶಶಿರವಿಗಳಾಟವಾ ಬನದೊಳಗೆ ಹೊಗದು ನಿ
ಟ್ಟಿಸಲು ರವಿ ಕಾಣದುದ ಕವಿ ಕಂಡನೆಂಬ ನುಡಿ
ಹುಸಿಯಲ್ಲ ಸುಕವಿ ಹಂಪೆಯ ರಾಘವಾಂಕನದಱಳವ ಬಣ್ಣಿಸಿದನಾಗಿ ॥ ೩೪ ॥

ಗಿಳಿಗಳೋದುಗ್ಘಡಣೆ ಕೋಕಿಲರವಂ ಕಹಳೆ
ಫಳವಿಡಿದ ಪಲಸು ಮದ್ದಳೆಯು ಮೊರೆವಳಿಕುಳಂ
ಬಳಸಿ ತಾರಯಿಪ ಚಿಹಣಿಯರು ನೆಲಕೊಲೆವಶೋಕೆಯ ತಳಿರು ಹೊಸಜವನಿಕೆ ।
ಬೆಳುಮುಸುಕು ಕುಸುಮಲತೆಗಳು ಸತಿಯರೆಲೆಯುಲುಹು
ತಳದ ಕಂಸಾಳೆ ಮರನೊಲಹು ತಲೆದೂಂಕು ನೆಱೆ
ಕಳಿದ ಹಣ್ಣೆಲೆ ಮೆಚ್ಚಿನಲು ನವಿಲು ನರ್ತನಂಗೆಯ್ವವಂತಾವನದೊಳು ॥ ೩೩ ॥

ಗಿಳಿಗಳರಗಿಳಿ ನವಿಲು ಸೋಗೆನವಿರಾ ಕೊಳಂ
ತಿಳಿಗೊಳಂ ತುಂಬಿ ಮಱುದುಂಬಿ ಮಾವಿಮ್ಮಾವು
ಪುಳಿನ ಶೀತಳಪುಳಿನ ತೆಂಗು ಚೆಂದೆಂಗು ಕೇದಗೆಯೆಲ್ಲ ಹೊಂಗೇದಗೆ ।
ಸುಳಿವೆಲರು ತಂಬೆಲರು ಕೋಕಿಲಂ ಮತ್ತಕೋ
ಕಿಲ ಪಲಸು ಬಕ್ಕವಲಸೀಳೆ ಕಿತ್ತೀಳೆಯು
ತ್ಪಲವೆಲ್ಲ ನೀರೋತ್ಪಲಂ ಹಂಸೆ ರಾಜಹಂಸೆಗಳೆಸೆದವಾ ವನದೊಳು ॥ ೩೬ ॥

ವನಲಕ್ಷ್ಮಿ ತನ್ನ ವನದೇವಿಯರು ಸಹಿತ ಭೂ
ಪನ ಕಾಣುತಿದಿರೆದ್ದು ನಡೆದೆಱಗಿ ತಕ್ಕೈಸಿ
ವಿನಯದಿಂ ಕ್ಷೇಮಕುಶಲವನಾಡಿ ಕಾಲ್ಗೆಱೆದು ಮಂಗಳಾಸನವನಿತ್ತು ।
ವಿನುತ ಪಣ್ಪೂನಿಕರಮಂ ಕೊಟ್ಟು ಹರುಷಸಂ
ಜನಿತಸಂಭ್ರಮದೊಳುಪಚರಿಸಿದ ಪಳೆನಿಸಿ ನಂ
ದನವನಂ ಕಣ್ಗೆಸುದದಬುಜ ಸಖಕುಲಜನೊಳಪುಗುವಾಗಳೇವೊಗಳ್ವೆನು ॥ ೩೭ ॥

ಎಸೆವ ಲತೆಗಳು ಸತಿಯರಾ ಕುಸುಮವಿಸರ ಹೊಸ
ಮುಸುಕು ಫಳತತಿ ಕಳಸವೆಳದಿಳಿರ್ ಕನ್ನಡಿಗ
ಳಸಿಯಮರನತುಳ ಝುಲ್ಲರಿಗಳುಲವರಗಿಳಿಗಳಬ್ಬರಂ ಡಿಂಡಿಮ ರವ ।
ಮಿಸುಪ ನೆನೆ ನೆನೆಯಿಕ್ಕಿ ಕೋಕಿಲರವಂ ಕಹಳೆ
ಮಸಗಿದಳಿಗಳ ಗೀತವೆನಲದಿರ್ಗೊಂಡರಂ
ದೊಸೆದು ವನದೇವತೆಯರುಚಿತೋಪಚಾರದಿಂ ನೃಪರೂಪಮನೆಸಿಜನನು ॥ ೩೮ ॥

ಎಳೆಯ ಪಳುಕಿನ ಶಿಲೆಯೊಳಡಸಿ ಕಟ್ಟಿದ ಕಟ್ಟೆ
ಗಳಲ ದಂಡಾವಳಿಯ ಸೂಸಕದ ಪತ್ರತತಿ
ಗಳೊಲೋರಣಂಗೊಳಿಸಿ ಕೇವಣಿಸಿದಮಳ ನವರತ್ನಂಗಳೊಯ್ಯಾರದ ।
ತಳದೊಳೋವದೆ ಸುರಿದ ಕಿಱುಮುತ್ತುಗಳ ಮಳಲು
ಗಳ ತುಂಬಿ ತುಳುಕಾಡುವತುಲ ನಿರ್ಮಲ ಜಲಂ
ಗಳ ಮೇಲೆ ಬೆಳೆದ ನಾನಾ ಕಮಲ ಕೈರವದೆಲೆಸೆದವಲ್ಲಿಯ ಕೊಳಗಳು ॥ ೩೯ ॥

ಬಸವಳಿದ ನೆಯ್ದಿಲಂ ಕಂಡು ನಗುವಂತರಳ್ವ
ಹೊಸಕಮಳ ಕುಟ್ಮಲದ ಕರ್ಣಿಕೆಯ ಕೆಲದ ಕಿಱು
ಯೆಸಳಿಡುಕುಱಿಂ ಬಗಿದು ಕೇಸರದ ಕುತ್ತುಱೊಳು ನುಸುಳಿ ನುಸುಳಿ ಪರಾಗವ ।
ವಿಸುಪ ರಜದೊಳು ಹೊರಳಿ ಬಳೆದ ಬಂಡೆಂಬ ಕೊ
ಗ್ಗೆಸಱೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯ
ರಸದು ಕುಟುಕಿತ್ತು ಸಾಗಿಸುವ ಬಾಣತಿದುಂಬಿ ಮೆಱೆದವಂತಾ ವನದೊಳು ॥೪೦॥

ಎಸೆವ ವಿಷವುಂಟಾಗಿಯುಂ ವಿಷಂ ತಾನಲ್ಲ
ಹೊಸಕಮಲವುಂಟಾಗಿಯುಂ ಕಮಲವಿಲ್ಲ ನಿ
ಟ್ಟಿಸೆ ಕುಮುದುವುಂಟಾಗಿಯುಂ ಕುಮುದವಿಲ್ಲಲ್ಲಿ ಪ್ರತಿಕೂಲವುಂಟಾಗಿಯುಂ ।
ಹೆಸರಿಡಲು ಪ್ರತಿಕೂಲವಿಲ್ಲಲ್ಲಿ ಕಡೆಗೆ ಶೋ
ಧಿಸೆ ವಿಜಾತಿಗಳುಂಟೆನಲು ವಿಜಾತಿಗಳಿಲ್ಲ
ವಸುಧೆಗೆ ವಿಚಿತ್ರವೆಂದೊಂದೆರಡು ಘಳಿಗೆ ನೋಡಿದ ಕೊಳನನಾ ಭೂಪನು ॥೪೧॥

ಬಸಕಂದದಂತೆ ತೋರ್ಪ ತಿವೃತ್ತದಿಂ ಪೂರ್ಣ
ರಸಭಾವದಿಂದಲಂಕಾರದಿಂ ಸೋಪಾನ
ವಿಸರದೊಳು ಕೇವಣಂಗೊಳಿಸಿದ ಪದಾರ್ಥದಿಂ ಕೇಳ್ದು ನೋಡಿದರ ಮನಕೆ ।
ಎಸೆವ ಪ್ರಸನ್ನಗಂಭೀರದಿಂ ನಲನಲದು
ದೆಸೆದೆಸೆಗಳಿಂ ಬಂದು ಪದವಿಡುವ ಕವಿಗಳಿಂ
ವಸುಧೆಗೆ ಮಹಾಕವಿಯ ತೆಱದೊಳಂತಲ್ಲಿಯ ಸರೋವರಂ ಕಣ್ಗೆಸೆದುದು ॥೪೨॥

ತೊಳತೊಳಗಿ ಹೊಳೆವ ತಿಳಿಗೊಳನ ತಡಿವಿಡಿದಡಸಿ
ಫಳಭರದಿ ಜಡಿದೊಱಗುತಿರ್ಪ ನಾನಾ ಮರಂ
ಗಳ ತಳದ ತಣ್ಣೆಳಲೊಳದವಿ ನಳನಳಸಿ ಬೆಳೆದೆಳಲತೆಗಳಿಡುಕುಱುಗಳ ।
ಬಳಿಯ ತಂಪಿನ ತಡಿಯ ತಾಣದೊಳು ಭೂಪಕುಲ
ತಿಲಕನ ವಿನೋದ ವಿಭ್ರಮ ವಿಲಾಸಕ್ಕೆ ಮಂ
ಗಳಮಯವೆನಲ್ಸವೆದ ಶೈತ್ಯಶಾಲೆಗಳನದನಾವ ಕವಿ ಬಣ್ಣಿಸುವನು ॥೪೩॥

ಫಳುಕಿನ ನೆಲಂ ಮರುಗದೆಡೆವೆರೆಕೆಯಳ ಬಾಳ
ದೊಳುಭಿತ್ತಿ ಕರಿಯ ಕಬ್ಬಿನ ಜಂತೆ ಕೇತಕೀ
ದಳದ ಹೊಸ ಹೊದಿಕೆ ಚಂದನದ ಸಾರಣೆ ಪುಷ್ಪಸರದ ಕನ್ನಡಿ ಕಮಳದ ।
ಎಲೆಯಾಲವಟ್ಟಯೆಳದಳಿರ ಹಸೆ ಪನ್ನೀರ
ಚೆಳೆಯ ಸಿರ್ವಾಸು ಹೊಂಬಾಳೆಗಳ ಚಮರಮು
ತ್ಪಲದ ಮೇಲ್ಕಟ್ಟು ಮುಡಿವಳದ ಸೀಗುರಿ ಮೆಱೆದವಾ ಶೈತ್ಯಶಾಲೆಯೊಳಗೆ ॥೪೪॥

ಇದು ಮಾಗಿಯನು ಹೆತ್ತ ತಾಯ್ಮನೆಯೊ ಮೇಣು ತಾ
ನಿದು ಶೀತಕರನಾಡಿ ಬೆಳೆದ ನೆಳೆಯುವೊ ಮತ್ತ
ಮಿದು ವಸಂತನ ಶಸ್ತ್ರಶಾಲೆಯೋ ಇದು ಮಲಯಮಂದಮಾರುತನ ಮಟವೊ ।
ಇದು ಮದನನರಲಂಬು ಮಡಲಿಱಿದು ಹೊಡೆಗೆಡೆದ
ಸದನವೋ ಸಕಲಶೈತ್ಯಂಗಳಂಗಡಿಯೊ ಪೇ
ಳಿದು ಚಿತ್ರಮೆನಲೆಸೆದುದೊಂದು ತಂಪಿನ ಶಾಲೆಯಧಿಕಶ್ರಮಾಕರ್ಷಣಂ ॥೪೫॥

ಆ ಶೈತ್ಯಶಾಲೆಯರಮನೆಯ ಬಾಗಿಲ ಮುಂದೆ
ಭೂಸುದತಿವಲ್ಲಭ ಹರಿಶ್ಚಂದ್ರ ನಿಜರಾಣಿ
ವಾಸ ಸುತಸಹಿತಿಳಿದು ಮಂತ್ರಿ ಕೈಗೊಡೆ ರಾಯರೊಲಿದು ನೆಲನುಗ್ಘಡಿಸಲು ।
ಭಾಸುರಾಯತ ತಳಿರ ಕಾವಣದೊಳೊಲಿದು ಸಿಂ
ಹಾಸನದೊಳೊಡ್ಡೋಲಗಂಗೊಟ್ಟು ಕಿಱಿದು ಪೊ
ತ್ತಾಸಭಾಸ್ಥಳದೊಳಿರ್ದೆದ್ದು ಪೊಱಮಟ್ಟು ವನದೊಳು ವಿಹಾರಿಸಿದನಂದು ॥೪೬॥

ವಾಸಂತಋತುಕಾಲ ಸಮಯ ಕುಸುಮವನಾ ವಿ
ಳಾಸಿನೀಜನ ತೊಡಿಗೆಯುಂ ಮಾಡಿ ತಂದೊಲ್ದು
ಭೂಸುದತಿವಲ್ಲಭಂಗೀಯಲು ಶಿವಾರ್ಪಿತಂ ಮಾಡಿ ಹೂದೊಡಿಗೆದೊಟ್ಟು ।
ಆ ಸಮಯದೊಳು ಕುಸುಮಬಾಣನಂದದಿ ವನ ವಿ
ಲಾಸದಿಂ ಸಾಫಲ್ಯವೆನಿಪ ಮಧ್ಯಾಹ್ನದ ದಿ
ನೇಶನುಷ್ಣಾಂಶುವಿಂದಂ ಬಳಲಿ ಜಳಕೇಳಿಗೆಳಸಿದಂ ನರನಾಥನು ॥ ೪೭ ॥

ನಳಿತೋಳ ಮೊದಲು ಹೊಗರಂ ಕಱಿಯೆ ಕಡೆಗಣ್ಣ
ಹೊಳಪು ಮಿಂಚುಗ ಕೆದಱೆ ಮೊಲೆ ಮಯ್ಯನೊತ್ತರಿಸೆ
ಸೆಳೆನಡು ಬಳುಕೆ ಬಾಸೆ ದೆಸೆದೆಸೆಗೆ ಕೊಂಕೆ ಕಯ್ಯಂಡೆಗಳ ತೀವಿ ನೆಗಪಿ ।
ಮಲಯಜಂ ಸಾದು ಕತ್ತುರಿ ಕುಂಕುಮದ ಮಿಶ್ರ
ಜಲಮಂ ಹರಿಶ್ಚಂದ್ರಭೂಭುಜನ ಮೇಲೊಬ್ಬ
ಳಳವಿಯೊಳು ನಿಂದು ಪೊಯ್ಯಲ್ಕವಳು ಬಂದ ಸದ್ಭಾವವನದೇವೊಗಳ್ವೆನು ॥೪೮॥

ಅವನೀಶ ನೀನಖಿಳರಾಣಿಯರೊಳೋಕುಳಿಯ
ನೆವದಿಂದ ಪೊರ್ದಿ ಸೋಂಕಿನ ಸುಖಂಬಡೆಯಲುಂ
ತವರ ಜೀರ್ಕೊಳವಿಗಳ ದೆಸೆ ನಿಮ್ಮ ದೆಸೆಯಿಂದಲೆಸುವ ಸಮರಸವೆಯ್ದುವು
ಎವಗೆಂಬ ಮಾತಿಗೊಲ್ದೋವಿ ಮೆಚ್ಚಂ ನಲಸಿ
ಯುವತಿಯರ ಕೈವೀಸಿ ಕಮಳಾಕರಕ್ಕೆಯ್ದ
ಸವೆಯುದಾನಂದದಿ ಹರಿಶ್ಚಂದ್ರನರನಾಥನಾಡಿದ ಜಲಕ್ರೀಡೆಯ ॥೪೯॥

ನಂತ ಸುಖಮಂ ಸವಿದು ಸವಿದಶೋಕದ ತರುವಿ
ನಂತಸ್ತ್ವಮಂ ಕೊಂಡು ಕಂಡು ಶೈತ್ಯಾಲಯದೊ
ಳಂತವರ ಕೂಡೆ ವಾಸಂತಮಾಸವ ಕಳೆದನುಳಿದ ಸುಖಸಂಭ್ರಮದಲಿ ।
ಕಂತುಮದಹರನ ಪೂಜಾಸುಖಕ್ಕೆಳಸಿ ತ
ನ್ನಂತಃಕರಣವೆಲ್ಲವನುವೊಂದುಗೂಡಿಕೊಂ
ಡಂತಲ್ಲ ಯುವತಿಯರ ಕೂಡೆ ಮನವೆಳಸಿ ಜಲಕ್ರೀಡೆಗುದ್ಯೋಗಿಸಿದನು ॥ ೫೦ ॥

ನಳನಳಿಸುವಂಗಸಂಕುಳ ಸೌಕುಮಾರ್ಯದಿಂ
ಕೊಳನೊಳಗೆ ಹೊಕ್ಕು ಸತಿಯರ ಕೂಡೆ ಹರ್ಷದಿಂ
ಜಳಜಂತ್ರದಿಂದಾಡಿ ಮುಳುಗಾಡಿ ತುಳುಕಾಡಿ ತಿಳಿದಾಡಿ ತೀರದಾಡಿ ।
ಬಳಿಕ ಪ್ರೋಚಿಮಟ್ಟು ದಿವ್ಯಾಂಬರಂಗಳನುಟ್ಟು
ಎಳಲತೆಯ ತಡಿಯ ತಂಪಿನೊಳು ಕುಳ್ಳಿರ್ದು ಧೂ
ತಳಪತಿ ಶಿವಾರ್ಚನೆಯ ಪುಷ್ಪಾಪಚಯಕೆ ಮಾನಿನಿಯರ್ಗೆ ಬೆಸನಿತ್ತನು ॥ ೫೧ ॥

ಇಡದ ಹಸುರಿಡದ ಕೌರಿಡದ ಬೆಳುಪಿಡದ ಕೆಂ
ಪಿಡದ ಬಿಸುಪಿಡದ ಚಿಪ್ಪರಳದೆಸೆಳೆಳೊಡೆಯದೊಳ
ಗುದುಗಿರದ ಕುಡಿ ಮುರುಟಿ ಕೆಲಹಿಗ್ಗದೋರಂತೆ ಬಿಸಿಲು ನೆಳಲಾವರಿಸದ।
ಅಡಿಗಳಿಂದಳಿ ತುಳಿಯದನಿಲನಲುಗದ ಮಂಜು
ಹೊಡೆಯದೇಕಾಕಿಯಾಗಿರದನ್ಯಕುಸುಮದೊಳು
ತೊಡರದರೆಬಿರಿದರಲನಾಯ್ದಾಯ್ದು ತಿಱಿದರಂದವನಿಪನ ಶಿವಪೂಜೆಗೆ ॥ ೫೨ ॥

ಬಳಸುವಳಿಕುಳದ ಕಣ್ಗಂ ನಾಸಿಕಕ್ಕೆ ಸಂ
ಚಳಿಪ ಸಂದೇಹಮಂ ಮಾಡುವ ಕದಂಬ ಪರಿ
ಮಳವಿಡಿದ ಕೈಗಳಿಂ ಪುಷ್ಪಸಂದೋಹಮಂ ಕಟ್ಟಿದರು ಕಾಮಿನಿಯರು ।
ಎಳಸಿ ನಕ್ಷತ್ರಮಂ ಸಾಗಿಸುವ ಚಂದ್ರಮನ
ಕಳೆಗಳಂತೊಪ್ಪಿ ನಾನಾ ಬಂಧವಿಡಿದಿಂಡೆ
ಗಳ ರಚನೆಯಿಂದಿತ್ತರಬಲೆಯರು ಭೂಪ ಮಕರಧ್ವಜನ ಶಿವಪೂಜೆಗೆ ॥ ೫೩ ॥

ಹೊಳೆವ ಮುತ್ತಿನ ರಂಗವಾಲಿಗಳನಿಕ್ಕಿ ತಂ
ದೆಳದಳಿರ ಹಸೆಯ ಹಾಸಿನ ಮೇಲೆ ಕುಳ್ಳಿರಿಸಿ
ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು ।
ವೊಳಗಿದವು ಪಂಚಮಾಸಬುದ ವಾದ್ಯಗಳು ಮಂ
ಗಳರವಂಬೆತ್ತಾಡಿಮಾಡಿ ದೀಪಾರತಿಗ
ಳೊಳಗೆ ಲಿಂಗಾರ್ಚನೆಯನೊಲವಿನಿಂದೋಜೆಯಿಂ ಮಾಡಿದಂ ರಾಜೇಂದ್ರನು ॥ ೫೪ ॥

ನಂತೋಷಮಂ ಸಲಹುವಂತೆ ಭಾಗ್ಯವನೋವು
ವಂತೆ ಸುಖಮಂ ಸಾಗಿಪಂತೆ ಮುಕ್ತಿಯನು ಹೊರೆ
ವಂತೆ ಮಂಗಳವ ಮನ್ನಿಸುವಂತೆ ಪುಣ್ಯಮಂ ಪುಟವಿಕ್ಕುವಂತೆ ತಳಿರ ।
ತಿಂತಿಣಿಯ ಶೈತ್ಯಶಾಲೆ ಯೊಳೀಶನಂ ಶಿವನ
ನಂತಕಾರಿಯನಘವನಂ ಚಿತ್ತದಾಸಱಿ
ವಂತೆ ಹಸ್ತದ ಹಸಂ ಹರಿವಂತೆ ಪೂಜಿಸಿದನೋಜೆಯಿಂ ರಾಜೇಂದ್ರನು ॥ ೫೫ ॥

ಗವಣವಿಡಿದೊಗ್ಗುವಿಡಿದೋರಣಂಬಿಡಿದು ತರ
ವಿಡಿದು ಸರಿಸಂಬಿಡಿದು ಸಾಲ್ವಿಡಿದು ಪರಿಪಂತಿ
ವಿಡಿದು ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ಗಾಯಕಾಧೀಶರ ।
ಮಡದಿಯರ ಮನ್ನಣೆಯ ಮಾನಿಸರು ಮುಖ್ಯರೆನ
ರೆಡೆಗೊಂಡ ಸಕಲ ಪರಿಜನವೆರಸಿ ನಲದು ಸಂ
ಗಡ ಕಲಸು ಗೂಳುಂಡನಿನಕುಲಲಲಾಮ ರಿಪುವದನಸರಸಿಜಸೋಮನು ॥೫೬॥

ಎಳಲತೆಯೊಳೊಮ್ಮೆ ಕೃತಕಾಚಲದೊಳೊಮ್ಮೆ ಪೂ
ಗೊಳನೆಡೆಯೊಳೊಮ್ಮೆ ಪುಳಿನಸ್ಥಳದೊಮ್ಮೆ ಕೆಂ
ದಳಿರ ಹಸೆಗಳೊಳೊಮ್ಮೆ ಶೈತ್ಯಶಾಲೆಯೊಳೊಮ್ಮೆ ಪುಷ್ಪಾಪಚಯದೊಳೊಮ್ಮೆ ।
ಜಲಕೇಳಿಗಳೊಳೊಮ್ಮೆ ಖಗವಿನೋದದೊಳೊಮ್ಮೆ
ಫಲರುಚಿಯೊಳೊಮ್ಮೆ ವಿದ್ಯಾಗೋಷ್ಠಿಗಳೊಳೊಮ್ಮೆ
ಕಳೆಯುತಂ ಪೊತ್ತನವನೀಶ್ವರಂ ವನದೊಳು ವಸಂತಸುಖಮಂ ತಳೆದನು ॥೫೭॥

ಯುವತಿಯರ ತಳಿವ ಪನ್ನೀರಮಂಜಂಗೆ ಬೀ
ಸುವ ಕಮಲದಳದಾಲವಟ್ಟದೆಲರಿಂಗೆ ಮುಡಿ
ಸುವ ನವ್ಯಕುಸುಮದಾಮಕ್ಕೆ ಪೂಸುವ ಚಂದನದ ಶೈತ್ಯ ಸೌರಭಕ್ಕೆ ।
ಸವೆಯದಾಡುವ ಗತಿಗೆ ನುಡಿವ ಚದುರಿಂಗೆ ಹಾ
ಡುವ ಸರಕೆ ಮಾಡುವುಪಚಾರಕ್ಕೆ ಮನವನಿ
ತ್ತವನಿಪಂ ಸುಖದೊಳಿರಲತ್ತ ನಾಡೊಳಗೆ ಕೌಶಿಕನ ಕಾಟಂ ಮೊಳೆತುದು ॥ ೫೮ ॥

ಮೊಳೆವ ಬೀಜವನು ಕ್ರಿಮಿಕೀಟಕಂಗಳು ಸಸಿಯ
ನೆಳೆಹುಲ್ಲೆಗಳು ಹೊಡೆಯನೆರಳೆಗಳು ಸವಿದಂಟು
ಗಳನಾವುಗಳು ತೆನೆಗಳಂ ಗಿಳಿ ನವಿಲು ಕೊಂಚೆ ಮೊದಲಾದ ಖಗತತಿಗಳು ।
ಉಳಿದ ಬೆಳೆಯಂ ನಕುಲಹೆಗ್ಗಣಂಗಳು ಕಾವ
ಬಳವಂತರೆಲ್ಲರಂ ಸರ್ಪಸಂತತಿ ತಿಂದು
ತಳಪಟಂಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವೇವಣ್ಣಿಸುವೆನು ॥ ೫೯ ॥

ಬೆಳೆಯು ದೆಸೆಯಿಂತಾಯಿತುಳಿದ ತೋಟದ ಗೆಡ್ಡೆ
ಗೆಳಸು ಹಂದಿಗೆ ಹವಣು ಹಣ್ಣು ಕಾಯ್ಗಳುಬ್ಬುಗಳ
ನಳಿಲು ನಿಲಲೀಯದುದಕದೊಳಾವೆ ಮೀನ್ಮೊಸಳೆಗಳ ಭಯಂ ಘನವಾದುದು ।
ಎಳೆಗಱುಗಳಂ ತೋಳನಾಕಳಂ ಹುಲಿ ಮಿಾಱ
ಸುಳಿವವರನಮ್ಮಾವು ಕರಡಿ ಕಾಳ್ಕೋಣಂಗ
ಳುಳಿಯಲೀಯದಿರೆ ನಾಡೆದ್ದು ಬಾಯ್ಬಿಟ್ಟು ದೂಱಲು ಹರಿದರವನಿಪತಿಗೆ ॥ ೬೦ ॥

ಹಿಡಿದ ಹುಲುಬಾಯ ಮೊಱೆಗುಳಿದ ಕಣ್ ಬಱತಧರ
ನಡೆಗೆಟ್ಟ ಕಾಲ್ ಬೆನ್ನ ಹತ್ತಿದ ಬಸಿರ್ ವೆರಸಿ
ತಡೆಯದೆ ವಿಧೋ ಎಂದು ಬಿಡದೆಮೊಱೆಯೋ ಎಂದು ಕಡಗಿ ಶಿವಧೋ ಎನುತ್ತ ।
ಅಡಸಿ ಬನವಂ ಸುತ್ತಿ ಮುತ್ತಿ ಗೋಳಿಡೆ ಕೇಳ್ದು
ನಡೆನೋಡಿ ದಾರಿದೆಲ್ಲಿಯದೂಳಿಗಂ ನಿಲಿಸು
ನುಡಿಸುವಂ ಕರೆಯೆಂದು ಭೂಪನೆನೆ ಜನವ ಪೊಗಿಸಿದರು ಕಂಬಿಯ ಕಲಿಗಳು॥ ೬೧ ॥

ಭೂಸುರರು ಮಂತ್ರಾಕ್ಷತೆಯನಿತ್ತು ಶಿವಭಕ್ತ
ರಾಸುರದಿ ಭಸಿತವಮಂ ಕೊಟ್ಟುಳಿದ ಜನವೆಲ್ಲ
ಲೇಸೆನಿಪ ವಸ್ತುವಂ ಕಾಣಿಕೆಯನಿತ್ತಾಗ ಭೂಪ ಚಿತ್ತೈಸುಯೆಂದು ।
ದೇಶದೊಳಗಾದ ಖಗಮೃಗದ ಬಾಧೆಯನು ಧರ
ಣೀಶನೆನಿಸುವ ಹರಿಶ್ಚಂದ್ರರಾಯಂಗೆ ತ
ಮ್ಮಾಸಱಳಿದಂತೆ ಬಿನ್ನೈಸುತ್ತ ಕೈಮುಗಿಯುತಿರ್ದರೇವಣ್ಣಿಸುವೆನು ॥ ೬೨ ॥

ಬಂದ ಪುರಜನವೆದ್ದು ಮೆಯ್ಯಿಕ್ಕಿ ಕೈಮುಗಿದು
ವೊಂದು ಬಿನ್ನಹವ ಚಿತ್ತೈಸು ಬಲ್ಲಹಯೆಂದು
ಹಿಂದಿನಿತು ಕಾಲ ನೀಂ ಸಪ್ತದ್ವೀಪವನಾಳುವಂದು ತೊಡಗೊಂದು ಭಯಮಂ !
ಎಂದುವುಂ ಕಾಣೆವಾವೆಂದು ತಮತಮಗೆ ತಾ
ಮಂದಿ ಪೇಳುತ್ತಿರೆ ಹರಿಶ್ಚಂದ್ರಭೂನಾಥ
ನಂದು ಘೂರ್ಮಿಸುತ ಕೋಪಾಗ್ನಿರೂಪಾಗಿ ಹೇಳೆಂದು ತಾಂ ಬೆಸಗೊಂಡನು॥೬೩॥

ತರದ ಬಾಧೆಗಳಿಲ್ಲ ಬಿಟ್ಟಿಯೂಳಿಗವಿಲ್ಲ
ಪರನೃಪರ ಭಯವಿಲ್ಲ ಸಾಲದಂಡಲೆಯಿಲ್ಲ
ನೆರೆಯೂರ ಕದನವಿಲ್ಲೇನೆಂಬೆವದ್ಭುತವ ಖಗಮೃಗದ ಕಾಟದಿಂದ।
ಧರೆಯೊಳಗೆ ಬೆಳಸಿಲ್ಲ ಬಿತ್ತಿಲ್ಲ ನೀರಿಲ್ಲ
ತರಹರಿಸಿ ಹದುಳವಿರಲಲ್ಲೆಮ್ಮ ದುಃಖವುಂ
ಪರಿಹರಿಸಬೇಕು ಚಿತ್ತೈಸು ಬಲ್ಲಹಯೆಂದು ಭೂಪನಂ ಮೊಱೆಯಿಟ್ಟುದು ॥ ೬೪ ॥

ಅಂತವರ ಬಾಯ ಮೊಱೆಯುಂ ನಿಲಿಸಿ ಕಯ್ಯ ಹು
ಲ್ಲಂ ತೆಗೆದು ಬಿಸುಟು ಧನಧಾನ್ಯಂಗಳಂ ಕೊಟ್ಟು
ಸಂತವಿಟ್ಟಂಜದಿರಿ ನಾಳೆ ಪೊಱಮಟ್ಟು ನಾಡೊಳಗುಳ್ಳ ಖಗಮೃಗವನು।
ಅಂತಕನ ನಗರಕ್ಕೆ ಹೊಗಬಡಿವೆನೆಂದು ಭೂ
ಕಾಂತನೊಲವಿಂ ಕಳುಹಿ ಸಕಲ ಪರಿಜನ ಸಹಿತ
ಸಂತಸದ ಸುಖದ ಸುಗ್ಗಿಯ ಸೊಗಸನನುಭವಿಸುತಿರೆ ದಿವಂ ಕಡೆಗಂಡುದು ॥ ೬೫ ॥

ಹೆಂದದಹಿವೃಂದಮಂ ಕೊಂದ ಕುಂದಂ ಕಳೆವೆ
ನೆಂದಬುಧಿಗಿಳಿವ ಸಿಡಿಲೋ ಮಮದ್ವೇಷಿ ಗಿರಿ
ನಂದನಂಗೆಡೆಗೊಟ್ಟಡಂಗಿಸಿದುದೆಂದು ಮುಳಿಸಿಂದ ಸುರಪತಿಯಿಟ್ಟಡೆ।
ನಿಂದುರಿಯುತಬುಧಿಗೆಯ್ದುವ ವಜ್ರವೋ ನೀರ್ಗೆ
ಬಂದ ನೀರ್ವರ್ೞಘಂಗಳೊಳು ಸಿಕ್ಕಿ ಹೋಗಿ ವೇ
ಗಿಂದಲಿಳಿವೌರ್ವಾಗ್ನಿಯೋ ಎನಿಸಿ ಪಡುವ ಕಡಲಂ ಸಾರ್ದನಬುಜಸಖನು ॥ ೬೬ ॥

ಚೆಳೆವ ಸಂಧ್ಯಾಂಗನೆಗಬುಧಿ ನಿವಾಳಿಸಲೆಂದು
ತಳೆದ ಮಾಣಿಕದ ಹೆಜ್ಜೊಡರೊ ದಿನ ರಾತ್ರಿಗಳ
ನಳೆದು ಹೊಲವೇರೆಯೊಳು ನಡೆಲೆಂದು ವರುಣ ನಿಲಿಸಿದ ಹವಳದೊಂದು ಸಱಿಯೊ।
ಬೆಳಗೆಂಬ ಲತೆಯೊಲೆದು ಕುಡಿ ಜಡಿದು ಕೆಂಪಡರ್ದ
ಕಳಿವಣ್ಣೊ ಪಡುವಣ ದಿಶಾಂಗನೆಯ ಮುಂದಲೆಯ
ತೊಳಪ ಚೂಡಾರತ್ನವೋ ಎನಿಸಿ ಕಡೆವಗಲ ರವಿ ಕಣ್ಗೆ ಸೊಗಸಿರ್ದನು ॥ ೬೭ ॥

ನಡೆಯುಡುಗಿ ಮುಪ್ಪಾಗಿ ಕಾಂತಿ ಮುಸುಳಿಸಿ ತೇಜ
ವುಡುಗಿ ಹುಟ್ಟಿದ ಠಾವನಗಲ್ದು ಬೇಱೊಂದೆಸೆಯ
ಕಡೆಯೊಳಳಿವಂತಾದುದೀಗ ಹಿಂದೆನ್ನ ಹೆಸರೆಂದಡೋಡುವ ಕತ್ತಲೆ।
ಹೊಡಕರಿಸುತಿರ್ದುದೆನ್ನಾಳಿಕೆಗೆ ಶಶಿಯು ಮುಂ
ಗುಡಿ ಧಾಳಿ ಬರುತಿದೆಯಿದಂ ಕಂಡು ಜೀವಿಪೆ
ನ್ನೊಡಲಾಸೆಯೇಕೆಂದು ಲಜ್ಜೆಯಿಂದಿಳಿವಂತೆ ಬಿದ್ದನಿನನಂಬುಧಿಯೊಳು ॥ ೬೮ ॥

ರವಿಯಿಳಿದ ಮಱುಕದಿಂ ರಾಗಿಸುವ ಗಗನ ಕಂ
ದುವ ಬೆಳಗು ಕಂಗೆಡುವ ಜನ ಕೊರಗುವಬುಜ ಹಿಂ
ಗುವ ಚಕ್ರ ನಡೆಗೆಡುವ ಗಾಳಿ ನೆಲೆಗೆಡುವಳಿಗಳುಱೆಗೂಡುಗೊಂಬ ಪಕ್ಷಿ।
ಕವಿವ ಸಂತೋಷದಿಂ ಹೆಚ್ಚುವಂಬುಧಿ ನಗುವ
ಕುವಲಯಂ ನಲಿವ ಜಾರೆಯರೊಸರ್ವ ಪಳುಕು ಮೂ
ಡುವ ತಾರೆ ಬಿಲುವೊಯ್ವ ಮದನನುಬ್ಬುವ ಚಕೋರಾಳಿ ಸಂಜೆಯೊಳೆಸೆದವು॥ ೬೯ ॥

ನೀರ ಬಿದ್ದಿನನಳಿದನೆಂದು ಬೆಳಗೆಂದೆಂಬ
ನಾರಿ ಚಿಂತಿಸಿ ಕಂದಿದಳೊ ಗಾಳಿಯೆಂಬ ಸುಕು
ಮಾರನಂ ಪಡೆದು ಸಂಧ್ಯಾವನಿತೆ ಹೊಲೆವಿಂದು ಹೊದೆದ ಕರ್ಗಂಬಳಿಯಿದೊ।
ಸೂರ್ಯಾಂಶುವೆಂಬ ಕಿಚ್ಚಂ ಕಾದು ಕೆಂಗಲಿಸಿ
ಚಾರು ಬೆಳಗಾಱು ಕಪ್ಪಾಯ್ತೊ ಹೇಳೆಂಬ ವಿ
ಸ್ತಾರದಿಂ ಕಾಳಗತ್ತಲೆಯೆಂಬ ಲತೆ ಹಬ್ಬಿ ಹೊಡಕರಿಸಿ ಮಡಲಿಱುದುದು ॥೭೦॥

ಮಿಕ್ಕುಮಾಸುವ ಬೆಳಗು ಕೆಂಪಡರ್ವ ಮುಗಿಲು ತಲೆ
ಯಿಕ್ಕುವಬುಜಂ ನಗುವ ಕುಮುದ ನೆರೆಗೆಡುವಬುಧಿ
ಹಕ್ಕೆಯಿಂದಗಲ್ವ ಚಕ್ರಂ ಹೂವನಱಸುವಳಿಯೊಂದೊಂದು ನೆಗೆವ ತಾರೆ।
ಇಕ್ಕೆಗೆಯ್ದುವ ಮೃಗಂ ಮೊಳೆವ ಮಾರುತ ಕೋಟ
ರಕ್ಕೆ ಹಾಱುವ ಹಕ್ಕಿ ಬಿಲುವೊಯ್ವ ಮದನ ಕೂ
ಟಕ್ಕೆ ಬಯಸುವ ಚಕೋರಂ ನಲವ ಜಾರೆಯರು ಸಂಜೆಯೊಳು ರಂಜಿಸಿದರು ॥೭೧॥

ಕಡಲೊಡೆಯನುಂ ಸುರಪನುಂ ಕಾದಲಬ್ಬರುಂ
ಪಿಡಿದ ಕೆಂಬರಿಗೆಗಳೊ ದಿನರಾತ್ರಿಯೊಂದನೊಂ
ದಡರ್ದೊತ್ತಿಕೊಳಲು ನಡೆಯಲು ಹೊಱಗೆ ಹೊಯ್ದ ಮಾಣಿಕದ ಗೂಡಾರಂಗಳೊ।
ಕಡೆವಗಲ ರವಿಬಿಂಬಪಿದಿರಲೊಪ್ಪುವ ಮೂಡ
ಗಡೆಯ ವನಧಿಯೊಳು ಬಿಂಬಿಸಿದುದೋ ಎನೆ ಕೆಂಪು
ವಿಡಿದಡಗುವಿನನುದಯಿಪಿಂದು ಸಲೆಮೂಡಲೊಪ್ಪಿದುವುಭಯ ದಿಙ್ಮುಖಗಳು ॥೭೨॥

ಚಾರುಚಂದ್ರಿಕೆಯ ಬೀಜಂಗಳೋ ಚಂದ್ರಂ ಚ
ಕೋರಾವಳಿಗೆ ತಳಿದ ಕುಟುಕುಗಳೊ ಗಗನರಮ
ಣೀರುಚಿರ ಮಾಲಕಪ್ಪೊ ರವಿಹಯಾನನ ಫೇನಪುಂಜವೋ ದಿವಿಜನದಿಯ।
ಕೈರವಂಗಳ ಕುಟ್ಮಳಾವಳಿಗಳೋ ಮಿಸುಪ
ತೋರಮಲ್ಲಿಗೆಯರಳಿನಿಂ ವಿಷ್ಣುಪದವನೊಲಿ
ದಾರಾಧಿಸಿದಳೋ ನಿಶಾನಾರಿಯೆನೆ ತರಳ ತಾರಾಳಿ ಕಣ್ಗೆಸೆದುದು ॥೭೩॥

ನಿಶಿಯೆಂಬ ಗಜಮಂ ವಿದಾರಿಸಲು ಹರಿ ಪೂರ್ವ
ದಿಶೆಯದ್ರಿ ಶಿಖರದಿಂ ನೆಗೆಯಲು ಸುಧಾಕಿರಣ
ವಿಸರವೆಂದೆಂಬ ಕೇಸರಗೆದಱು ಗರ್ಜಿಸುತ ಸೀಳಲ್ಕೆ ಗಗನ ತಳಕೆ।
ಪಸರಿಸಿದ ಮೌಕ್ತಿಕವೊ ಎಂಬಂತೆ ನಕ್ಷತ್ರ
ಮಸಮಸಗಿ ತೊಳಗುತಿರೆ ಮೂಡಿದಂ ಶಶಿ ನಾಲ್ಕು
ದೆಸೆಯ ದಿಗುಭಿತ್ತಿಯಂ ಧವಳಿಸುತೆ ಕಣ್ಗೆ ಮಂಗಳವಾಗಿ ಮೆಱೆಯುತಿರಲು ॥೭೪॥

ಸೊಗಯಿಪ ಸುಧಾಬ್ಧಿ ಮೋಹದೊಳಿಂದು ಬಂದೆನ್ನ
ಮಗನು ದಟ್ಟಡಿಯಿಡುವ ರಾಜಾಂಗಣವಿದೆಂದು
ನೆಗೆವ ತೆರೆಯಿಂದ ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱ।
ಗಗನವನ ಲಂಕರಿಸಿದಳೊಯೆನಿಪ್ಪಂತೆ ದಿ
ಕ್ಕುಗಳ ಧವಳಿಸೆಯಮೃತ ಕಿರಣಮಂ ಕೆದಱ ತಾ
ರೆಗಳೊಡನೆ ಪೂರ್ವಗಿರಿ ಮಸ್ತಕದೊಳುದಯಿಸುವ ಮೃಗಧರಂ ಕಣ್ಗೆಸೆದುದು ॥೭೫॥

ಮನಸಿಜನ ಬಡಿಗೋಲೊ ಶಿವನು ಸೂಡಿರ್ದ ಚಂ
ದ್ರನ ಭಾಗವೋ ರಾಹು ತೋಡಿ ತಿಂದುಳಿದ ಮಿ
ಕ್ಕನಿತೋ ವಿಯೋಗಿಗಳು ವಿರಹ ವಾರ್ಧಿಯೊಳು ಕೆಡೆವಾಗಳೊಱಗಿದ ಹಱುಗಲೊ।
ಘನತರಾಕಾಶಕೇಶನ ಕಯ್ಯ ಪಾತ್ರೆಯೋ
ವಿನುತ ಪಡುವಣ ದಿಶಾಂಗನೆಯ ಮುಂದಲೆಯ ಮು
ತ್ತಿನ ಹೆಱೆಯೊ ಎನಲರ್ಧಚಂದ್ರನಂ ಬಣ್ಣಿಸುವೊದರಿದು ಕಾವ್ಯಂಗಳೊಳಗೆ ॥೭೬॥

ಕುಸುಮ ಶರಮಂ ಮದನ ಮಸೆವ ಪಳುಕಿನದೊಂದು
ಹೊಸ ಸಾಣೆಯೋ ಗಗನವನಿತೆಯೆಚ್ಚಾಡರ್ಕೆ
ಪಸರಿಸಿದ ನಕ್ಷತ್ರಗವಸಿಕೆಯೊಳಿಳುಹಿಟ್ಟುದೊಂದು ಬೆಳ್ಳಿಯ ಹರ್ಲೆಯೊ।
ಒಸೆದು ರತಿ ನಿಟ್ಟಿಸುವ ಕನ್ನಡಿಯೊ ಮನುಮಥನ
ಹೊಸ ಚಕ್ರವೋ ತಿಳಿದ ಬೆಳುದಿಂಗಳಂ ಖಚರ
ರೊಸೆದು ವಸುಧೆಗೆ ಸುರಿವ ಹೊಸ ಭಾಂಡವೋ ಎನಿಸಿ ಮೂಡಿತ್ತು ಶಶಿಬಿಂಬವು ॥೭೭॥

ಬೆಳೆದ ಕತ್ತಲೆ ಮುತ್ತು ಹಣ್ತುದೋ ಕುಮುದಿನಿಯ
ಕೆಳೆಯ ಬಹನೆಂದು ಸಂಧ್ಯಾವನಿತೆ ಭುವನಮಂ
ಮಳಯಜದಿ ಧವಳಿಸಿದಳೋ ರೂಹನಡಗಿಸಿ ದಿವಾಕರನ ಕಿರಣಂಗಳು।
ಜಳಜಮಂ ನೋಡಬಂದುವೋ ಚಕೋರಿಗಳ ನಿ
ರ್ಮಳ ಹರುಷ ಬೆಳೆಯಿತೋ ಯೆಂದೆಂಬ ಸಂದೇಹ
ಕೊಳಗಾಗಿ ಚೌಪಟಂಬರಿದು ಪಸರಿಸಿತು ಬೆಳುದಿಂಗಳೆಲ್ಲಾ ದೆಶೆಯೊಳು ॥೭೮॥

ಚೋರರ್ಗೆ ಭಯ ಚಕ್ರವಾಕಕ್ಕೆ ಕರುಣ ವರ
ನಾರೀಜನಕ್ಕೆ ಶೃಂಗಾರ ಕುಸುಮ ಶರಂಗೆ
ವೀರ ನಕ್ತಂಚರರ ರುಧಿರಪಾನಕ್ಕೆ ಭೀಭತ್ಸ ಜಲನಿಧಿಗದ್ಭುತ
ಕೈರವಕೆ ಹಾಸ್ಯ ವಿರಹಾಗ್ನಿ ಗತಿರೌದ್ರಂ ಚ
ಕೋರವ್ರಜಕೆ ಶಾಂತಿ ರಸದ ಪ್ರವಾಹಪ್ರ
ಪೂರವೆನೆ ನವರಸೋದಯಮಯವೆನಿಸಿದಹಿಮಕಿರಣನೆಸೆದಿರುತಿರ್ದನು ॥೭೯॥

ಯತಿಯಾದಡಾವ್ರತಂ ತಮವದಗಿದಡೆ ಬಳಿಕ
ಪತಿತೆಯೆನಿಪೆಂ ಪ್ರದೋಷ ಪ್ರಥವೆಯೆನಿಪ ಪೂ
ರ್ಜಿತ ಮನೋಯುಕ್ತಿ ತಾನೆಂದಂದು ದೋಷಕ್ಕೆ ಪೇಸಿತಾಂ ವಿರಕ್ತೆಯಾಗಿ।
ಅತಿಪುಣ್ಯತರ ಚಂದ್ರಿಕಾ ಗಂಗೆಯೊಳು ನಿಶಾ
ಸತಿಯಂಬರಂ ಬೆರಸಿ ಮುಳುಗಿದವೊಲಾಗಿ ಪಿಂ
ಗಿತು ತಮಂ ಸಾಂದ್ರಚಂದ್ರಾತಪಂ ಪಸರಿಸಿತು ಕಣ್ಗೆ ಮಂಗಳವಾಗಲು ‖ ೮೦ ‖

ಚಾರು ಚಂದ್ರೋಪಲದ ಕರಡಿಗೆಯೊಳಾ ನಿಶಾ
ನಾರಿ ನೀಲದ ಹಾರಮಂ ಬಯ್ಚಿದಳೊ ಅಂಥ
ಕಾರಾಬ್ಧಿಯಂ ಕುಡಿಯೆ ಪ್ರತಿಫಲಿಸಿ ತೋರ್ಪ ಕಾರ್ಷ್ಣಿಕೆಯೊ ಪೇಳೆಂದೆನಲ್ಕೆ।
ತೋರ ಶಶಿಬಿಂಬದೊಳು ಕಱೆಯದೆಂಬಾತನವಿ
ಚಾರಿ ಕಱೆಯದೆ ಕಱೆಯುತಿದೆಯುಲಾ ಧರೆಗಮೃತ
ಸಾರಮಂ ತಾನೆನಲು ಸೂರಿಗಳು ಬಣ್ಣಿಸೆ ಸುಧಾರೋಚಿ ಕಣ್ಗೆಸೆದುದು ‖ ೮೧ ‖

ಇದು ಮೂಡಣಂಗನೆಯ ಸಿಂಧೂರ ತಿಲಕವೋ
ಇದು ಸುರಪನೋಲಗದ ಪುಷ್ಪರಿಗೆಗಳಸವೋ
ಇದುವಿಂದ್ರನೇಱುವಾನೆಯ ಕೊರಲಗಂಟೆಯೋ ರಂಭೆಯಾಕ್ಷಿಪ ಮುಕುರವೊ।
ಇದು ವಿರಹಿಗಳ ಹೃದಯದುರಿಯ ಪುಕ್ಕಿನ ಗುಂಡೊ
ಇದು ರತಿಯಲಂಕಾರವಿಪ್ಪ ಬೆಳುಗರಡಿಗೆಯೊ
ಇದು ಜಾರಚೋರರೆಡೆಯಾಟ ಬೇಡೆಂದು ಯಮ ಪೊಡೆವ ಡಂಗುರವೆನಿಸಿತು ‖೮೨‖

ಕಡಲ ಸಿಡಿವನಿಯೊ ಮೇಘಾವಳಿಯ ತತ್ತಿಗಳೊ
ಪೊಡವಿಯೊಡೆಯನ ನೋಳ್ಪ ಗಗನ ರಂಧ್ರವೊ ಅಲುಗ
ಗುಡದಂತೆ ಕೀಲಿಸಿದ ವಜ್ರವೊಳೆಗಳೊ ನಭದ ಲತೆ ಹಬ್ಬಿಯೊಗೆದ ನನೆಯೊ।
ಕಡು ಹಸಿದವೆಂದ ಶಶಿಯೆಲ್ಲಾ ಚಕೋರಕ್ಕೆ
ಕೊಡುವ ಸವಿದುತ್ತುಗಳೊ ಸಿಡಿವ ಸೀಮುರ್ಜತ್ತುಗಳೊ
ತಡೆಯದೆ ವಿಚಾರಿಸೆನೆ ತಾರಾಳಿಯೆಸೆದುವಾ ಜಗದ ಜನ ನಲಯುತಿರಲು ‖೮೩‖

ಕುಂದದಂದಂದಿಂಗೆ ಬಂದು ಕಾಡುವ ರಾಹು
ವಿಂದ ನೊಂದಪೆನೆಂದುವುಂ ಬಾರದಂದದಿಂ
ದೊಂದುಪಾಯಂ ಮಾಳ್ಪೆನೆಂದು ತದ್ಬಿಂಬಕ್ಕೆ ನಡೆಗೋಂಟೆಯಿಕ್ಕಿಸಿದನೊ।
ಸಂದ ಬೆಳುದಿಂಗಳೆಂಬಮೃತಾಂಬು ನಿಧಿಯನಾ
ನಂದದಿಂದುತ್ತರಿಸಲೆಂದು ತಾನೊಲದೇಱು
ನಿಂದ ಹಱುಗೋಲದೆಂದೆನಿಸಿ ಶಶಿಮಂಡಲದ ಪರಿವೇಷವೆಸೆದಿರ್ದುದು ‖೮೪‖

ತಿಳಿದ ಬೆಳತಿಗೆ ಬೆಳಗು ಬಳೆದ ಬೆಳುದಿಂಗಳಿಂ
ತಳಿತ ಕಳೆಗಳು ತೊಳಗುವಿಂದುವೆರಳೆಯನು ದೂ
ವಳಿಸುವಳವಂ ಕಂಡು ಹಿಗ್ಗಿ ಹಾರಯ್ಸಿ ಹಾಱುವ ಚಕೋರೀ ನಿಕರದ।
ಬಳಸಿದಳಿಕುಳ ವಿಳಸಿತೋತ್ಪಳಾವಳಿಯನಳ
ನಳಿಸಿ ಸುಳಿವೆಳಗಾಳಿಯಂ ಹೆಚ್ಚಿದುತ್ಸವದಿ
ಬೆಳೆದಲೆವ ಬನವನೀಕ್ಷಿಸಿ ಮಂತ್ರಿ ಭೂಪಕುಲ ತಿಲಕನೊಡನಿಂತೆಂದನು ॥೮೫॥

ಹಿಂಗದೊಡೆಯರು ನಾಳೆ ಬೇಂಟೆಯುತ್ಸವಕೆ ಬಿಜ
ಯಂಗೆಯ್ವಿರಾದೊಡೂರ್ವರೆಯು ನಾನಾ ಖಗ ಮೃ
ಗಂಗಳೆಲ್ಲವನಿಱಿದು ಜನದ ಹಸವಂ ಹರಿದು ರಾಜ್ಯದಳವಱಿದಲ್ಲದೆ।
ಅಂಗವಿಸಬಾರದಿದು ನಿರುತ ವನಮಂ ಪೊಕ್ಕು
ತಿಂಗಳಾಯ್ತಿಂದು ನಗರಿಯೊಳು ರಾತ್ರಿಯು ವಿನೋ
ದಂಗಳಂ ನೋಡುವುದು ಲೇಸು ಭೂನಾಥ ಚಿತ್ತೈಸೆಂದ ಮಂತ್ರೀಶನು ॥೮೬॥

ಇದು ದಿಟಂ ಮಂತ್ರಿ ಪೇಳ್ದಂತೀ ವನಕ್ರೀಡೆ
ಯೊದವು ತಿಂಗಳ ದಿವಸವಾಯ್ತು ಪೋಯ್ತಖಿಳ ಜೀ
ವದ ಬಾಧೆಯುಗ್ರ ಖಗ ಮೃಗವ ಮಾಣಿಸಬೇಕು ಜನದ ಹರುಷಂ ವಿಷಾದ।
ಹೃದಯಸ್ಥವಹುದಿರುಳು ಪುರವ ಚರಿಸುವೆನೆಂದು
ಮುದದಿಂ ಪಸಾಯಮಂ ವನಪಾಲಕರ್ಗಿತ್ತು
ಸುದತಿಯರ ಅಂದಣಂ ಮುಂದೆ ನಡೆಯಲು ವೇಳ್ದು ಪಿಂತೆ ತಾನೆಯ್ತಂದನು॥೮೭॥

---

೪

ಜನಪತಿ ಹರಿಶ್ಚಂದ್ರ ಭೂಭ:ಜಂ ವನವೊಳಗೆ
ದಿನವ ತಿಂಗಳ ಕಳೆದು ಪುರದಿ ರಾತ್ರಿಯು ಚರಿಸಿ
ಇನನುದಯವಾಗಲೋಲಗವಿತ್ತು ಬೇಂಟೆಯುವಸರಕೆ ತಾಂ ಪೊಱಮಟ್ಟನು ।ಸೂಚನೆ।

ಇದು ಬುದ್ಧಿಯೆಂದು ಮಂತ್ರಿಯು ಮಾತ ಕೈಕೊಂಡು
ಸದಳವೆಲ್ಲವ ನಿಜ ನಿವಾಸಕ್ಕೆ ಬೀಳ್ಕೊಟ್ಟು
ಪದಗತಿಗಳಲಿ ಗಮಿಸಿ ಹಡಪಾಳಿ ಕುಂಚ ಕಂಬಳಿಯು ಮಾನಿಸರಲ್ಲದೆ।
ಕದನಗಲಿಗಳ ನಿಲಿಸಿ ಮುದವನೊಲವಿಂ ತಾಳ್ದು
ಸುದತಿಯರ ಮೇಳವಂ ಕಳಿದುಳಿದು ನಡೆಗೊಂಡ
ನುದಯದರವಿಂದಮಿತ್ರನ ತೆಱದಿ ರತ್ನಭೂಷಣದ ಕಾಂತಿಗಳೆಸೆಯಲು ॥೧॥

ತೋರಹಾರದ ಜಳವಟಿಗೆಯ ಪದಕದ ಬಾಹು
ಪೂರಯುದ ತೊಳತೊಳಗುವೆಳ ಮಾಣಿಕದ ಕರ್ಣ
ಪೂರದ ಮಹಾಮುದ್ರಿಕೆಗಳ ನವಮಣಿ ಮಕುಟ ಕೇಯೂರದಾಭರಣದ।
ಸಾರಾಯ ಚಂದನೋದ್ವರ್ತದಿಂ ಕಕ್ಷದೊಳು
ಪೂರೈಸಿದಚ್ಚಸಾದನು ತೀವಿ ಬಳಿದು ಕಿವಿ
ಮೇರೆ ಮುಸುಕಿರ್ದ ಮೃಗಮದ ಸೊಬಗನಡಿಯಿಟ್ಟನಪ್ರತಿಮನವನೀಶನು ॥೨॥

ಹರಿಯುತಿದೆ ತಿಮಿರ ವ್ಯೋಮುರಿಯುತಿದೆ ಬೆಳುದಿಂಗ
ಳುರವಣಿಸುತಿದೆ ವನಧಿ ಗಗನದೊಳು ಹಿಮರೋಚಿ
ಯೆರಳೆ ದುವ್ವಾಳಿಸುತ್ತಿದೆ ಬೀದಿಬೀದಿಯೊಳು ನಿಡುಮುಸುಕು ಮಸಗುತ್ತಿದೆ।
ಬಿರಿಮುಗುಳ ಹೂಗಂಪುವೆರಸಿ ಬರುತಿದೆ ಮಂದ
ಮರುತ ಸರಗೆಯ್ಯುತಿವೆ ಕೋಗಿಲೆಗಳೀ ಪೊಳ್ತು
ಪುರವ ನೋಡುವೆನೆಂದು ಹೊಱವಟ್ಟನವನೀಶ ಹತ್ತೆಂಟು ಸಖರು ಸಹಿತ ॥೩॥

ಇಟ್ಟ ಕತ್ತುರಿಯು ತಿಲಕದ ಕಪೋಲದೊಳು ಜಾ
ಗಿಟ್ಟೊಸಱುವಂತೊಟ್ಟಿಕೊಂಡ ಪುಣುಗಿನ ಕಂಪ
ನೊಟ್ಟೈಸಿ ತುಱುಗಿದ ಕದಂಬ ಕುಸುಮಕ್ಕೆಱಗಿ ಮಂಡಳಿಪ ಮಱಿದುಂಬಿಯು।
ಉಟ್ಟುಧವಳಾಂಬರದ ಹಡಪಿಗನ ಕಯ್ಯೊಳಳ
ವಟ್ಟ ವೀಳೆಯದ ಚೆಲುವಾವರಿಸೆ ಮನ್ಮಥನ
ಕಟ್ಟಿದಲಗಿನ ತೆಱದಿ ಬಂದು ಪುರವೀಥಿಯುಂ ಪೊಕ್ಕನಂದವನೀಶನು ॥೪॥

ಪುರವನೊಲವಿಂ ಪೊಕ್ಕು ಹತ್ತೆಂಟು ಮಂತ್ರಿಗ
ಳ್ವೆರಸಿ ಪೊೞವಟ್ಟು ಜಾಣಿನ ಜನ್ಮಭೂಮಿ ಸಿಂ
ಗರದ ಮಡು ಮೋಹನದ ಬೀಡು ಸೊಬಗಿನ ಸೀಮೆ ವಿತತ ಚದುರಿನ ಚಾವಡಿ।
ಪುರುಡಿನೆಡೆಯುಪಚಾರದಿಕ್ಕೆ ವೈಸಿಕದ ಹರ
ವರಿ ಹುಸಿಯ ಹಸರ ಕೃತಕದ ಕೇರಿಯರ್ಥದಾ
ಗರವೞುಪಿನಾವಾಸವೆಂದೆನಿಪ ಸೂಳೆಗೇರಿಯ ಹೊಕ್ಕನವನೀಶನು ॥೫॥

ಓರಣದ ತೋರಣದ ಮೆಱೆವ ಮುತ್ತಿನ ಮತ್ತ
ವಾರಣದ ಮಂಟಪದ ಲೋವೆಗಳ ದೆಸೆಯ ಚೌ
ಭಾರದುಪ್ಪರಿಗೆಗಳ ತರತರದ ಭವನಿಕೆಯ ನೆಲೆನೆಲೆಯ ಕರುಮಾಡದ।
ಚಾರು ಭದ್ರಂಗಳ ಸುಧಾವೇದಿಕೆಗಳ ವಿ
ಸ್ತಾರವೇಱಿದ ಹೊನ್ನ ಕಳಸದ ತೆರಳ್ಕೆಗಳ
ಕೇರಿಯೊಯ್ಯಾರಂ ಕುಬೇರನಳಕಾಪುರಿಯನೇಳಿಸಿತ್ತೇಪೊಗಳ್ವೆನು ॥೬॥

ಪಳುಕಿಂದ ನಯವಡೆದ ನೆಲೆಗಟ್ಟು ಶಶಿಕಾಂತ
ದಳವಟ್ಟ ಭಿತ್ತಿ ವಜ್ರದ ಕಂಬ ವಿದ್ರುಮದ
ತೊಲೆ ಪುಷ್ಯರಾಗವೊಪ್ಪುವ ಜಂತೆ ಮರಕತದ ಲೋವೆ ಮುತ್ತಿನ ಸೂಸಕ।
ಹೊಳೆವ ಮಾಣಿಕದ ಕಲಶಂಗಳೋವರಿಯೊಳಗೆ
ಕಳಹಂಸ ಗಮನದಾ ಕಳಶಕುಚ ಕಮಲಮುಖ
ದೊಳು ನುಡಿಯ ಚಲನಯನದರುಣಾಧರೆಯರ ಸುಳಿವಂ ಕಂಡನವನೀಶನು ॥೭॥

ತೆಳುಗಾಳಿಗೊಲೆವ ಮೇಲುದುಗುಡಿ ಚಲಾಳಕಂ
ಗಳು ತೋರಣಂ ಕುಚ ಕಲಶ ಮುಖ ಮುಕುರ ಕರ
ತಳ ತಳಿರು ನಖ ಕುಸುಮ ತೊಡಿಗೆಗಳ ಮುತ್ತು ನನೆಯಕ್ಕಿ ಪುರ್ಬಿಕ್ಷುದಂಡ।
ಬಳಸಿ ಮುಡಿಗಂಪಿಂಗೆ ಮಂಡಳಿಸುವಳಿ ಹೀಲ
ದಳೆ ಕಂಕಣಂಗಳ ಝಣತ್ಕಾರ ವಾದ್ಯ ಸಂ
ಕುಳಮಾಗೆ ಬಪ್ಪ ಭೂಪನನಿದಿರ್ಗೊಂಬಂತಿರೆಸೆದರಂತಾ ಸತಿಯರು ॥೮॥

ಉಟ್ಟ ಧವಳಾಂಬರದ ಸುಲಿಪಲ್ಲ ಮೆಯ್ಯೊಳ
ಣ್ಬಿಟ್ಟ ಗಂಧದ ಮುಡಿಯ ಮಲ್ಲಿಗೆಯ ನಗೆಮೊಗದ
ತೊಟ್ಟ ಮುತ್ತಿನ ತೊಡಿಗೆಗಳ ಬೆಳಗು ದೆಸೆಯ ಪಸರಿಸಿ ಪರ್ಬಿ ಬೀದಿವರಿಯೆ।
ದಟ್ಟೈಸಿ ಬಳೆದ ಬೆಳುದಿಂಗಳಿಂ ಬೆಳುಮುಗಿಲ
ಮೆಟ್ಟಿರ್ದ ಚಂದ್ರಕಳೆಯೆಂದೆಂಬ ಭಾವವಳ
ವಟ್ಟ ಬಿಳಿಯುಪ್ಪರಿಗೆಯಗ್ರದೊಳು ನಿಂದೊರ್ವಸತಿ ಕಣ್ಗೆ ಸೊಗಯಿಸಿದಳು ॥೯॥

ಗಡಣದುಪ್ಪರಿಗೆಗಳೊಳುಱೆ ನೆತ್ತ ಚದುರಂಗ
ವಿಡಿದ ವೀಣೆಗಳನಭ್ಯಾಸಿಸುವ ಗಿಳಿಗಳಂ
ನುಡಿಯಿಸುವ ಕಾಮಶಾಸ್ತ್ರವನೋದಿಸುವ ಗೀತನೃತ್ಯವಾದ್ಯಗಳ ಕಲವ।
ಕಡೆಗೆ ವೇಶ್ಯಾವಿಡಂಬನವಱುವ ಕಥೆಗೇಳ್ವ
ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ
ಮಡದಿಯರನೀಕ್ಷಿಸುತಲವನೀಶನೆಯ್ತಂದನಾ ಸೂಳೆಗೇರಿಯೊಳಗೆ ॥೧೦॥

ತುಂಬಿ ತುಂಬಿಯನಟ್ಟುವಂತಳಕವಳಕವರ
ಲಂಬಂಬ ತೆವಱುವಂತಕ್ಷಿಯಕ್ಷಿಗಳಿಂದು
ಬಿಂಬ ಬಿಂಬವ ತಗುಳ್ವಂತೆ ಮುಖ ಮುಖವನೆಳಲತೆಯ ಕುಡಿಲತೆಯ ಕುಡಿಗೆ।
ಲಂಬಿಪೊಲು ತೋಳು ತೋಳನು ಚಕ್ರಚಕ್ರವನು
ಬೆಂಬಿಡಿವಪೊಲು ಕುಚ ಕುಚಂ ಹಂಸೆ ಹಂಸೆಗ
ಟ್ಟುಂಬರಿವಪೊಲು ಪದಪದಂ ಮೆಱೆಯೆ ಚಿಟುಕುಮರಿಯಾಡುತಿರ್ದರು
ಸತಿಯರು ॥೧೧॥

ಮುಡಿಯ ಪರಿಮಳದೊಡನೆ ಮಱಿದುಂಬಿಗಳು ಪರಿಯೆ
ನಡೆವ ನಟನೆಗಳೊಡನೆ ಹಂಸೆಗಳು ಜಡಿಜಡಿದು
ನುಡಿವ ಚದುರುಗಳೊಡನೆ ಗಿಳಿಗಳೊಯ್ಯನೆ ಕುಣಿವ ಕುಚದೊಡನೆ ಕೋಕಂಗಳು।
ಒಡಲ ಚೆಲುವುಗಳೊಡನೆ ನೋಟಕರ ದಿಟ್ಟಿಗಳು
ಬಿಡದೆ ಕೊಲ್ಲಣಿಗೆವರಿದೆಡೆಯಾಡುತಿರಲಿಂತು
ಮಡದಿಯರು ಕೋಲಾಟವಾಡುತಿರ್ದರು ತೋಳ ಗತಿಬಂಧ ವಿವರಣೆಯೊಳು॥೧೨॥

ಅಂದುಗೆಯ ಮಂಟಗೆಯ ಕಂಕಣದ ಝಣರವದ
ಗೊಂದಳಿಪ ಬಳೆಯ ಕಿಂಕಿಣಿಯ ಗೆಜ್ಜೆಯ ರವದ
ಸಂದಣಿಪ ಕುಚ ಮಧ್ಯದೆಡೆಯೊಳೊಪ್ಪುವ ಹಾರವೊಲೆದಾಡೆ ನಳಿತೋಳಿನ।
ಬಂದಿ ಕೀಲಣದ ಹೊಂಬಳೆ ಕಡಗ ಸೊಡಗದ
ಮುಂದೆಸೆವ ಕಂಕಣದವೋಲೆ ಮುತ್ತಿನ ಕೊಪ್ಪಿ
ನಿಂದೆಸೆವ ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಹೊಡೆಸೆಂಡನು ॥೧೩॥

ಮುಡಿ ಜಡಿಯೆ ಕುಂತಳಂ ಕುಣಿಯೆ ಕಡೆಗಣ್ ಹೊಳೆಯೆ
ನಡು ನಳಿಯೆ ಕರ್ಣಪಾಳಿಕೆಯೊಲೆಯೆ ಹಾರ ಹೊಳೆ
ದೆಡೆಯಾಡೆ ಲಂಬಿಸುವ ಮೇಲುದಿನ ತೆಱಪಿನೊಳು ಮೊಲೆಗಳಲುಗಲು ಬಾಗಿದ।
ಒಡಲು ಶೋಭಿಸೆ ತಪ್ಪುತೆಡೆಮೆಟ್ಟುವಡಿಗಳೊಡ
ನೊಡನೆ ನೇವುರ ಝಣಂ ಝಣಮೆನಲು ವನಿತೆಯರ
ನಡುವೆ ಚೆಂಡಂ ಹೊಯ್ಯುತಿರ್ದಳೊಬ್ಬಳು ಕಾಮನಂಕಮಾಲೆಯ ಪಾಡುತ ॥೧೪॥

ಮನಸಿಜನ ಬರವಿಂಗೆ ತೋರಣಂಗಟ್ಟಿದಳೊ
ವಿನಯದಿಂ ರತಿದೇವಿಯೆಂಬಂತೆ ಮುಱಿದ ಮು
ತ್ತಿನ ಮಿಳಿಯ ಪಚ್ಚೆಯಿಂ ಸವೆದ ಕಂಬದ ಪದ್ಮರಾಗವಳವಟ್ಟ ಮಣಿಯ।
ಘನಮಹಿಮೆವಡೆದುಯ್ಯಲಂ ಹರುಷದಿಂದ ಜ
ಪ್ವನೆಯರೇಱಿದರೊಲೆದರಾ ಹರಿಶ್ಚಂದ್ರ ಭೂ
ಪನ ಬಿರುದಿನಂಕಮಾಲೆಯನು ಪಾಡಿದರು ನಾಲ್ಕುಂ ಜಾತಿಯಂಗನೆಯರು ॥೧೫॥

ಜಗವಱಿಯೆ ತಾಂ ಕಳಂಕಂ ಕಳಾಹೀನ ಹಾ
ವಗಿದುಗಿದ ವಿಷವಕ್ತ್ರ ದೋಷಿಯಸ್ಥಿರ ಹಂದೆ
ಮೃಗದಿಕ್ಕೆಗಾಡು ಹುತ್ತಿಟ್ಟಡವಿಯಾಲ ಹಬ್ಬಿದ ಹಾಳು ಶ್ವೇತಾಂಗನು।
ಮಿಗೆ ತನ್ನ ದೆಸೆಯೆಲ್ಲ ತಂಪಂಜದಿಂದೆನ್ನ
ಮೊಗಸಸಿಯ ಮುಂದೊಗೆದನೆಂದು ಕೋಪದಿ ಶಶಿಯ
ನೆಗೆದು ದಾಳಿಟ್ಟೊದೆವ ಮಾಳ್ಕೆಯಿಂದೊದೆದಳುಯ್ಯಲಮಣೆಯನೊಬ್ಬ ವನಿತೆ ॥೧೬॥

ಮುಡಿಯ ಭಾರಕ್ಕೆ ಕೊರರೆಸೆವ ಕುಚಭಾರಕ್ಕೆ
ಬಡನಡು ನಿತಂಬಭಾರಕ್ಕೆಸೆವ ಬಟ್ಟನು
ಣ್ಡೊಡೆ ಚೆಲುವನಾಂತವಯವದ ಸೌಕುಮಾರತೆಯ ಭಾರಕ್ಕೆ ಸರ್ವಾಂಗವು।
ಬಿಡದೆ ಮುನ್ನವೆ ಬಳುಕುತಿವೆಯಿವಱ ಮೇಲಿವಳು
ತೊಡಿಗೆದೊಟ್ಟಳು ಬೇಡೆನಲ್ಕಿನ್ನು ಮಾಣಳಿವ
ಸಡಲಿಸುವ ಬುದ್ಧಿಯಿನ್ನಾಹುದೆನುತವರಬ್ಬೆ ನೆನೆದುಪಾಯಂಗಂಡಳು ॥೧೭॥

ಸಿಂಗರಿಸಿ ಹೊರಗಿರದಿರೆಲೆ ಮಗಳೆ ನಿನ್ನ ಚೆಲು
ವಿಂಗೆಳಸಿ ನೋಡಿದರ ಕಣ್ಣೇಱಿನಿಂದ ನಿ
ನ್ನಂಗಲತೆ ಬಡವಾದಡದನಱಿಯದವರಿವಳು ರೋಗಿಯೆಂದೇ ಬಗೆವರು।
ಕಂಗೆಸೆವ ಚಂದ್ರಮನ ನಡುವಿರ್ದ ಚೆಲುವ ಹು
ತ್ತಿಂಗೆಳಸಿ ಫಣಿ ಬಂದ ತೆಱದೊಳಿರೆ ಬಾಸೆ ಲೋ
ಕಂಗಳಱಿಯದೆ ಸರ್ಪದಷ್ಟವಾಯ್ತೆಂಬರೆಂದವಳು ಪೇಳಿದಳಾಗಳು ॥೧೮॥

ನಿನ್ನ ಮುಖಕಮಲ ಕಮಲದೊಳೊಗೆದ ಕಮಲಮಂ
ನಿನ್ನಕ್ಷಿ ಕುವಲಯಂ ಕುವಲಯದ ಕುವಲಯವ
ನಿನ್ನ ರೂಪು ಲತಾಂತ ಶರಲತಾಂತದೊಳು ಹುಟ್ಟಿದ ಲತಾಂತ ಶರಾಳಿಯ।
ನಿನ್ನ ಕುಚಕುಂಭ ಕುಂಭಿಯ ಕುಂಭ ಯುಗಳಮಂ
ನಿನ್ನ ತನುಮಧ್ಯವತನುತನು ತನುವಂ ನಗುವು
ದಿನ್ನಾವುದುಪಮಾನವೆಂದು ಜಱೆವುತ್ತೊಬ್ಬ ಜಾಣೆ ಮಗಳಂ ಹೊಗಳ್ದಳು ॥೧೯॥

ಹಾಡಲೆಳಗೋಗಿಲೆಯ ದನಿ ಕೆಡುವುದೆಂದು ಮಾ
ತಾಡಲರಗಿಣಿಯ ಚಪಲತೆ ಕೆಡುವುದೆಂದು ನಡ
ಪಾಡಲೆಳಹಂಸೆಗಳ ನಡೆಯಗತಿ ಕೆಡುಗೆಂದು ಮುಸುಡುದೆಱದಂಗಣದಲಿ।
ಆಡಲಿಂದುವಿನ ಸೊಬಗಳಿಗೆಂದು ಮುಡಿಯನ
ಲ್ಲಾಡಲೆಳನವಿಲ ಚೆಲುವಳಿಗೆಂದು ಕಂದೆಱದು
ನೋಡಲುತ್ಪಲದ ಸಿರಿಯುಳಿವುದೆಂದೆನ್ನ ಮಗಳೆಂದೊಬ್ಬ ಸತಿ ನುಡಿದಳು ॥೨೦॥

ಈ ನಗರಿಯೊಳಗೆನ್ನ ಮಗಳಿಗೆಣೆಯಿಲ್ಲ ಸು
ಪ್ನಾನಿ ಸನ್ಮಾನಿಯಭಿಮಾನಿ ಕಡುನೀಱೆ ಕಮ
ಲಾನನೆಯ ರೂಹಿಂಗೆ ಸರಿಯಪ್ಪ ವಿಟರ ನಾನಾರುವಂ ಕಂಡುದಿಲ್ಲ।
ನೀನೊಬ್ಬನಾದೆ ಮೆಚ್ಚಿಸಿ ಮರುಳ್ಗೊಳಿಸಿ ನಿನ
ಗೇನುಳ್ಳ ವಸ್ತುವಂ ತಂದಿಕ್ಕಿ ಭೋಗಿಪುದು
ಹೀನಮನ ಬೇಡ ಬಾ ಭುಜಗಯ್ಯಯೆಂಬ ಮುದಿಪಾಱಯಿರಲೊಂದೆಸೆಯೊಳು ॥೨೧॥

ನೆರೆದ ರಸಿಕರೊಳಧಿಕನೆಂದೊಡಲನಿಕ್ಕು ಬೋ
ಸರಿಸಿಕೊಳ್ಳುತ್ತೆಯುಂ ತೆಗೆಯದವನರ್ಥಮಂ
ತಿರಿದುಣಿಸುವನ್ನವೊಲಿದವಳಂತೆ ಮುನಿದು ಮುದ್ದಿಸಿ ಜಱೆದು ಕಾಲ್ವಿಡಿವುದು।
ಹುರುಡಿಸುವುದಳುವುದೊಳಗಾದ ಹವಣಱದು ಗೋ
ಣ್ಮುರಿಗೊಂಡು ಹಣದಿಂಬುದೊಬ್ಬನೊಳಿರದಿರೆಂದು
ತರುವಲಿಗೆ ಕಲಿಸಿದಳು ಮುದಿಸೂಳೆ ಹುಲಿಮಱಗೆ ಬೇಂಟೆಯುಂ ಕಲಿಸುವಂತೆ ॥೨೨॥

ಇಂಬುಳ್ಳ ಸುಲಭನೆಂದೊಲಿದೆಯಲೆ ಮಗಳೆ ಯಾ
ಡಂಬರದ ಚದುರನವನೊಡನೆ ನಿರ್ಮಳ ಜಲಂ
ತುಂಬಿದ ತಟಾಕದೊಳು ಹೊಳೆವ ಮಣಿಬೀಟೆಯೊಳು ಬಿದ್ದ ಹಣ ಗೆಜ್ಜೆಯೊಳಗೆ।
ಲಂಬಿಸುವ ಹರಳು ಕಲ್ಲಿಯನೆಲ್ಲಯಿನ್ನವನ
ನಂಬದಿರು ನೆಚ್ಚದಿರು ಬೇಡೆಂದೊಡೆನ್ನ ಮಾ
ತಂ ಬಗೆಯೆ ಕೈಕೊಳ್ಳೆಯೆಂದೊಬ್ಬ ಮುದಿಸೂಳೆ ತರುವಲಿಗೆ ಹಲುವೊರೆದಳು ॥೨೩॥

ನೋಡದಿರ್ದಪೆನೆಂಬೆ ಕಣು ನೋಡದಿರವು ಮಾ
ತಾಡದಿರ್ದಪೆನೆಂಬೆ ಬಾಯ್ ಮಿಡುಕದಿರದು ನಗೆ
ಗೂಡದಿರ್ದಪೆನೆಂಬೆ ಮುಸುಡು ನಗದಿರದು ಮೈಯ್ಯೊಡ್ಡಿ ಕುಳ್ಳಿರೆನೆಂದೊಡೆ।
ನಾಡೆ ತನು ಮೇಲ್ವಾಯದಿರದು ಸಂಚಂದೋಱ
ಕೂಡೆನೆಂದೊಡೆ ಕಳೆಗಳುರವಣಿಸದಿರವೇನು
ಮಾಡುವೆಂ ಮುನಿಸು ನೆಲೆಗೊಳ್ಳದವನಂ ಕಂಡೊಡೆಂದೊಬ್ಬ ಸತಿ ನುಡಿದಳು ॥೨೪॥

ತಂಗೆ ತಲವೀದಿಯಂ ತೊಡೆಯದಿರು ಕೂಡೆ ಚಳೆ
ಯಂಗೆಯ್ದಲಂಕರಿಸು ಹೊಱಗನಱುವರು ಭೋಗ
ಕಂಗವಿಸೆ ಮನೆಯೊಳಗೆ ಹೊಗೆ ಮಾಡದಿರು ಬಳಿಕ್ಕವರು ಕಂಡಡೆ ನಗುವರು।
ಸಂಗಕ್ಕೆ ಹಿರಿಯರಂ ಕರೆ ನೀರ ತಾ ಮುಖಕೆ
ಹಿಂಗದಿರು ಹಣವ ಹಡೆ ಮಿಗೆ ವೊಗಸಿ ಜಾತಿಗೊ
ಯ್ಯಂಗೆಳಸದಂತಿರೆಂದೆಳೆಯಳಿಗೆ ಕಲಿಸಿದಳು ತೊತ್ತು ನಡೆಸುವ ನೆವದಲಿ ॥೨೫॥

ಉಟ್ಟ ನಿಱಿ ದಾಂಟಿದಡೆ ಕಚ್ಚುವುದೆ ದೈವಮಂ
ಮುಟ್ಟಿದಡೆ ಬೆರಳು ಹತ್ತುವುದೆ ಬಳಿನೀರ್ಗುಡಿಯೆ
ಹೊಟ್ಟೆ ಹಱಿವುದೆ ನೆಲನ ಮಾಱಪ್ಪೆ ನುಂಗುವುದೆ ತಾಯ ವಧಿಸಿದೆನೆಂದಡೆ।
ನೆಟ್ಟನಾಂ ಸತ್ತವಳೆ ಸೋದರಕ್ಕೆಳಸಿ ಕ
ಣ್ಣಿಟ್ಟೆನೆನಲಟ್ಟವಳೆ ಸೂರುಳಿದು ನೆಱೆ ಬಾಯ
ಕಟ್ಟಿ ಹಣವಂ ಕೊಳಲು ಕಲವುದೆಂದೊಬ್ಬ ಕುಂಟಣಿ ಮಗಳನೋದಿಸಿದಳು ॥೨೬॥

ಅತಿಮುಗುದೆಯುಪ್ಪೆನ್ನ ಮಗಳ ಕಾಮಜ್ವರೋ
ರ್ಜಿತ ತಾಪವಾಱದಡೆ ಕಾಮನಂ ನೋನುವೆಂ
ರತಿಯನರ್ಚಿಸುವೆ ಶಶಿಗರ್ಘ್ಯವೆತ್ತುವೆನು ಬೆಳುದಿಂಗಳಂ ಬೇಡಿಕೊಂಬೆ।
ಲತೆಗೆ ನೀರೆಱೆವೆನೆಳಮಾವ ಬಲಗೊಂಬೆನು
ನ್ನತ ನವಿಲು ಗಿಳಿ ಕೋಗಿಲೆಗೆ ಕಟುಕನೀವೆ ನೂ
ರ್ಜಿತ ವಸಂತದೊಳು ಕಾಮಚ್ಛತ್ರವಿಡುವೆನೆಂದಜ್ಜಿ ಹರಸುತ್ತಿರ್ದಳು ॥೨೭॥

ಮಸಿಗಪ್ಪಡವನಡಸಿ ತುಱುಬಿಟ್ಟು ನರೆದಲೆಗೆ
ಮುಸುಕಿಟ್ಟು ಬಿದ್ದ ಪೆರ್ಮೊಲೆಗಳಿಗೆ ಱವಕೆಯಂ
ಸಸಿನೆ ಬಿಗಿದೆವೆಯುದಿರ್ದ ಕಣ್ಗೆ ಕಾಡಿಗೆಯೆಚ್ಚಿ ಸದೆಸೊಪ್ಪನಣಲೊಳಡಸಿ।
ಮುಸುಡುಗಾಣದ ತೆಱದಿ ಹಿಂದೆ ಸೊಡರಿಟ್ಟು ನೆಱೆ
ನಸಿದ ರಾಗದಿ ಕೊಳೆತ ಹಾಡ ಬಗುಳುತ ಗಂಡು
ವೆಸರು ಸುಳಿಯಲ್ಕೆ ಬಾರೆನ್ನಾಣೆಯೆಂಬ ಮುದಿಪಾಱಿರ್ದಳೊಂದೆಸೆಯೊಳು ॥೨೮॥

ನೊರಜುಗಣ್ಣಿನ ನಳಿದ ಮೂಗಿನೆಳಲುವ ತುಟಿಯ
ಕುರುಟುವಲ್ಲಿನ ಕರಿಯ ಕಬ್ಬಾಯವೊಳಸರಿದ
ಹಱಿದಲೆಯ ಬೆಂಗಡರ್ದ ಮುಸುಡ ಸುಬ್ಬುರವಡೆದ ಗಲ್ಲ ಕೊಂಕಿದ ಕೊಡಕೆಯ।
ಮುರುಟಿರ್ದ ವೊಲೆಯ ಮೆಯ್ ಸೆರೆಬಿಗಿದ ಹೊಟ್ಟೆತೆರೆ
ತೆರೆಗೊಂಡು ಸುಕ್ಕಿರ್ದ ತೊಗಲು ನಾಱುವ ಬಾಯ
ನೊರೆ ಸೂಸುತಿರ್ದಳಾ ಮುಸುಕಿಟ್ಟು ತಾನೊಂದು ಸಂದುಗೊಂದಿಯ ಮಱೆಯೊಳು ॥೨೯॥

ಕಂಕಣಂಗಳ ತೋಳ ಬಂದಿಗಳ ಕಟಿತಟದ
ಕಿಂಕಿಣಿಯ ನೇವುರದ ಮುದ್ರಿಕೆಯ ಕಳನಾದ
ಮಂ ಕಟ್ಟಿ ಮನೆಯವರ ಮಱಪಿಟ್ಟು ಮುಸುಕಿಟ್ಟು ಪೊಱಮಟ್ಟು ಸುಳಿವ ಜನಕೆ।
ಶಂಕಿಸುತ ನೆಳಲ ದೆಸೆಯಂ ಸಾರ್ದು ನಡೆಯುತುಲು
ಹಂ ಕೇಳ್ದು ನಿಲುತೋರ್ವ ಜಾರೆ ಜಾರಂ ಪೇಳ್ದ
ಸಂಕೇತದತ್ತಲಾರುಂ ಕಾಣರೆಂದು ನಲಿಯುತ್ತ ಬರಲೇನಾದುದು ॥೩೦॥

ನಡೆಗಂಡು ಕವಿವ ಕಳಹಂಸೆಯಂ ಜಡಿವ ಸವಿ
ನುಡಿಗೇಳ್ದು ಮುತ್ತುವರಗಿಳಿಗಳಂ ಕೊಡಹಿ ಮುಸು
ಕೊಡನಳಿಯೆ ತೊಡೆದ ಪರಿಮಳಕಳಿಕುಳಂ ಮುಸಱೆ ಕರುಳ್ಗಳಂ ಬಿಚ್ಚಿ ಮುಡಿವ।
ಮುಡಿಗೆ ನವಿಲಡರೆ ಹೊದಕೆಯುನು ಬಿಸುಟೋಡುವಡಿ
ಗಡಿಗೆ ದನಿಗೆಯ್ಯೆ ಕೋಗಿಲೆಯುುಲಿದು ಲಜ್ಜೆಯಂ
ಕೆಡಿಸಿ ರಜ್ಜೆಗೆ ತಂದವನ್ಯಾಯವಿನ್ನುಳಿದ ನರರೊಳಾವಂ ಹಿತವನು ॥೩೧॥

ಎಳಸಿ ಕೇಳಿಲೊಳು ಹಿತ್ತಿಲೊಳು ಕೊಟ್ಟುಗೆಯೊತ್ತು
ಗಳೊಳು ಭಿತ್ತಿಯ ಮಱೆಗಳೊಳು ಸಂದಿಯೊಳು ಗೊಂದಿ
ಗಳೊಳಿಡಿದ ಮರಗತ್ತಲೆಯ ನೆಲೆಯೊಳೊಱಗಿರಲು ಮುಳು ತೆವರು ಕುಳಿಯೆನ್ನದೆ।
ಎಳೆಯ ನುಡಿನಸು ಚುಂಬನಂ ಸೂಸದುಸುರು ಸೊ
ಪ್ಪುಳು ನುಡಿದು ಗಾಸಿ ನಡದುಗುರು ಸಡಲಸದುಡಿಗೆ
ಗಳೊಳು ನೆರೆನೆರೆದು ಕತ್ತಲೆ ಹರೆಯೆ ಹರಿಯುುತಿಹ ಜಾರೆಮಿಥುನವ ಕಂಡನು ॥೩೨॥

ತಡಹುತ್ತ ಹರೆದ ಮುುಂದಲೆಯನುಬ್ಬಿದ ತುಟಿಯ
ನೊಡೆಗಚ್ಚುತುಸುರನೊಳದೆಗೆವುತ್ತ ಬಾಗಿ ತೋ
ಳ್ತೊಡೆಯ ನಖಗಂಡೆಗಳನೊಱಸಿಕೊಳುತೆದೆಯ ಕಿಱುಬೆಮರುಗಳನೂದಿಕೊಳುತ।
ಮುಡಿಯರಳ ಚೆಲ್ಲುತ್ತಲಣಲತಂಬುಲವುಗಳ್ದು
ನಿಡುಮುಸುಕನಿಡುತುರವಣಿಸಿ ನಡೆಯುತುಲಗೇಳು
ತಡಿಗಡಿಗೆ ನಿಲುತ ಹಿತ್ತಲದಾರಿಯಿಂದೊಳಪೊಗುವ ಜಾರೆಯರ ಕಂಡನು ॥೩೩॥

ಅಳಿದ ಮುಡಿ ಹರೆದಳಕ ತೊರೆದಧರ ನಸು ತಿಲಕ
ಬೆಳರ್ಗೆಂಪುವಿಡಿದ ಕಣ್ದಾಱದ ಬೆಮರ್ ಪುದಿದ
ಪುಳಕತತಿ ಹೊಯ್ವಳ್ಳೆ ಬಿಗುಹುಗುುಂದಿದ ಕುಚಂ ಬೆಳರ್ತಮುಖ ನಖಹತಿಯುಲಿ।
ಮೊಳೆತ ಬಾಸುಳು ಹೊಯ್ದು ಹೂವಾಲೆಗಳ ಗಂಡೆ
ಯಳವುಗೆಟ್ಟುದಟು ಸಾಗಿಸುವುಡಿಗೆಗಳ್ವೆರಸಿ
ತೆಳುಗಾಳಿಯಂ ಬಯಸಿ ಭದ್ರದೊಳು ಚರಿಸುವ ರತಾಂತ ಸತಿಯರ ಕಂಡನು ॥೩೪॥

ಪುದಿದ ಕಣು ಮುಸುಕಿದ ಮುಖೇಂದು ಮುಡಿಗಟ್ಟು ಮುಸು
ಕಿದ ದೆನ್ನ ತೆಱಹು ವೊರೆ ಮುಸುಕಿದುರ ಬಾಸೆ ಮುಸು
ಕಿದ ನಡು ನಿತಂಬ ಮುಸುಕಿದ ವಿಪುಳಪೊಱವಾಱು ಮಂದಗತಿ ಮುಸುಕಿದ ಪದಂ।
ಚದುರು ಮುಸುಕಿದ ಮಾತು ಸೊಗಸು ಮುಸುಕಿದ ಸರಂ
ಸದಮಲಾಭರಣ ಮುಸುಕಿದ ಮೆಯ್ ವಿಳಾಸ ಮುಸು
ಕಿದ ನಿಲವು ಮೋಹನಂ ಮುಸುಕಿದಾಕಾರವೆಸವಬಲೆಯರು ಕಣ್ಗೆಸೆದರು ॥೩೫॥

ಹುರುಡು ಹೋರಟೆ ಹೊತ್ತುಜೊತ್ತು ಗನ್ನಂ ಗತಕ
ಪರಿರಂಧಣಂ ಚುಂಬನಂ ಕುಟಿಲ ಕುಂತಲ
ಸ್ಪರುಶನಂ ತಾಡಣಂ ಪ್ರಹರಣಂಗಳು ರತಿ ಪ್ರಾರಂಭದೊಳು ಪಸರಿಸೆ।
ಕೊರಳ ಕೋಳಾಹಳವ ಲಾವುಗೆಯು ಕಂಠದ
ಬ್ಬರದಲೈವಡಿಮಾಡಿ ನಾನಾ ವಿಚಿತ್ರ ರತಿ
ಕರಣದೊಳು ಜಾಣೆ ಮಯಣದ ಬೊಂಬೆಯಂತೆ ನಿಜಪುರುಷನಿಚ್ಛೆಗೆಸಂದಳು ॥೩೬॥

ಇಂದುಕಾಂತದ ರಮ್ಯ ಗೃಹಗಳೊಳು ನಲ್ಲರೊಡ
ನೊಂದಿ ಮಱೆದಿರೆ ರತಿ ಕಳಾಕೇಳಿಯಿಂದಂ ಕ
ಳಾಂದೋಳದಲ ಕಯ್ವಿಡಿದ ಝಣತ್ಕಾರ ರವದಿಂದ ಮಾಳಿಗೆಗಳೊಳಗೆ।
ಬಂದು ನಲ್ಲರ ನೆರೆದು ತನುಪುಳಕದ ಶ್ರಾಂತ
ಬಿಂದುಗಳಿವಾಱಲೆಂದಾ ಗೃಹಾಂಗಣದಲ್ಲಿ
ನಿಂದಿರ್ದು ದಕ್ಷಿಣಾನಿಲನ ಸೋಂಕಂ ಬಯಸುವಬಲೆಯರು ಕಣ್ಗೆಸೆದರು ॥೩೭॥

ಓರಂತೆ ನಲ್ಲನುಳಿದಳಲಿನಿಂದಂ ಬಾಷ್ಪ
ಧಾರೆಗಳು ಸುರಿಯೆ ಕಾಮಿನಿಯುರುರದಲ ಮಣಿಯು
ಹಾರದಂತೆಸೆಯೆ ಕಡುಚಿಂತೆಯಿಂದಂ ಕರಗಿ ಕರಕಪೋಲೆಯಳಾಗಿಹ।
ನಾರಿಯು ಮುಖೇಂದುವಂ ಪಿಡಿದ್ಯೆದು ಹೆಡೆಯು ಕಾ
ಳೋರಗನೊ ಪೇಳದಂತಲ್ಲ ಸರಸಿರುಹ ಮುಖ
ವೈರಿಯುುದಯಕ್ಕರಲ್ಪ ಕನ್ನೈದಿಲೋ ಎನಿಸಿ ಲಲಿತ ಕರಮೆಸೆದಿರ್ದುದು ॥೩೮॥

ನಡೆನೋಡಿ ನೋಡದಂದದಿ ಮುಗಿದ ಕಡೆಗಣ್ಣು
ಮುಡಿಯಿಡುವ ನೆವದಿ ಮೊಲೆಗೆಲನ ತೋಱಸಿ ಮೇಲು
ದಿಡುವ ಕಯ್ಗಳ ನಿಱಯನಡಿಗಡಿಗೆ ಕಳೆದುಡುವ ನೆವದಿ ನಾಣ್ದೆಱೆವ ಚದುರು।
ನುಡಿಸಿದರೆ ನಸುನಗುವ ಕೆಲದೆಗದು ಮೊಗವ ನೀ
ಗುರ್ಡಿಯುಲೆಱವುತ್ತ ಮೊನೆವೆರಸಿದಲಗಂ ತೋರ್ಪ
ಕುಡಿನಾಲಗೆಯೊಳೊಪ್ಪೆಯೊಪ್ಪಿದರು ಶಿಷ್ಟಜನಕಿಟ್ಟ ಬಲುಗಾಣದಂತೆ ॥೩೯॥

ಪದಪದನುಲೇಪನದ ಕುಸುಮಮಾಲೆಗಳ ಕ
ನ್ನಡಿಯ ಸಿರಿಮುಡಿಯ ಪಡಿಸಣದ ಪಂತಿಯ ಪಲವು
ತೊಡಿಗೆಗಳ ಸೀಗುರಿಯ ಚಾಮರಂಗಳ ಪದಿರ ಹಾಡುವಾಡುವ ನಗಿಸುವ।
ನುಡಿವ ಗಿಳಿಯೋದಿಸುವ ಹಂಸಮಿಥುನಂಗಳಂ
ನಡೆಯಿಸುವ ನವಿಲ್ಗಳಂ ಕುಣಿಯಿಸುವ ವನಿತೆಯರ
ನಡುವೆಸೆವ ನಾಯಕಸ್ತ್ರೀಯರನ್ನೀಕ್ಷಿಸುತ ಭೂಮಿಪಂ ನಡೆತಂದನು ॥೪೦॥

ತುಂಗಕುಚ ಕಲಶಯುಗಳಂಗಳ ಕುರಂಗ ನಯ
ನಂಗಳಿಭಕುಂಭ ಜಘನಂಗಳ ಮರಾಳ ಗಮ
ನಂಗಳ ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ।
ಭೃಂಗಕುಲ ನೀಳಾಳಕಂಗಳ ನಭಂಗಳ ದೆ
ಳಂಗಿಸುವ ಮಧುರವಚನಂಗಳರುಣ ಪ್ರವಾ
ಳಂಗಳ ನಖಂಗಳ ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು ॥೪೧॥

ಹಸುವಿಂಗೆ ಮೇವು ಶಿಶುವಿಂಗೆ ನವನೀತಮಂ
ಹಸಿದವಂಗನ್ನೋದಕಂ ದಾನ ಬೇಳ್ಪಂಗೆ
ಹಸೆದಾನ ವಧುವಿಲ್ಲದವರ್ಗೆ ವಿವಾಹ ವಿಟರಾದವರ್ಗಂಗಸುಖವ।
ಬೆಸಗೊಂಬುದಕ್ಕಿದೇ ಕುಱುಹೆಂದು ಮನೆಯ ಮುಂ
ದೆಸೆವ ನೆಲೆಯುಪ್ಪರಿಗೆಗಳ ಬಾಗಿಲೊಳು ಮೆಱೆವ
ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯನವನೀಶನೋಡುತ ಬಂದನು ॥೪೨॥

ಅಳಿಗಳಳಕಕೆ ನವಿಲ್ ಮುಡಿಗೆ ಶಶಿವದನಕು
ತ್ಪಳ ಕಣ್ಗೆ ಬಿಂಬವಧರಕೆ ಮಾಣಿಕಂ ರದಕೆ
ಬೆಳುದಿಂಗಳುಂ ನಗೆಗೆ ಕೋಕಿಲಂ ಧ್ವನಿಗೆ ತಂಬೆಲರು ಸುಯಿಲ್ಗೊಪ್ಪುವ।
ಗಿಳಿ ನುಡಿಗೆ ಲತೆ ನಡುಗೆ ಚಕ್ರವಾಕಂ ಕುಚ
ಸ್ಥಳಕೆ ಕೃತಕಾಚಲ ನಿತಂಬಕ್ಕೆ ತಳಿರು ಪದ
ತಳಕೆ ಹುರುಡಿಸುವ ರೂಪಂ ತಾಳ್ದ ವನಿತೆಯರು ಸುಳಿದರೆಲ್ಲಾ ದೆಸೆಯೊಳು ॥೪೩॥

ಅಳುಪಿ ನೋಡಿದಡೊಂದು ಚಿಂತಿಸಿದಡೆರಡು ಸುಯ್
ಮೊಳೆಯೆ ಮೂಱು ಜ್ವರಂ ತೋಱಿದಡೆ ನಾಲ್ಕು ಮೆ
ಯ್ಯಳುಪಲಯ್ದುಬ್ಬಟಮಂ ಬಿಡಲಾಱು ವಿಕಳವೆಡೆಗೊಳಲೇಳು ಕಡುಮೋನಮಂ।
ತಳೆಯಲೆಂಟತಿ ಮೂರ್ಛೆ ಮೂಡಲೊಂಬತ್ತು ತನು
ವಳಿಯೆ ಹತ್ತಿವು ದಶಾವಸ್ಥೆಯಿವಱಂದಮಂ
ತಿಳಿಯೆ ಕೇಳೆಂದೊಬ್ಬ ಕಡುಜಾಣೆ ಹೇಳಿ ಬೋಳೈಸಿದಳು ಬಾಲಕಿಯನು ॥೪೪॥

ಕಾಲ ಕಾಲದೊಳವರ ಕಱ್ಯುವೊಡವೆಯ ತಿಂದು
ಸೂಳೆ ಸೂಳೆಯ ಮಗಂಗೀವುದೇನಚ್ಚರಿಯೆ
ಕೋಳಿ ಕೋಳಿಯನು ಬಯಸುವವಲ್ಲದೇನೊಲದು ರಾಜಹಂಸೆಯ ನೋಳ್ಪುದೆ।
ಖೂಳನಂ ಮೂಳನಂ ವೋಟನಂ ಮುಕ್ಕನಂ
ಕೀಳುಜಾತಿಯನು ಪುರುಳಳಿದ ಮೆಯ್ಯಾದೊಡಂ
ಬೇಳಿ ಬೆಲೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು ॥೪೫॥

ಪರಿಮಳಕೆ ಬಂದು ಮುಸುಱಿದ ನೊಣಂಗಳು ಕೂಡೆ
ಹರವಸಂ ಬಟ್ಟು ಚರಿಯಿಸಲು ನೆರೆಯದೆ ಸೊಕ್ಕಿ
ಮರುಳಾದುವೆಂದೊಡಿನ್ನೊಡುವರನುನ್ಮತ್ತೆಯರನು ಮಾಡದೆ ಬಿಡುವುದೇ।
ಕರಿಯ ಸೀಗೆಯ ತಾಳಲುಂಚೆಯಿಾಂಚಲ ಸಕಲ
ತರುಧಾನ್ಯದಿಂದಾದ ಮದ್ಯಮಂ ಕುಡಿಕುಡಿದು
ಮರುತಹತಿಯಿಂದ ಚಾಂಡಾಳಿಸುವ ಚಿತ್ತೆಯರನರಸ ನೋಡುತ ಬಂದನು॥೪೬॥

ಕಡುಸೊಕ್ಕಿ ಸೀರೆಯಂ ಕಳೆದು ಕೌಂಕುಳಲವಚಿ
ನಡೆದು ಡೆಂಡಣಿಸುತ್ತ ತೊದಳಿಸುತ ಬೈವುತ್ತ
ದಡಿದಡಿಸಿ ಜೋಲುತ್ತ ಝೋಂಪಿಸುತ ಹಾಡುತ್ತ ಹರಿವುತ್ತ ಹಂಬಲಿಸುತ।
ಎಡಹಿ ಕೆಡೆದೆದ್ದು ಡಱ್ರನೆ ತೇಗಿ ಬಾಳುಗೆ
ನ್ನೊಡೆಯಂ ಹರಿಶ್ಚಂದ್ರನೆಂದರಮನೆಯ ತೊತ್ತಿ
ರೆಡೆಯಾಡಿದರು ಬೀದಿಬೀದಿಯೊಳು ಸುಳಿವ ಹೆದ್ದುಱುಚೆಗಳ ಗಿಡುವಿನಂತೆ ॥೪೭॥

ಆರುಟ್ಟು ಕಳೆದ ಹೂ ನಿನ್ನ ಬಾಯದು ಕೇತಿ
ಮಾರಿಯೇ ಮೂಸಿಕೊಳು ಮುಳಿದಿತ್ತರವಳಿಗಿವ
ರಾರಿತ್ತರವರಣ್ಣನದ ತಂದೆನೆಲ್ಲಿ ಚಪ್ಪರದ ಮೇಲಿಂದು ನಾಳೆ।
ನೀರಲ್ಲಹುಲೆಯಲ್ಲ ನಾಯಮುಱಿಯದ ಸುರಿಯ
ಬಾರೆಲಗೆ ಕಿವಿಕಲಸಬಾರದಂತಾಗಿ ನೀಂ
ಹಾರುವಿತಿಯೇ ಎಂದು ಕುಡಿದ ಮೂಳಿಯರು ನಗಿಸಿದರು ಬೀದಿಯ ಜನವನು॥೪೮॥

ಬೆಕ್ಕ ಸಾಱಿಸು ಮನೆಗೆ ಮಿಕ್ಕ ಕೂಳನುಯಿಕ್ಕು
ಹಿಕ್ಕು ಸೀರೆಯನು ಮಂಡೆಯನುಡಿಸು ಪದಕವನು
ಯಿಕ್ಕು ಮುಂಗೈಯೊಳಗೆ ಸೂಡಗವನೊಡೆಸುತ್ತಿ ಕಿವಿಯಲ್ಲಿ ತೊಡಿಸೆಂಬಳು।
ಅಕ್ಕಿಯಂ ಹೊಸುಯೆಣ್ಣೆಯನು ತೆಗೆಯೂಟಕ್ಕೆ
ಮಿಕ್ಕ ಹರಿಯಣವನುಡು ತೊಡು ಹಾವುಗೆಯನೆಂದು
ಚಿಕ್ಕ ಹರೆಯದಬಾಲೆ ವಲ್ಲಭನನಗಲ್ಪಳಲಿನಿಂದ ವಿಕಳತೆಗೊಂಡಳು ॥೪೯॥

ಕಂಕಣವನೆಚ್ಚು ಕಾಡಿಗೆಯ ಕಯ್ಯಲಿ ತೊಡಿಸು
ಕುಂಕುಮವನೊಡೆಯುಡಕೆಯಂ ಹೂಸು ಹಣೆಯಲ್ಲಿ
ಕಂಕುಳಲಯಿಕ್ಕು ಮೂಗುತಿಯ ನಾಸಿಕದಲ್ಲಿ ಸಾದ ತೊಡೆಯೆಂದೆಂಬಳು।
ಬಿಂಕದಿಂ ಮೆಱೆವ ಕಡೆಯವನು ತುಱುಬಿನೊಳಿಕ್ಕು
ಭೋಂಕೆಂಬ ಅಳಿಗಳಂ ಕಾಲೊಳಗೆ ಕಟ್ಟೆಂದು
ಶಂಕರಾರಿಯ ತಾಪದಿಂ ಮರುಳ್ಗೊಂಡಳೊಬ್ಬಳು ಮನೆಯ ಮುಂದೆ ಮುಗುದೆ॥೫೦॥

ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು
ಕಾಲ ಪೆಂಡೆಯವ ಮುಡಿ ಚೌರಿಯಂ ಕಾಲ್ಗಟ್ಟು
ಹಾಲ ಹರವಿಯ ಬಿಗಿದು ನೆಯ್ದಿಲಂ ಬಿಸಿಮಾಡು ನೆಲಹಿನಲಿ ಸಂತವಿಡಿಸು।
ಮೇಲುವರ್ತಿಯ ಹೂಸು ಪುಣುಗನೊಡೆ ತಾ ಕಯ್ಯ
ಕೀಲು ಕಡಗವ ಮೆಟ್ಟು ಬಾಳೆಫಲವಿಕ್ಕೆಂದು
ಮೇಲ ನೋಡುತೊಬ್ಬ ಕಾಮಿ ಕುಸುಮಾಸ್ತ್ರಕ್ಕೆಗುಱಿಯಾಗಿ ನಿಂದಿರ್ದಳು ॥೫೧॥

ತರುಣಿ ಕತ್ತುರಿಯ ಕೊಯ್ಯರವಿಂದದುರುಳಿಯಂ
ಬೆರಸು ಸಿರಿಗಂದವಮಂ ತಿಗುರಾಲವಟ್ಟವಮಂ
ಅರಿಸಿನವ ಬೀಸು ಕನ್ನಡಿಯ ಕುಳ್ಳಿರಲಿಕ್ಕು ಗದ್ದುಗೆಯ ಬೆಳಗೆಂಬಳು।
ಮೊರೆವಳಿಯ ಸರಗಟ್ಟು ಮರುಗ ಮಲ್ಲಿಗೆಯ ಸೋ
ಹರಗಿಳಿಯ ತುಱುಬು ಸುರಗಿಗೆ ಕುಟುಕನಿಕ್ಕೆನುತ
ಕರೆವರಾರೆಂದು ಕೋಗಿಲೆಯ ಸರಗೇಳ್ದು ಹರಿದಳು ಮುಗ್ಧೆ ವಿರಹದಿಂದ ॥೫೨॥

ಹೂವನರೆ ಚಂದನವ ಕೊಯ್ ಗಿಳಿಗಳಂ ಬೆಳಗು
ದೀವಿಗೆಯನೋದಿಸೋವರಿಗೆ ನೀರೆಱೆ ವನದ
ಮಾವ ಧವಳಿಸು ಹಸಿದ ಹಾಸಿಂಗೆ ಹಾಲನೆರೆ ಹಂಸೆಯಂ ಹಚ್ಚವಡಿಸು।
ತಾವರೆಯ ಹಣ್ಣ ತಾ ದ್ರಾಕ್ಷೆಯರಳಂ ನೀಡು
ಬಾವಿಯಂ ತೊಳೆಯೆಲೆಯ ಹೊಗದಿರೆಂದೊಬ್ಬ ರಾ
ಜೀವಮುಖಿ ವಲ್ಲಭನನಗಲ್ದ ವಿಕಳತೆಯಿಂದ ನುಡಿದಳಬಲೆಯರ ಕೂಡೆ ॥೫೩॥

ನನೆಬಿಜ್ಜಣಿಗೆಯ ತಣ್ಣೆಲರಿನಾಱದುಯೆನ್ನ
ತನುತಾಪ ಮತ್ಪ್ರಿಯನ ಜಿಹ್ವಾನಿಲದೊಳಲ್ಲ
ದನುಲೇಪದಿಂ ಮಾಣ್ಬುದೇಕಲ್ಲ ಬಿಗಿಯಪ್ಪು ವಜ್ರಲೇಪದೊಳಲ್ಲದೆ।
ಮನದ ಡಗೆ ಪನ್ನೀರ ಶೈತ್ಯದಿಂ ಪರಿವುದೇ
ಇನಿಯನಂ ನೆರೆದ ಘರ್ಮಾಂಬುವಿಂದಲ್ಲದಾ
ವನಜ ಪಲ್ಲವ ವೇಕೆ ನಲ್ಲ ಕರ ಪಲ್ಲವದ ಸೋಂಕಾಗಬೇಕೆಂದಳು ॥೫೪॥

ಇರೆ ಚಿತ್ತಿನಿಯರ ಸೇರುವೆಯಲ್ಲಿ ವಿಟಜಾಲ
ಗರವಿ ಹಸ್ತಿನಿಯರೊಳು ಕೂಡುವ ವಿದೂಷಕರು
ಸುರತದೊಳು ಶಂಖಿನಿಯರೊಡನೆ ಕೂಡುತ್ತಿರ್ಪ ಪೀಠಮರ್ದನರ ಗಡಣ|
ಕರೆದು ಪದ್ಮಿನಿಯರಂ ಭೋಗಿಸುವ ನಾಗರೀ
ಕರ ಸಮೂಹಗಳ ನಾನಾಬಂಧ ಮಾಧುರೋ
ತ್ಕರ ಕೂಟದಬಲೆಯರು ಚಿತ್ರಿಸಿದ ನೆಲೆಮಾಡದೊಳು ತೋಱುತಿರ್ದರಂದು ॥೫೫॥

ಕಮಲ ಮುಖವೆಂಬ ರಣಮಂಡಲಂ ಬೆಮರೆ ವಿ
ಭ್ರಮಭ್ರೂಲತಾಧನುರ್ಧರನ ಬಲು ಹಳಿಯೆ ಸು
ಭ್ರಮರಾಳಿ ಕುಂತಳಂ ತಾಱುತಟ್ಟುಂಗೆಡೆಯೆ ಗಳರವದಿ ನೂಕಿ ದನಿಗೆ|
ಸಮದೇಭಕುಂಭ ಕುಚವೆಂಬ ಕೊತ್ತಳವನಡ
ರ್ದಮರ್ದಪ್ಪಿಯಪ್ಪಿ ಕಾಲಾಳು ಮೇಲಾಳಾಗಿ
ಸಮರತಿಯ ಸಂಭ್ರಮದ ಲಗ್ಗೆಗೊಳಗಾಗಿ ಯೌವನದುರ್ಗವಿಂತಿರ್ದುದು ॥೫೬॥

ನಾಡೆಪುರವೆಲ್ಲವಂ ನೋಡಿ ಕೊಂಡಾಡಿ ಸುಳಿ
ದಾಡಿ ಬಂದರಮನೆಯೊಳೊಡನೆಯ ಚಮೂಪರೊಡ
ಗೂಡಿ ಮಜ್ಜನ ಭೋಜನಂ ಮಾಡಿ ಬೀಳ್ಕೊಟ್ಟು ಸೆಜ್ಜೆಯರಮನೆಯ ಸಾರ್ದು|
ಮೂಡುವೆಳನಿದ್ರೆಯ ಸುಖಕ್ಕೆಯ್ದಿ ನೆನಹನೀ
ಡಾಡಿ ರವಿಕುಲಜನಿರುತಿಪ್ಪ ಕಾಲದೊಳಿತ್ತ
ಬಾಡಿತ್ತು ಚಂದ್ರಮನ ಸೊಬಗು ರಾತ್ರೀಸತಿಯ ಜವ್ವನಂ ಹಳದಾದುದು ॥೫೭॥

ಓರಂತೆ ಕಾಡುವಳಿಯುಂಡಲೆಗೆ ಕಂದಿದುವು
ಕೈರವಂ ಹಗಲು ಹಸಿದ ಚಕೋರಿಗಳ್ ಕುಡಿದು
ತೀರಿತ್ತು ಬೆಳುದಿಂಗಳುಳ್ಳ ಕಳೆಯುಂ ಹಿಂಡಿ ಹೀರಿ ಬಿಸುಟಂತಬ್ಜದ|
ವೈರಿಯಿರೆ ಕಂಡು ಕಂಡುಮ್ಮಳಿಸಿ ಕಂದಿದುವು
ತಾರಕೆಗಳೆಂದು ಕೇಳ್ವಬುಧಿ ಬಡವಾದುದು ಮ
ಹಾರಾತ್ರಿಯುಳಿವಾಗಲೆಂದು ನೆಲೆಗೆಡಲು ಕೆಡದಿರ್ಪರಾರೀ ಜಗದೊಳು ॥೫೮॥

ಸರಸ ಕಳೆಗಳನನಿಮಿಷರ್ಗಿತ್ತು ಬಡವಾದ
ಪರಹಿತಾತ್ಮಕನೆಂದು ಮೆಚ್ಚಿ ಕೊಂಡಾಡಿ ಶಂ
ಕರ ತನ್ನ ಮಸ್ತಕವನೇಱಿಸಿದ ಮುದದಿಂದ ಮೈಮಱಿದು ಗುರುಸತಿಯನು|
ನೆರೆದೊಡನ್ಯಾಯಕ್ಕೆ ಹೇಸಿ ಹೇವರಿಸಿ ಮುನಿ
ದಿರಿಸದೀಡಾಡಿದೊಡಧಃಪಾತಕಕ್ಕಿಳಿದ
ನರವಿಂದ ವೈರಿಯೆನಲಪರಾಂಬು ರಾಶಿಗಿಳಿದುದು ಸುಧಾಕರಬಿಂಬವು ॥೫೯॥

ಮೂಡಲರುಣೋದಯವದತ್ತಲತ್ತಂ ಹರಿದು
ತೀಡಿತ್ತು ತಂಬೆಲರು ಪಂಚ ಮಹವಾದ್ಯಗಳು
ನಾಡೆ ಮೊಳಗಿದವು ಪೂರೈಸಿದವು ಶಂಖಗಳು ಶಿವನಾ ಗೃಹಾಂತರದೊಳು।
ಪಾಡುತಿರೆ ಗಾಯಕಿಯರರಮನೆಗಳಲ್ಲಲ್ಲಿ
ನಾಡೆ ಪರಸುವ ಪುಣ್ಯಪಾಠಕರ ರವದೊಡನೆ
ಮೂಡಿದಂ ರವಿಯುದಯಗಿರಿ ಶಿಖರದಗ್ರದೊಳು ಕಿರಣತತಿ ಹೊಳೆಹೊಳೆವುತ ॥೬೦॥

ನಾಡೆ ಕಂಬೆಳಗನೊಳಕೊಳುತಿರ್ದುದಿಂದ್ರಾಶೆ
ಯೋಡ ತೊಡಗಿತ್ತು ಸಾಗರದ ಪೆರ್ಚುಗೆ ಮೊಗಂ
ಬಾಡ ತೊಡಗಿತ್ತು ಕೈರವಕುಲಂ ಹರುಷದಿ ವಿಕಾಸದಿಂ ಪರಿಮಳವನು।
ತೀವ ತೊಡಗಿತ್ತು ತಂಬೆಲರು ತಾವರೆಯರಲ
ಕೂಡ ತೊಡಗಿತ್ತು ಚಕ್ರಮುದಯಗಿರಿಯೆಡೆಯಲ್ಲಿ
ಮೂಡ ತೊಡಗಿತ್ತಿನನ ಬಿಂಬ ಜೀವರ ಜ್ಞಾನ ಜ್ಯೋತಿಯುದಯಿಸುವಂದದಿ ॥೬೧॥

ವಡಬನುರಿ ಸಿಡಿದು ಕೆಂಗಿಡಿ ಹೊಡೆದು ಮುಳಿದು ಬೆಂ
ಬಿಡದೆ ಬಂದಪುದೊ ಹಿಮಕರನ ಮೇಲಲ್ಲದೊಡೆ
ಯೆಡೆಗೊಂಡ ಕಾರಿರುಳ ವನಿತೆಯರ ನಡುದಲೆಯೊಳೊಗೆದ ಬಱಸಿಡಿಲ ಕೋಪ।
ಹೊಡಕರಿಸಿ ಕಾಲಭೈರವನು ಕಡೆಯುವ ಮಾಡೆ
ಮೃಡನ ಭಾಳಾಕ್ಷದನಲನೊಳಿಟ್ಟು ಕಾಸಿ ಗಿರಿ
ಯಡಿಗಲ್ಲ ಮೇಲಿಟ್ಟ ಕೆಂಡಗೆದಱಿನ ಬಟ್ಟದೆನೆ ದಿನಪನೆಯ್ತಂದನು ॥೬೨॥

ಶಿತಿಕಂಠನಾಮ ಪೂರಿತ ವಾಕ್ಯಾಮೃತ ನಿರೀ
ಕ್ಷಿತ ನಯನ ಮಣಿ ಮುಕುರ ಮಧ್ಯ ಬಿಂಬಿತ ವದನ
ನತುಳ ಬುಧ ಮಂಗಳಾಶೀರ್ವಾದ ಶೇಷಾಕ್ಷತಾಕೀರ್ಣ ಜಯಮಸ್ತಕ।
ವಿತತ ಗೋಸ್ಪರ್ಶ ಹಸ್ತಂ ಪುಣ್ಯ ಪಾಠಕ
ಸ್ತುತಿಗೆಯ್ವ ವಾದ್ಯನಾದಾಲಗ್ನ ಕರ್ಣನು
ನ್ನತ ಸುಜನನೀರಾಜ ಕಾಂತಿ ಮಯಕಾಯನೆಂದುಪ್ಪವಡಿಸಿದನರಸನು ॥೬೩॥

ಮುದದೊಳೆದ್ದು ಶರೀರಧರ್ಮಮಂ ಚರಿಸಿ ಕರ
ಪದ ಮುಖ ಪ್ರಕ್ಷಾಳನಂಗೆಯ್ದು ಪುಣ್ಯಸಂ
ಪದದ ಸಂಧ್ಯಾವಂದನಂ ಮಾಡಿ ವಿಹಿತಾರ್ಘ್ಯಪಾದ್ಯಮಂ ನಿರ್ವರ್ತಿಸಿ।
ವಿದಿತ ಶಿವಲಿಂಗಪೂಜಾಸುಖಮನೆಯ್ದಿ ನಿಯ
ಮದ ದಾನಧರ್ಮಂಗಳಂ ಮಾಡಿ ರಿಪುರಾಯ
ಮದಗಜವಿದಳನೋಗ್ರ ಸಿಂಹನುತ್ತುಂಗ ಸಿಂಹಾಸನಕ್ಕೆಯ್ತಂದನು ॥೬೪॥

---

ಧಾರುಣಿಯ ಜನದ ಹುಯ್ಯಲ ನಿಲಿಸಬೇಕೆಂದು
ಪಾರದಿಗೆ ಪೇೞಿ ಸುಟ್ಟು ಮೃಗ ಪಕ್ಷಿ ಕಾಲವ ಸಂ
ಹಾರಿಸುತ ಹೇಮಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು । ಸೂಚನೆ ।

ಲೀಲೆಯಿಂದೋಲಗಂಗೊಟ್ಟು ಜಯರೋಲ ಧೂ
ಪಾಲಕಂ ಕರೆಕರೆ ಸಮಸ್ತ ಬೇಂಟೆಯ ಶಬರ
ಜಾಲಮಂ ಖಗ ಹೃದಯ ಶೂಲಮಂ ಮೃಗವ ಕಡೆಗಾಲಮಂ ಬೇಗವೆಂದು।
ಮೇಲೆ ಮೇಲಾಕ್ರಮಿಸಿ ಕರಸೆ ನಿಟ್ಟಿಸುವ ಕ
ಣ್ಣಾಲ ಕತ್ತಲಸೆ ಕತ್ತಲೆಯ ತತ್ತಿಗಳಂತೆ
ಹೋಲಿಕೆಗೆ ಹೊಱಗಾಗಿ ಬರುತಿರ್ದರಮಮ ಕರ್ಕಶ ಬೇಡವಡೆಯೊಡೆಯರು ॥೧॥

ಕಾರೊಡಲು ಮೋಗಡರ್ದ ಮೆಯ್ನವಿರು ಕೆಂಗಲಪ
ತೋರಗಣ್ ಕೆವಿಸ್ಮಾಸೆ ಗುಜುಱುದಲೆ ಬಳೆದ ಕಾ
ಳೋರಗನನೇಳಿಸುವ ತೋಳ್ ನಾರಿ ಹೊಡೆದೊಡೆದ ಹುಣ್ಣು ಮೇಲಣ ಕೈಪೊಡೆ।
ಪೇರುರಂ ಕಿಱಿಯ ನಡು ಕೊಬ್ಬಿದ ಪೆಗಲು ಪಿಡಿದ
ಕೂರಂಬು ದೀರ್ಘಧನುವೆರಸಿ ನೆರೆದುದು ಕಾನ
ನಾರಿಗಳೆನಿಪ್ಪ ಶಬರಾಧಿಪರು ಕರ್ಬೊಗೆಯ ಕಾಂತಿ ಸಭೆಯಂ ಮುಸುಕಲು ॥೨॥

ಹೊಂಗಿ ಮಿಡುಕುವ ಮಿಾನಗುದಿಗಳಂ ಬೆಳೆದ ಸಾ
ರಂಗದೆಳವಱಿಯನೆರಳೆಯ ತೊಡೆಯನುಗ್ರ ಮಾ
ತಂಗ ದಂತಂಗಳಂ ಚಮರಿವಿಣಿಲಂ ಜೇನ ನಳಿಗೆಯಂ ಪೀಲಿವೊಱೆಯ।
ಸಿಂಗದುಗುರಂ ವ್ಯಾಘ್ರಚರ್ಮಮಂ ಕ್ರೋಡ ಶಾ
ಬಂಗಳಂ ಪೂತಿ ಬೆಕ್ಕಂ ಹರಿಶ್ಚಂದ್ರ ಗಾ
ಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡವಡೆಯೊಡೆಯರು ॥೩॥

ಹರನಂತೆ ಕಾನನಾಂತಕರದ್ರಿಯಂತೆ ಕುಧ
ರರು ದಿವಿಜರಂದದಿ ವಿಶೇಷ ಭುಕ್ತರು ಶೀತ
ಕರನಂತೆ ದೋಷಿಗಳು ಧರ್ಮನಂತವಿನಾಶರಿನನಂತಿರಪದಸ್ಥರು।
ಹರಿಯಂತೆ ವನವಾಸಿಗಳು ದಶಗ್ರೀವನಂ
ತಿರಲನಿಮಿಷಾರಿಗಳು ಚಾರುಮಂಗಳನಂತೆ
ವರಕುಜಾತರುಗಳೆನಿಸುವ ಕಿರಾತರು ನೆರೆದರವನೀಶನೋಲಗದೊಳು ॥೪॥

ಮದ ಹಸ್ತಿಯಿಱಿದ ಘಾಯಂಗಳ ವರಾಹನೆ
ತ್ತಿದೆ ಡೋಱುಗಳ ಮೃಗಾಧಿಪನುಗಿದು ಬಗಿದು ತೋ
ಡಿದ ಬಾದಣದ ಕರಡಿ ಕಾಱಿ ಬತ್ತಿದ ತೋಳ ಹುಲಿ ಹೊಯ್ದು ಜರಿದ ಹೆಗಲ।
ಪದೆದು ಕೋಣಂ ಹೊಯ್ದ ಹೋರ ಭೇರುಂಡನೆಱ
ಗಿದ ಗಂಟುಗಳ ಕಡವೆ ತುಳಿದ ಹೆಜ್ಜೆಗಳ ಚ
ಹ್ನದ ಬೇಡನಾಯಕರು ನೆರೆದರು ಹರಿಶ್ಚಂದ್ರ ಭೂನಾಥನೋಲಗದೊಳು ॥೫॥

ಹರಿಣದಲ್ಲಣನೆಂಬ ಹುಲಿಬಾಕನೆಂಬ ಸೂ
ಕರ ಮೃತ್ಯುವೆಂಬ ಸಾರಂಗಮರ್ದನನೆಂಬ
ಮರೆಮಾರಿಯೆಂಬ ಕಾಳ್ಕೋಣ ಕಂಟಕನೆಂಬ ಭಲ್ಲೂಕಮಲ್ಲನೆಂಬ।
ಕರಿಸಿಂಹನೆಂಬ ಸಿಂಹಪ್ರಕರ ಶರಭನೆಂ
ಬರಿ ಶರಭ ಭೇರುಂಡನೆಂದೆಂಬ ಪರಿಪರಿಯ
ಬಿರುದುಲಿವ ಬಾವುಲಿಯ ಕುನ್ನಿಗಳು ನೆರೆದವಂದವನೀಶನೋಲಗದೊಳು ॥೬॥

ಸಡವೆಗತ್ಯಾಸ್ವಾದಿಯೆಂಬ ಉಡು ವೊಲಗಳಿಗೆ
ದಡಿವೊಯಿಲನೆಂಬ ಕರಡಿಯ ಗಂಡನೆಂಬ ಬಿ
ಟ್ಟಡೆ ತೋಳಜಜ್ಝಾರನೆಂಬ ನರಿದಿನಿಹಿಯೆಂದೆಂಬ ಕುನ್ನಿಗಳನಾಯ್ದು।
ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು
ಪೊಡವಿಪತಿಯಾ ಹರಿಶ್ಚಂದ್ರರಾಯನ ಮುಂದೆ
ನಡೆ ಜೀಯ ತಡವೇಕೆ ಕಣ್ಗೆ ಹಬ್ಬವ ಮಾಡುವೆಡೆಯ ತೋಱುವೆವೆಂದರು ॥೭॥

ತಡಿಕೆವಲೆ ತಟ್ಟಿವಲೆ ಹಾಸುವಲೆ ಬೀಸುವಲೆ
ಕೊಡತಿವಲೆ ಕೋಲುವಲೆ ತಳ್ಳಿವಲೆ ಬಳ್ಳಿವಲೆ
ತೊಡಕುವಲೆ ತೋಱುವಲೆ ತೊಟ್ಟಿವಲೆ ಗೂಟವಲೆ ಕಣ್ಣಿವಲೆ ಕಾಲುವಲೆಯು।
ಸಿಡುವವಲೆ ಸಿಲುಕುವಲೆ ಹಾಱುವಲೆ ಜಾಱುವಲೆ
ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ
ಮಡಿಕೆವಲೆ ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದೇನೆಂಬೆನು ॥೮॥

ತಡಿಕೆ ಗಳ ಬಲೆ ಗಾಣ ಕೂಳಿ ಬಿಲು ಸರಳು ನಾಯ್
ಗಿಡುಗ ನೆರೆಮಡ್ಡಿ ಬೆಳ್ವಾರ್ಪಟಂ ತೋಱೆತ್ತು
ಹಿಡಿಯೆರಳೆ ಸಿಲುಕುಗಟ್ಟಿಗೆ ಬೀಸುಗಣ್ಣಿ ಗುಗ್ಗುರಿಯರಳು ಗೌಜು ಸುರಗಿ।
ಕೊಡತಿ ಕರವತಿಗೆ ಕೂಳೆಕ್ಕವಡ ದಂಡೆ ಕಯ್
ಹೊಡೆಯಿಟ್ಟಿ ಗೂಡುಗಳು ಕತ್ತಿ ಬಡಿಕೋಲ್ ಕಲ್ಲ
ಹಿಡಿದ ಹುಲಿ ಶರಭ ಭೇರುಂಡ ಸಿಂಹ ಪ್ರಕರವೆರಸಿ ಬೇಡರು ನೆರೆದರು ॥೯॥

ಸೇನೆ ನೆರೆಯಿತ್ತು ರಿಪುಕುಮುದ ಮಾರ್ತಾಂಡ ಪು
ಣ್ಯಾನೂನ ತುಂಡ ಬಲಧರಿತ ದೋರ್ದಂಡ ಭೂ
ಮಾನಿನಿಯ ಗಂಡ ವಿಜಯಾಂಗನೆಯ ರಸಿಕ ರಣರಂಗಮುಖ ಕಾಲದಂಡ।
ದಾನಿ ಚಿತ್ತೈಸೆಂಬ ಮಾತಿನೊಡನೆದ್ದು ಸು
ಮ್ಮಾನದಿಂ ಸತಿಸುತರ್ ಮಂತ್ರಿ ಸಹಿತಡಿಯಿಟ್ಟು
ಭಾನುಕುಲ ತಿಲಕಂ ಹರಿಶ್ಚಂದ್ರರಾಯನೇಱಿದನು ಮಣಿಮಯ ರಥವನು ॥೧೦॥

ಒಱಲಿದವು ಬಿರುದ ಸಾಱುವ ಕಹಳೆ ಮೊರೆದು ಬೊ
ಬ್ಬಿಱಿದವೇೞೆಂಟು ಸಾಸಿರ ಶಂಖ ಪಂಚಮದ
ಹಱೆಗಳಱಿಚಿದವು ತಂಬಟದ ಕುಡು ಹಾಡಲು ಕದಂಬ ಶಬ್ದದ ರವದಲಿ।
ಮಱುಗಿದನು ಸುರನಾಥನಗ್ನಿ ಬಸವಳಿದ ಯಮ
ಬೆಱಗಾದ ನಿರುತಿ ಹಲುಗಚ್ಚಿದನು ವರುಣ ನಿ
ಬ್ಬೆಱಗಿನೊಳಗಿರ್ದ ಮಾರುತ ನಿಂದ ಧನದನಂಜಿದ ಶೂಲಿ ಭೀತಿವಡೆದ ॥೧೧॥

ಬೇಗದಲಿ ಮನಪೊದಗರಾಱಿದತಿ ನಿರ್ಗಮದ
ರಾಗಿಂಗೆ ಸಪ್ತವಾರಿಧಿ ನೆರೆಯುವವ ನಿಲಿಸು
ವಾಗ ವಸುಧೆಯು ಮೇಲೆ ನಿಲರೊಲ್ಲೆವೆಂಬ ಸಂದೇಹಕೊಳಗಾದ ತುರಗ।
ತಾಗುತ್ತ ಹಳಚುತೊಂದೊಂದ ಹಿಂದಿಕ್ಕಿ ಮೆಯ್
ರಾಗಿನಲ ಕುಣಿವುತೋರಣವಾಗಿ ರಾವುತರು
ತೂಗಿ ನಿಲುಕಲು ಹೋಗಿ ತೆಗೆಯೆ ನೆರೆಯೊಳಗಿಪ್ಪ ವಾಜಿ ಮೂಱಕ್ಷೋಹಿಣಿ ॥೧೨॥

ಸಬಳ ಸೆಲ್ಲೆಹ ಕೊಂತ ಕಕ್ಕಡೆ ತ್ರಿಶೂಲವಾ
ಪ್ರಬಲ ಗದೆ ಸುರಗಿ ಚಕ್ರಂ ಮುದ್ಗರಂಗಳಾ
ಸಬುದದಿಂದೊಗೆದ ಕಿಡಿ ಗಜಗಲಿಸೆ ನೆರೆದ ಕಾಲಾಳು ಮೂಱರ್ಬುದವಿರೆ।
ಶಬರ ಬಲ ದೇಱೆ ಮೂಱಕ್ಷೋಣಿ ಬರಲು ಕಂ
ಡಬುಜಸಖಕುಲನ ಮನವುಬ್ಬಿ ದೇಂಟೆಯು ನೋಳ್ಪ
ಸೊಬಗು ಘನವಾಯ್ತು ನೃಪನೆಂಬ ನಾಗರಿಕಂಗೆ ವಿಪಿನ ಮಾನಿನಿಯ ಮೇಲೆ॥೧೩॥

ಪೊಡವಿ ಜಡಿಯಲು ದೆಸೆಗಳುಬ್ಬಸಂಬಡೆ ಫಣಿಯ
ಹೆಡೆ ಕೊರಳೊಳಾಳೆ ಕೂರ್ಮನ ಬೆನ್ನು ತಗ್ಗಿ ಬಸು
ಱೊಡೆಯ ಹೊಗೆ ಬೊಬ್ಬೆಗೊಟ್ಟಬ್ಬರಿಸಿ ನಗರಿಯಿಂ ಹೊಱಗೆ ಹೊಱಬೀಡಬಿಟ್ಟು।
ಪುಡಿಪುಡಿಸಿ ರಥವನೊಲವಿಂ ನೂಂಕಿ ಬಲುಬೇಡ
ವಡೆ ಕಡಗಿ ಹರಕರಿಸಿ ನಡೆಯೆ ಕೈವಿಕ್ಕಿ ಹೇ
ರಡವಿ ಗೋಳಿಡಲು ದಾಳಿಕ್ಕಿದಂ ನಿಜ್ಜದೇಶ ಜನ ವನಧಿ ಕುಮುದ ಸಖನು ॥೧೪॥

ಜಾಲವಾಲಂ ನೆಲ್ಲಿ ಕನ್ನೆಲ್ಲಿ ಕಡವಡವ
ಹಾಲೆಯುಂಕೋಲೆ ದಿಂಡಂ ತಂಡಸೆರನರಳಿ
ದೇಲ ಮರುಟಾಳ ಹಲಸೆಲವ ಕಿಱುನಂದಿ ಚಂದನ ಕಕ್ಕೆ ಬಿಕ್ಕೆ ತಱಯು।
ಹೂಲಿ ಮಾಲಿನಿ ಬನ್ನಿ ಹೊನ್ನೆ ಸೊಗಡಗಿಲು ಕಿ
ತ್ತಾಳಿ ಹೆಬ್ಬಾಳೆಯೌದುಂಬರಂ ತುಂಬುರಿಂ
ಗಾಲಯುವೆನಿಪ್ಪ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು ॥೧೫॥

ತಡಸು ಕೆಂದರಿ ತೆಂಗು ಸಂಗು ಕೇದಗೆ ಕದಳಿ
ಯೊಡವುವೊದವಿದ ನೆಲ್ಲಿ ಚಿಲ್ಲ ಬಿಲ್ವರ ರುದ್ರ
ನಡುವು ತಂಡಸು ತಪಸು ತಾರಿ ಕೆಂಗುಂ ತಿರುಳಿ ತಗ್ಗಿ ಕುಗ್ಗಿಲು ತುಂಬುರ।
ಬಿಡೆ ತೊಟ್ಟ ಹಾರಿವಾಳಂ ಹುಣಿಸೆ ಖರ್ಜೂರ
ಜಡಿದೊಱಗುತಿಹ ಮಾವು ಬೇವು ಮಂದಾರಂಗ
ಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು ॥೧೬॥

ಇರುಳ ಲೇಪವ ಪಡೆದ ಕಾಳೋರಗನ ಮನೆಯೊ
ಮರಳಿ ವಡಬಾನಲಂ ಕೆರಳಿಯುಗುಳಿದ ಕಿಡಿಯೊ
ಸುರಗಿ ಕೌವೋದಕಿಯ ಕೂರಲಗಿನಿಂ ಮೆಱೆವ ಧಾರೆಗಳ ಹೊಗರಿನೊಳಗೆ।
ಹರಿದು ತ್ರಿಪುರವ ಸುಡುವ ಮದನಹರ ಬಾಣವೋ
ಕೆರಳಿದುರಿಯೊತ್ತರಿವ ಕಜ್ಜಳದ ಬೆಟ್ಟವೋ
ಹರಿವ ಮಱದುಂಬಿಗಳ ಧಾಳಿಯೋ ಎಂದೆನಿಸಿ ಕಾನನಂ ಕಣ್ಗೆಸೆದುದು ॥೧೭॥

ಸಲೆ ಶಿವಮಯಂ ಶಿವಮಯಂ ಶಿವಮಯಂ ಸಮು
ಜ್ವಲ ಶಿಖಿಮಯಂ ಶಿಖಿಮಯಂ ಶಿಖಿಮಯಂ ನಿರಾ
ಕುಲ ಶುಕಮಯಂ ಶುಕಮಯಂ ಶುಕಮಯಂ ಗಿರಿಯ ಸಾನುವಿಂದೊಸರ್ದು ಪರಿವ।
ಜಲ ಹರಿಮಯಂ ಹರಿಮಯಂ ಹರಿಮಯಂ ಮೃಗಾ
ಕುಲ ಮಧುಮಯಂ ಮಧುಮಯಂ ಮಧುಮಯಂ ಶಬರ
ಬಲ ಬಾಣಮಯ ಬಾಣಮಯ ಬಾಣಮಯವಾಗಿ ಕಾನನಂ ಕಣ್ಗೆಸೆದುದು ॥೧೮॥

ದೇವಸಭೆಯಂತೆ ಮುನಿಸಭೆಯಂತೆ ಸರ್ವೋಪ
ಜೀವಿಯಂದದಿ ಕೌಶಿಕಾಧಿಷ್ಠಿತಂ ಪಾಂಡ
ವಾವಾಸದಂತೆ ಲೋಚನದಂತೆ ಬೆಳುದಿಂಗಳಂತರ್ಜುನಾಡಂಬರಂ।
ಓವಿ ಸುರಸಭೆಯಂತೆ ಮದದಂತಿಯಂತೆ ಮೇ
ಘಾವಳಿಗಳಂತೆ ವೃಂದಾರಕೋನ್ನತವಾಗಿ
ಭಾವಿಸುವೊಡರಿದೆನಿಸಿತತಿ ಭೀಕರಾಕಾರದಿಂದ ಘೋರಾರಣ್ಯವು ॥೧೯॥

ಉಗುರು ತುಪ್ಪುಳು ಕೊಳಗು ನೊರಜು ನೊರೆಗೆಸಱು ಸೊಗ
ಡುಗಳೆಂಬ ಹಲವು ಹೆಜ್ಜೆಯನಱಿಸಿ ತೊಳಲುವು
ಬ್ಬೆಗೆ ಬೇಡ ಬಲೆಯೊಡ್ಡಿ ತೋಹುಗೊಂಡೆರೆಗೆದಱು ಬೆಳ್ಳಾರ ಸುತ್ತಿ ಸರಿವ।
ಬಿಗಿವ ಸಂಕಟ ಬೇಡ ಗಿಡುವೆಲ್ಲ ಮರನೆಲ್ಲ
ನಗವೆಲ್ಲ ಹೊಲನೆಲ್ಲ ನೆಲನೆಲ್ಲ ದೆಸೆಯೆಲ್ಲ
ಖಗಮೃಗದ ಮಯವಾದುದಿಱಿಯಲೆಸೆಯಲು ಕೆಡಪುವವರುಳ್ಳಡಹುದೆನಿಸಿತು॥೨೦॥

ಮಿಕ್ಕ ಸರುವಿಂಗೆ ದರುವಿಂಗೆ ಹಳ್ಳಕ್ಕೆ ಕೊ
ಳ್ಳಕ್ಕೆ ಗಿಡುವಿಂಗೆ ಮಡುವಿಂಗೆ ಬೆಟ್ಟಕ್ಕೆ ಪು
ಟ್ಟಕ್ಕೆ ಕುತ್ತುಱ ಕೋಣೆಯಿಡುಕುಱಿಂದಿಡಿದ ಮೆಳೆ ಮೆಳೆಗೆ ನಡುನಾಳಲಿಂಗೆ।
ತೆಕ್ಕೆಗತ್ತರೆಗೆ ಬೇಡರ ಪಡೆಗೆ ನಾನಾ ಮೃ
ಗಕ್ಕೆ ನಾನಾ ಧ್ವನಿಗೆ ನಾನಾ ಭಯಂಕರ
ಕಿಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತಿರ್ದುದಡವಿ ॥೨೧॥

ನಡೆವ ದನಿ ಹರಿವ ದನಿ ಕರೆವ ದನಿ ಬಿಲ್ಲ ಜೇ
ವೊಡೆವ ದನಿಯೆಸುವ ದನಿ ಬೈವ ದನಿ ಕೂಗಿ ಬೊ
ಬ್ಬಿಡುವ ದನಿಯಿಱಿವ ದನಿ ಮುಱಿವ ದನಿ ತಱಿವ ದನಿ ಬೇಗೆಯುರಿವ।
ತುಡುಕು ದನಿ ತಿತ್ತಿರಿಯ ದನಿ ಹಱಿಯ ದನಿ ಸನ್ನೆ
ಗೊಡುವ ದನಿ ಖಗಮೃಗದ ಗರ್ಜನೆಯ ದನಿಯೊಱಲ
ಕೆಡೆವ ದನಿಗಳು ಬೆರಸಿ ಬೆಳೆಯೆ ಘೋರಾರಣ್ಯವತಿಭಯಂಕರವಾದುದು ॥೨೨॥

ಹಿಡಿ ನವಿಲನಿಱಿ ಹುಲಿಯನಟ್ಟು ಮರೆವಿಂಡ ದರಿ
ಗೆಡಹು ಕರಿಯಂ ಜೊಪ್ಪವಿಡಿದ ಹಂದಿಗೆ ತಡವಿ
ಬಿಡು ನಾಯನೆಚ್ಚೆರಳೆಯಂ ಕಲ್ಲಲಿಕ್ಕು ಕೋಣನನು ಹೊಱ ಹೊಗಲೀಯದೆ।
ಹೊಡೆಯುಡುವ ಮಱೆವಿಡಿದು ಕುತ್ತು ಕೋಣನನೊಯ್ಯ
ನಿಡು ಮೊಲನ ಮರಚು ಸಿಂಹವ ಹಲವು ಬಲೆಗೆದಱು
ನಡೆಗೆಡಿಸು ಹಕ್ಕಿಗಳನೆಂಬ ಬೇಡರ ಬೊಬ್ಬೆಯಿಂದಡವಿ ಘೀಳಿಟ್ಟುದು ॥೨೩॥

ಹರೆದು ನಡೆ ಬಲೆಯ ಹಸರಿಸು ಹಜ್ಜೆಯಂ ನೋಡು
ಸರುಹ ಕಟ್ಟುಲುಹನಾಲಿಸು ಕುತ್ತುಱಂ ಸೋದಿ
ಸೆರೆಗೆದಱು ಬೆಳ್ಳಾರ ಬಿಗಿ ತೋಹಿನೊಳು ನಿಲ್ಲು ತಿಱಿಯಂಬ ಬಿಡು ನಾಯ್ಗಳ।
ಕೊರಳ ಹಾಸದ ನೇಣ ಸಡಿಲವಿಡು ಸನ್ನೆಗೆಯ್
ಮರನೇಱು ಬಗೆ ಕುಣಿಗಳೊಳು ಕುನ್ನಿಯಂ ಹೊಗಿಸು
ಭರವೊಳೆಂದೊಬ್ಬರೊಬ್ಬರನಾಡುವಬ್ಬರದ ಬೊಬ್ಬೆ ಹಬ್ಬಿತ್ತಡವಿಯ ॥೨೪॥

ಎರೆಯ ಚೆಲ್ಲುಲುಹನಱು ಬಲೆಗೆದಱು ಹಜ್ಜೆವಿಡಿ
ಸರುಹ ಬಿಗಿ ತೋಹುಗೊಳು ತಡಿಕೆಗಟ್ಟಂಟುದೊಡೆ
ಹರಿದು ಹೊಗು ಬೆಳ್ಳಾರ ಬಿಗಿ ಹೊದಱ ಹೊದ್ದಿ ಸುದ್ದವನೇಱು ಸನ್ನೆದೋಱು ।
ದರಿಯನಗೆಕಿಱುಯಂಬುವಿಡಿ ಬೇಗೆಯಿಡು ಗಾಳಿ
ವರಿಯಱುದು ಹುಲಿಯ ಹಿಡಿ ಹಿಡಿಯೆರಲೆಯಂ ತೋಱು
ಭರದೊಳೆಂದೊಬ್ಬರೊಬ್ಬರನಾಡುವಬ್ಬರದ ಬೊಬ್ಬೆ ಹಬ್ಬಿತ್ತಡವಿಯ ॥೨೫॥

ಎರಳೆ ಸರಳಿಸಿ ಹೋದುದಿಲ್ಲ ಹಿಂಗಾಲೊದೆದು
ತೆರಳ್ದ ಮಣ್ಣಿದೆ ಸೊಕ್ಕಿದೆಕ್ಕಲಂಗಳು ಹೋದ
ವೆರಡು ಕಟವಾಯಿಕಡೆ ಸುರಿದ ನೊರೆಯಿದೆ ಕರಡಿ ತಣಿದಾಡಿ ಹೋದುದಿಲ್ಲಿ ।
ನೆರೆದಿರುಱುಹೆಗಳ ಹೊರೆಯೊಳೊಡದ ಹುತ್ತಿದೆ ಹುಲಿಯು
ಮರೆಯನೆಳೆಯಿತ್ತಿಲ್ಲ ಬಿಸಿ ನೆತ್ತರಿದ್ದುದೆಂ
ದಿರದೆರಱಗಿ ಹಜ್ಜೆಯಂ ನೋಡಿ ಬೆಂಬಳಿವಿಡಿದು ಹರಿವ ಲುಬ್ಧಕರೆಸೆದರು ॥೨೬॥

ನೆಗೆದ ಮೊಗವಿಡಿದುಸುರು ಹುರಿಯೊಡೆದ ರೋಮ ನನು
ಮುಗಿದ ಕಣ್ಣರೆಗಟ್ಟಿದೆಳಗಱುಕೆ ಮಱೆದ ಮೆಯ್
ಬಿಗುಹುಗೆಟ್ಟಳ್ಳೆ ಡೆಂಢಣಿಸುವಡಿಯಾಲಿಸುತೆಳಲ್ವ ಕಿವಿ ರಾಗರಸದ।
ಸೊಗಸನಪ್ಪಿದ ಚಿತ್ತವಳ್ಳಿಱಿವ ಜನದ ದೊ
ಬ್ಬೆಗೆ ಬೆದಱುತಿಪ್ಪ ಮನವೆರಸಿ ಮರುಳಾಗಿ ಗೋ
ರಿಗೆ ಸಿಕ್ಕಿದೆರಲೆಗಳನಕಟಕಟ ನಿಷ್ಕರುಣ ಲುಬ್ಧಕರು ಕೆಡೆಯೆಚ್ಚರು ॥೨೭॥

ಧರೆಯ ಸರಳಿಸುವೆರಳೆ ಬಲುನಾಯ ಬಾಯಿಂದ
ಮುರುಚಿ ಕೊಂಡೋಡುವ ಮೊಲಂ ತೋಹುಕಾಱರಂ
ಹಱುದೆಱಗಿ ಕೊಲುವ ಕೋಣಂ ಗುಳಿಗೆ ಬಾರದಳಲಿಸುವ ಕರಿ ನೆಱೆನಾಟಿದ।
ಸರಳೊರಸಿ ಹೋಹ ಮರೆಹೊಕ್ಕ ಜಾಯಿಲನ ಕಿ
ಬ್ಬರಿಗೊಱೆವ ಹಂದಿ ಬಲೆಯಂ ಹುಗದ ಹಕ್ಕಿಯ
ಬ್ಬರವ ಕಂಡತಿನೊಂದು ಮೀಸೆಗಡಿದಾ ಬೇಡವಡೆಯೊಡೆಯನಿಂತೆಂದನು ॥೨೮॥

ಎಡೆಗೊಡದು ಬೇಂಟೆ ದಿಗುಬಂಧನಂ ಮಾಡು ಕಾ
ಡೊಡೆಯನಂ ನೋನು ಸೊಕ್ಕಿನ ಧೂಪಮಂ ಬೀಸು
ನಡೆ ಕೋಣನೆಲುವನಾಯ್ವೆಂ ಮರೆಯ ಮೂಳೆಯಂ ಮುಱುವೆನಳಲಿಸುವೆರಳೆಯ।
ಅಡಗನುಗಿವೆನು ಸೊಕ್ಕಿದೆಕ್ಕಲನ ರಕ್ತಮಂ
ಕುಡಿವೆನಾರಣ್ಯವೆಲ್ಲಂ ದಣಿಯಬೇಕು ಬಿಡು
ಬಿಡೆನುತ್ತ ಶಬರ ಸಂಕುಳವುಲಿದು ಬೊಬ್ಬಿಟ್ಟು ನಡೆದರದನೇವೊಗಳ್ವೆನು ॥೨೯॥

ಗೋರಿವೇಂಟೆಯನಾಡಿ ಭೂವರಂ ತಿರುಗಿ ಕಾಂ
ತಾರದೊಳು ಮೃಗವನೆಲೆಗೊಳಿಸಿ ಮೇಗಾಳಿಯಿಂ
ದೂರದಿಂ ತೋಱುತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ।
ಹಾರಯಿಸಿ ತಲೆದಡವಿ ತೋಱಿ ಹಾಸವ ತಿವಿದು
ದೂರದಿಂ ಕಂಡು ಹಸರಿಸಿ ಹತ್ತಿ ಹಣುಗಿ ನೆಲ
ಕೋರಂತೆಯಡಗಿ ತನ್ನನುವಿನಳವಿಗೆ ಜುಣುಗಿ ನಡೆದು ಬಳಿಕೇಗೆಯ್ದುದು ॥೩೦॥

ಕುಸಿದ ತಲೆ ಹಣುಗಿದೊಡಲರಳ್ವ ಬಾಯ್ ಸುಗಿದ ಕಿವಿ
ಯುಸುರಿಡಿದ ಮೂಗು ಮಱದೆವೆಯಿಕ್ಕದುರಿಗಣ್ಣು
ಬಸುಱೊಳಡಗಿದ ಬೆನ್ನು ನಿಮಿರ್ದ ಕೊರಳಡಿಗಡಿಗೆ ಗಜಬಜಿಸುತಿಹ ಮುಂದಡಿ ।
ಎಸೆಯೆ ಲಂಘಿಸಿ ನೆಲನನೊದೆದು ಪುಟನೆಗೆದು ಗ
ರ್ಜಿಸುತ ಬರೆ ಹೆದಱಿ ಕಂಗೆಟ್ಟು ಡೆಂಡಣಿಸಿ ಸರ
ಳಿಸುವ ಹರಿಣಂಗಳಂ ವೋದಿ ಮುಱಿದಟ್ಟಿ ಕೆಡಹಿದವು ದೀಹದ ಹುಲಿಗಳು ॥೩೧॥

ಕರಿ ಸೀಳ್ದ ಕೋಣನೆಱಗಿದ ಹಂದಿ ಸೆಳೆದ ಕೇ
ಸರಿ ಬಗಿದ ಹುಲಿ ಹೊಯ್ದ ಕರಡಿ ಕಾಱಿದ ಕಡವೆ
ಯುಱೆ ತುಳಿದ ಸಾರಂಗವಿಱಿದ ಚಿತ್ರಕನಗಿದ ಎಯ್ಯೆಚ್ಚ ಖಡ್ಗಿಯಗಿದ ।
ಮರೆಕುತ್ತಿದೇಱುಗಳ ವೇದನೆಗೆ ಬಾಯ್ಬಿಟ್ಟು
ನರಳುತೊಱಲುವ ಕಿರಾತರನು ಮಲಗಿಸಿಕೊಂಡು
ಮರದ ತಣ್ಣೆಳಲ ತಂಪಿನೊಳು ಸಾಗಿಸುವ ಶಬರಿಯರ ನೋಡುತ ನಡೆದನು ॥೩೨॥

ಓವಿ ಹೀಲಿಯನುಟ್ಟು ತಳಿರ ಮೇಲುದನುರಕೆ
ತೀವಿ ಗುಂಜಾಭರಣಮಂ ತೊಟ್ಟು ಕೇದಗೆಯ
ಹೂವಿನೆಸಳೋಲೆಯಂ ತಿರುಪಿ ಶಿಲೆಯೊರಳಿಕ್ಕಿ ದಂತದೊನಕೆಗಳನಾಂತು ।
ಸುವ್ವಿ ನಲ್ಲನೆ ಸುವ್ವಿ ಸುವ್ವಿ ಕಾನನ ವಿಜಯ
ಸುವ್ವಿ ಬಲುಬಿಲುಗಯ್ಯ ಸುವ್ವಿ ಮೃಗಕುಲಮಥನ
ಸುವ್ವಿಯೆಂದಲ್ಲಿಯ ಪುಳಿಂದಿಯರು ಪಾಡಿ ಚಳಿಸಿದರು ಬಿದಿರಕ್ಕಿಗಳನು ॥೩೩॥

ಬಿದಿರಕ್ಕಿಯಂ ಕುದಿಸಿ ಮದಮೃಗದ ಮಾಂಸಮಂ
ಹದದೊಳಟ್ಟುಱೆ ತೊಳಸಿ ಸಂಭಾರಮಂ ಹಾಯ್ಕಿ
ತುದಿವೆರಲನಿಂದುಪ್ಪ ಬಿದಿರಿ ಬೇಡರ ತಂಡವೋರಣಂಗಟ್ಟಿ ಕುಳಿತು ।
ಸದ ಮದದೊಳುಂಡು ತಾಂಬೂಲಂಗಳಂ ಕೊಂಡು
ಕದನ ಕರ್ಕಶ ಕಿರಾತರು ಮುಂದೆ ನಡೆಗೊಂಡು
ಬೆದಱಿ ಹೋಹೆರಳೆಗಳನಿಸುವ ಶಬರಿಯರ ನೋಡುತ್ತ ಭೂಪಾಲ ಬರಲು ॥೩೪॥

ಹುಲಿಯ ಬೇಂಟೆಯನಾಡಿ ತಿರುಗಿ ನಡೆವಾಗ ಮುಂ
ದೆರೆಲೆ ಗರ್ಜಿಸಿ ಕೆದಱಿ ಧೀಂಕಿಟ್ಟು ಮುಟ್ಟಿದತಿ
ಬಲಸಿಂಹಮಂ ಕಂಡು ಕಣ್ಮುಚ್ಚಿ ನೆಱೆ ತಗ್ಗಿ ಮುಗ್ಗಿ ತಲೆಗುತ್ತಿಕೊಂಡು ।
ನೆಲಕಾನೆ ಸುಂಡಿಲಂ ಹರಹಿ ಮೊಳಕಾಲಿಕ್ಕಿ
ಬಲವಳಿದು ಘೀಳಿಟ್ಟು ಬೆನ್ನುಡುಗಿ ಗೂಡುಗೊಂ
ಡುಲುಕಲಮ್ಮದೆ ಸುಕ್ಕಿ ಸುಗಿದು ಬೆಂಬಿದ್ದುವಾನೆಗಳು ಬಳಿಕೇವೊಗಳ್ವೆನು ॥೩೫॥

ಮಡುವಿಡುವ ಮದಸಮುದ್ರದ ಸೊಗಡ ಸೊನೆಗೆ ತಲೆ
ಗೊಡಹಿ ಕೊಕ್ಕರಿಸಿ ಪೊಱಮಟ್ಟೋಲಗಂಗೊಟ್ಟು
ವಡಬವಹ್ನಿಗಳೊ ಎಂದೆನಿಪ ಕೆಂಗಣ್ಣಿನಿಂದುದಿರ್ವ ತೊಂಗಲ್ಗಿಡಗಳ ।
ಹೊಡೆಯೆ ಹೊತ್ತಿದ ದಂತವಮಂ ಕರ್ಣತಾಳದಿಂ
ಕೊಡಹೆ ಭುಗಿಲೆಂದುರಿಯೆ ನೊಂದು ಸ್ವೈರಿಸದಡವಿ
ವಿಡಿದೋಡುತಿಹ ಗಜಂ ದಾವಾಗ್ನಿ ತನುವೊತ್ತು ಬೀದಿವರಿವಂತಿರ್ದುದು ॥೩೬॥

ಬಿಡೆ ನಿಲುಕಿ ಹಬ್ಬಿದೊಡಲೆತ್ತಿದ ಕೊರಳ್ ಕೆದಱಿ
ಜಡಿವ ಕೇಸರ ನಟ್ಟ ಕಿವಿ ಬಿಟ್ಟ ಕಣ್ ನೆಗೆದ
ಕುಡಿವಾಲ ಬಾಗಿ ಮುಱಿದವುಡಿ ಕೆಡಹುವ ಮೊಗಂ ಬಿಗಿದು ಬಾದಣಗಂಡವ ।
ಒಡೆಕಾಱಿ ಹೀಱಿ ಹಿಂಡುವ ಕಂಠ ಮೊರೆವ ಮೂ
ಗಡಸಿ ಹೊಡೆದೆತ್ತಿ ತೋಡುವ ಮುಂದಣಡಿ ಕಯ್ಯ
ಕಡೆಯನೌಕಿದ ಹಿಂದಣಡಿ ಮೆಱೆಯೆ ಕರಿಗಳಂ ಕೆಡಹಿದುವು ಸಿಂಹಂಗಳು ॥೩೭॥

ಮಿಕ್ಕು ಪಚ್ಚಳಕೆತ್ತಿ ಮೆಯ್ ನಿಮಿರಿ ಗುಱುಗುಱಿಸಿ
ಹೊಕ್ಕುಳಲ್ಲಾಡೆ ಮುಂಬದನ ನಸೆಗೊಸರ್ವ ನೊರೆ
ನಕ್ಕಿ ವಾಸಿಸಿ ಲೋಳೆ ಬೀಳೆ ಮೂಗಂ ಸುಗಿದು ನೆಗಪಿ ಪಂಚಕಕೆ ಮುಸುಡ।
ಇಕ್ಕಿ ಕಿವಿಯೆಳಲೆ ಕಣ್ಣರೆಮುಚ್ಚಿ ನೆಗೆದು ಮೇ
ಲಿಕ್ಕಿ ದನಿಗೊಡುತ ಲಂಘಿಸುತ ಕಾಡೆಮ್ಮೆಗಳ
ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕಿ ಮಗುಳ್ವಾಲಿಸಿದರು ॥೩೮॥

ದಿಟ್ಟಿಸುವ ಕಣ್ ನಟ್ಟ ಕಿವಿ ಮರಳ್ದ ಮುಸುಡು ಸುಱು
ಕಿಟ್ಟು ಗುಱುಗುಱಿಪ ಮೂಗಲುಗದಂಗಂ ನೆಲನ
ತಟ್ಟಿ ಬೆರಟುವ ಪದಂ ನೆಗೆದಳ್ಳೆ ಬೆಂಗಡರ್ದ ಬಾಲದಿಂ ರೌದ್ರ ಕೋಪ।
ಹುಟ್ಟಿ ಕೋಡಂ ಜಡಿದು ತನುವ ಝಾಡಿಸಿ ಹಿಂಡ
ಬಿಟ್ಟು ಱೌಂಕಿಟ್ಟು ಹರಿಯಿತ್ತು ಕಾನನದೊಳಱೆ
ಯಟ್ಟಿತ್ತು ವನದುರ್ಗಿಯೆಡೆಗೆ ಹರಿಯಿಡುವ ಮಹಿಷಾಸುರನನದು ಪೋಲ್ತುದು ॥೩೯॥

ಕಡಗಿ ಕೈಕೊಂಡಟ್ಟಿ ಮುಟ್ಟಬರೆ ತವ್ಮೊಳೊ
ಗ್ಗೊಡೆದು ಬಿಲುವ್ರೋಯ್ದು ತೆಗೆನೆಱೆದು ಕೂಕಿಱಿದು ಕೆಡೆ
ಕೆಡೆಯೆನುತ್ತೆಣ್ದೆಸೆಗಳಿಂದೆಚ್ಚ ಶಬರಿಯರ ಕೂರ್ಗಣೆಗಳೊಡಲನೊಡೆದು ।
ಅಡಸಿ ತುಱುಗಿರೆ ಹೆಚ್ಚಿದೆಯ್ಯ್ಮೃಗದಂತಿರ್ದ
ನಿಡುಗೋಣನಂ ನೋಡುತವನಿಪಂ ಬರೆ ಮುಂದ
ಣಡವಿಯೊಳು ಸಾಳುವಂಗಳನು ಖಗವೇಂಟೆಗಾ ಲುಬ್ಧಕರು ಬಿಡುತಿರ್ದರು ॥೪೦॥

ಮಱೆವಿಡಿದು ಶಬರ ನಿಕರಂ ಕೊರಳ ಗಹಗಹಿಕೆ
ವೊಱೆಯೆ ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ
ತುಱುವೆಗಣ್ಣಂ ಹಂಸೆ ರಾಗಧರನೆಂಬ ಪಕ್ಷಿಗಳ ದನಿಯಿಂ ಕರೆಯಲು ।
ತುಱುಗಿ ನಭದೊಳು ಖಗಾನೀಕ ಮಂಡಳಿಸಲಿ
ಟ್ಟೊಱಲ ಕೆಡೆದುಳಿದೋಡುತಿಪ್ಪ ಪಕ್ಷಿಗಳಿಗಾ
ರ್ದ್ದಿಱಿಕೆಗಳ ನೀವಿ ಸರಪಳಿ ಬಂದಿ ಟೊಪ್ಪರವನುಗಿಯೆ ಬಳಿಕೇಗೆಯ್ದುವು ॥೪೧॥

ಕಾಗೆ ನವಿಲಬ್ಬಾಯ ಗುಬ್ಬಿ ಪಾರಿವ ಕೊಂಚೆ
ಗೂಗೆ ಕುಕಿಲಱುವ ಗಂಟಿಗ ಕಿರುಬ ಗೊರವ ಗಿಳಿ
ಜಾಗರಿಗ ಹರಡೆ ಹಸುಬಂ ಹಿಸುಣ ಹೆಬ್ಬಕ್ಕಿ ಗಿಡಗ ಹೊಱಸೂರೆವ ಶಕುನಿ ।
ಮೂಗನುರಿಗಣ್ಣ ಬೆಳ್ಳಕ್ಕಿ ವಲಿಯಂ ಚಿಟ್ಟಿ
ಜೂಗ ಹದ್ದೆಂಬಿವಂ ಸಾಳುವಂಗಳು ನೆಗೆದು
ತಾಗಿ ಹೊಡೆಹೊಡೆದಿಳೆಯೊಳಿಕ್ಕಿದಡೆ ಹಕ್ಕಿಗಳ ಮಳೆಗಱೆಯುವಂತಾದುದು ॥೪೨॥

ಸಾಳುವನ ಬೇಂಟೆಯಂ ನೋಡಿ ನಡೆವಾಗಲಱ
ಗೂಳಿ ಹೆಗ್ಗೂಳಿ ಕಿಱುಗೂಳಿಯಿಂ ಮೂತೆಱದ
ಗಾಳಂಗಳಿಂ ಗೋರಿವಲೆಗಳಿಂ ಬಲೆಗಳಿಂ ಹಲಕೆಲವು ಜಾಲಂಗಳಿಂ।
ನೀಳದಾರಂ ಬಿಗಿದ ಸಿಲುಕಂಬಿನಿಂ ಸೊಗಡು
ಗೂಳುಗಳ ಮುದ್ದುಗಳ ಮಸಕದಿಂದಂ ನದಿ ನ
ದಾಳಿಯೊಳು ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು ॥೪೩॥

ಕೊಱೆವ ಸೀಗುಡಿಗೆಂಡೆ ಕುಚ್ಚು ಹಣ್ಣಲು ಬಸಿಗ
ಗಿಱಲು ಬಂಗಡೆ ಹಾವು ಜಳಬಾಳೆ ಕುಕಿಲು ಹೆ
ಗ್ಗಱ ಗಣೆ ಮಣಿಗಣ್ಣ ತೂತು ತೆಂತಲು ಸಿಸಿಲು ಬೊಂಪು ಸವಿವಾಯ ಗೊದಳೆ ।
ಗಱಮೆಱೆವ ಕಾಗೆಂಡೆಯುಯ್ಯರಗ ದೊಂಡಿ ಕೆಂ
ಗಱ ಹರಳು ಹಾರುವಂ ಹಿರಿಯ ಷಡುಸಕ್ಕರಿಗ
ನಿಱಲು ಹಂದೆಗನಾನೆ ವೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ವರು ॥೪೪॥

ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು ಬಿಳಿಯಾನೆ
ಮಳಲ ಕೂಡಿಲು ಚಕ್ರಗೆಂಡೆಯಾವೆಗ ನವಿಲು
ಯಿಳಿಯಂಬು ಕುಱುದಲೆಗ ಹೆವ್ಮಾನು ಕೆವ್ಮಾನು ಮುಕ್ಕಣ್ಣನಾರೆ ನಿಱಿಲು।
ಕುಳಿಚು ಸೂಜಿಗ ನಗಲು ಹೆಲ್ಲರಂ ಬಂಕುರುಂ
ಹಳಲೆ ಕಪ್ಪೆಗಳೊಱಲೆ ಬೋಟೆ ಗಿಱಿಲುಗಳೆಂಬ
ಹೊಳೆವಳಿಯ ಮಿಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು ॥೪೫॥

ಕೆದಱುವೀಲಿಯ ಚಲ್ಲಣದ ಸೊಕ್ಕಿದೆಕ್ಕಲನ
ತಿದಿಯೆಕ್ಕವಡದ ಗರುಡನ ಗಱಿಯ ತಲೆವಱಿಯ
ಮದಗಜದ ಮುತ್ತಿನೇಕಾವಳಿಯ ಹೊಮ್ಮಿಗಾಜಿನದ ಱವಕೆಯ ದಂತದ।
ಹದವಿಲ್ಲ ಬೆನ್ನ ಬತ್ತಳಿಕೆಗಳ ಕೆಲದ ಚವ
ರದ ಗೊಂಡೆಯದೊಳೆಸೆವ ಜವ್ವನದ ಶಬರಿಯರು
ಪದೆದು ಕುಸಿದಡಸಿ ತೋಹ ಗಳಲ್ಲಿ ಹರಿವ ಹುಲ್ಲೆಗಳನೆಸುತಿರ್ದರಂದು ॥೪೬॥

ಮೃತ್ಯುವಗಿದುಳಿದಂತೆ ಬೇಡರಟ್ಟುಳಿಗಳೊಳು
ಕುತ್ತುಱೊಳಗಡಗಿರ್ದು ಬಳಿಕೆದ್ದು ತಮತಮ್ಮ
ಹೆತ್ತತಾಯ್ಗಳನಱಸುತತ್ತಲತ್ತಲು ಪರಿದು ಬಾಯ್ಬಿಡುವ ಮೃಗಶಿಶುಗಳ।
ಸುತ್ತಿ ಕಿಱುಮಱಿಗಾಣದೊಱಲಿ ಕೆಕ್ಕಳಿಸಿ ಕೊರ
ಳೆತ್ತಿ ಹೂಂಕರಿಸಿ ಗಿಡುಗಿಡುಗಳೊಳು ಹೊಕ್ಕು ಬಳ
ಲತ್ತೊಱಲುತಿರ್ಪ ಬಾಣತಿ ಮೃಗವ ನೋಡುತ್ತ ಬರುತಿರ್ದನವನೀಶನು ॥೪೭॥

ಕಂಟಣಿಸಿದಾ ಖಗವ ನೀ ಮೃಗವನೆಂತಕ್ಕೆ
ಬೇಂಟೆಯಾಡಿದನೆಂದು ಪೊಗಳಲೇವುದು ಗೋರಿ
ವೇಂಟೆಪಳಹರವೇಂಟೆ ಪಟವೇಂಟೆ ವಿದ್ಯಾಧರರ ಬೇಂಟೆ ಚಿತ್ರವೇಂಟೆ।
ಅಂಟುಜಲವೇಂಟೆ ತೋಹಿನ ಬೇಂಟೆ ಘನ ಸೋಹು
ವೇಂಟೆಗಳೆನಿಪ್ಪ ಹೆಸರಂ ಹೊತ್ತು ಮೆಱೆವುತಿ
ಪ್ಪೆಂಟೆ ತೆಱದುಚಿತವೇಂಟೆಯನಾಡಿದಂ ಹರಿಶ್ಚಂದ್ರವಸುಧಾಧೀಶನು ॥೪೮॥

ಗಣ್ಯತರ ಗೌತಮಾರಣ್ಯದಲಿ ದಂಡಕಾ
ರಣ್ಯದಲಿ ಕ್ರೌಂಚಕಾರಣ್ಯದಲಿ ಭಯಗುಹಾ
ರಣ್ಯದಲಿ ನುತದಶಾರಣ್ಯದಲಿ ಘೋರ ಕಂಠೀರವಾರಣ್ಯದಲ್ಲಿ।
ಪುಣ್ಯವಿಡಿದನಿಮಿಷಾರಣ್ಯದಲಿ ಮಾನುಷಾ
ರಣ್ಯದಲಿ ಬೇಂಟೆಯಾಡುತ್ತ ನಡೆತಂದಖಿಳ
ಪುಣ್ಯವೆಂದೆನಿಪ ಕಿಷ್ಕಿಂಧಾಚಳಕ್ಕೆ ಬಂದನು ಹರಿಶ್ಚಂದ್ರನೃಪನು ॥೪೯॥

ಲೀಲೆಯಿಂ ಬಂದು ಕಾಣಿಕೆಗುಡುವ ಕಿಷ್ಕಿಂಧ
ಶೈಲದ ಮಹಾಮರ್ಕಟಾಧಿಪರ ನೋಡುತ್ತ
ಭೂಲೋಲನಿರಲತ್ತ ವಿಪಿನಕ್ಕೆ ಬಂದ ಹರಿದಖಿಳ ಬೇಂಟೆಯ ಬೇಡರು ।
ರಾಲಿಸದೆ ಹೊಕ್ಕು ದೀಹದ ಹಲವು ಶರಭ ಶಾ
ರ್ದೂಲ ಸಿಂಹಂಗಳಂ ಹಾಸಮಂ ತಿವಿದು ಮೃಗ
ಜಾಲಮಂ ತೋಱು ತಲೆದಡವಿ ಬಿಟ್ಟರು ಬಿಟ್ಟಡಟ್ಟಿ ಬಳಿಕೇಗೆಯ್ದುವು ॥ ೫೦ ॥

ಉಕ್ಕಿನೆರಳೆಯನಾದೊಡಂ ಮುಱಿವ ಹುಲಿಗಬ್ಬ
ವಿಕ್ಕತೊಡಗಿದವಲ್ಲಿಯೆರಳೆಗಗ್ಗದ ಸಿಡಿಲ
ಸೆಕ್ಕೆಯಿಂ ಸವೆದಾನೆಗಳನಾದೊಡಂ ಸೀಳ್ವ ಸಿಂಹವಲ್ಲಿಪ್ಪಾನೆಗೆ ।
ತೆಕ್ಕತೊಡಗಿದುವು ಕಡೆಗಾಲದಗ್ನಿಯಲಿ ಕರು
ವಿಕ್ಕಿದುರಿಗೇಸರಿಯನಾದೊಡಂ ಸೀಳ್ವದಟು
ಮಿಕ್ಕ ಶರಭಂಗಳಾ ಕೇಸರಿಗೆ ನಡುಗತೊಡಗಿದವು ಬೇಡರು ಬೆದಱಲು ॥ ೫೧ ॥

ಉರಿ ಶೈತ್ಯವಾದಂತೆ ವಿಷವಮೃತವಾದಂತೆ
ತರಣಿ ತಂಪಾದಂತೆ ನೃಪನ ಬೇಂಟೆಯ ಬನದ
ದುರುವಣೆಯನೊದವಿಸುವ ಹರಿವೈರಿ ಕರಿವೈರಿ ಹರಿಣವೈರಿಗಳು ಮೃಗವ ।
ಹರಿದಟ್ಟಿ ಪಿಡಿದಡಸಿ ವೋದಿ ಮುಱಿಯದೆ ನಿಂದು
ಮರವಟ್ಟ ಕಾರಣವನಱುಪಬೇಕೆಂದೆಯ್ದಿ
ಸರಸಿರುಹ ಸಖಕುಲ ಹರಿಶ್ಚಂದ್ರಭೂಪತಿಗೆ ಪೇಳ್ದರಂತಾ ಬೇಡರು ॥ ೫೨ ॥

ಚಿತ್ರತರವಾದುದಿಂದೀ ಕಾನನಂ ಮಹಾ
ಕ್ಷೇತ್ರದೊಳಗಣದಾಗದಿರದೆನುತ ಬರೆ ಮುಂದೆ
ಚಿತ್ರಕಾಯಾಜಿನದ ಸುಲಿಪಲ್ಲ ಭಸಿತದ ಜಟಾಭರದ ಮುನಿನಾಥನು ।
ಮಿತ್ರರೊಡಗೂಡಿ ಮಿತ್ರಪ್ರಕಾಶಂ ಲೋಕ
ಮಿತ್ರನಾತ್ಮಪವಿತ್ರ ಚರಿತ ವಾಕ್ಯಂ ಮರುತ
ಮಿತ್ರಕಾರ್ಯದ ಪರಿಕರಂಗಳಂ ಸವಕಟ್ಟುತಿರಲು ಭೂಪತಿ ಕಂಡನು ॥ ೫೩ ॥

ನಾರಸೀರೆಯನೊಗೆವ ಜಡೆಗೆ ಸುಂಕಿಕ್ಕುವಾ
ದಾರಮಂ ಬಿಗಿವಕ್ಷಮಾಲೆಯಂ ಸರಗೆಯ್ವು
ಪೌರಾಣಮಂ ಕಲವ ಜಪಸಮಾಧಿಯೊಳಿಪ್ಪ ಮೌಂಜಿಮೇಖಲೆಗಟ್ಟುವ ।
ಸಾರಶಾಸ್ತ್ರವನಱುವ ಕೃಷ್ಣಾಜಿನದ ಕಡೆಗೆ
ದಾರವಿಕ್ಕುವ ಕಂದಮೂಲ ಫಲಮಂ ತಪ್ಪ
ಚಾರು ಮುನಿಪುತ್ರರ್ಗೆ ವಂದಿಸುತ ಬಂದಿದಿರೊಳೊಂದು ಕೊಳನಂ ಕಂಡನು ॥ ೫೪ ॥

ಬಳಸಿದೆಳಲತೆಯ ತಂಪಿಂಗೆ ಕಂಪಿಂಗೆ ಕೆಂ
ದಳಿರಿಂಗೆ ಕರ್ಣಿಕೆಗಳೆಸೆವ ಕುಸುಮಕೆ ನವ್ಯ
ಫಳಕೆ ತುಂಬಿಗೆ ಗಿಳಿಗೆ ಕೋಗಿಲೆಗೆ ಕುಣಿವ ನವಿಲಿಂಗೆ ಹಂಸೆಯ ನಿಕರಕೆ।
ಪುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾ
ವಳಿಗೆ ಬೆಱಗಾಗುತ್ತ ನಡೆತರುತ್ತಿರರೆ ಕ
ಣ್ಣಳವಿಯಲಿ ಕಂಡನಪ್ರತಿಮ ಯತಿರಾಯ ಪಶುಪತಿ ಶಿವನನು ತಪ್ರಭೆಯನು ॥೫೫॥

ಕಡುಹಿಮಂ ಕಡುಬಿಸಿಲು ಕಡಗಾಳಿಯಿಲ್ಲ ಮರ
ನಡಿಯ ನೆಳಲತ್ತಿತ್ತಲೊಲೆಯದನವರತ ಬೆಳೆ
ಯುಡುಗವೆಲ್ಲಾ ಭೂಜಲತೆಯೋಷಧಿಗಳು ಫಲವಿಡಿದೊಲೆದು ಜಡಿಯುತಿಹವು
ಬಿಡದೆ ಹುಲಿ ಹುಲ್ಲೆ ಹರಿ ಕರಿಯೆರಳೆ ಸೀಳ್ನಾಯ್ಗ
ಳೊಡನೆ ಮುಂಗುರಿ ಮೂಷಕಂ ನವಿಲು ನಾಗಂಗ
ಳಡಸಿ ನಿಜವೈರಮಂ ಮಱೆದಿಪ್ಪುವೆನೆ ಮುನಿಯ ಮಹಿಮೆಯಂ ಪೊಗಳ್ವರಾರು॥೫೬॥

ಈ ಮುನಿಯ ಚಾರಿತ್ರದೊಳು ಗಂಗೆ ಹುಟ್ಟದಿರ
ಲೀ ಮುನಿಯ ಶಾಂತಿಯೊಳು ಚಂದ್ರಮಂ ಜನಿಸದಿರ
ನೀ ಮುನಿಯ ವದನದೆ ದಯಾವನಧಿ ಸುರಕುಜಂ ಸುರಧೇನು ಪೊಣ್ಮದಿರವು।
ಈ ಮುನಿಯ ಸವಿನುಡಿಯಿಂದಮೃತಪೊಗೆಯದಿರ
ದೀ ಮುನಿಯ ಸುಳುಹಿನೊಳು ತಂಗಾಳಿ ಜನಿಸದಿರ
ದೀ ಮುನೀಂದ್ರಂ ಮುನಿಯ ವೇಷದೀಶ್ವರನಾಗದಿರನೆನುತ ನಡೆತಂದನು ॥ ೫೭ ॥

ಸವಿದು ನೋಡುತ್ತಿರಲು ಕಣ್ಗೆ ಪೊಣ್ಮುವ ಪುಳಕ
ಬೆವರೊಗಲುವುಕ್ಕುವಾನಂದಾಶ್ರು ತಂಬೆಲರು
ಕವಿವ ಪರಿಣಾಮವಂ ಕಂಡು ತನ್ನೊಳಗೆ ತಾನೇ ಮೆಚ್ಚಿ ಬೆಱಗಾಗುತ।
ಇವರ ಕಂಡೆನಗೀ ಸುಖಂ ಪುಟ್ಟಲೇಕಿವರು
ಶಿವನ ಸಮ್ಮುಖರಾಗದಿರರು ನೋಡುವೆನೆಂದು
ರವಿಕುಲಲಲಾಮಂ ಹರಿಶ್ಚಂದ್ರನಾ ಮುನೀಶ್ವರನೆಡೆಗೆ ಬರುತಿರ್ದನು ॥ ೫೮ ॥

ಹಿಂದದಾನಂದದಿಂ ಬಂದು ವಂದಿಸಿ ಮುಂದೆ
ನಿಂದೆಂದಿನಂದದಿಂದಿಂದು ಮುದದಿಂದ ಮೃಗ
ವೃಂದದೊಳಗೊಂದುವಂ ಕೊಂದಿಕ್ಕದೆಮ್ಮ ಮೃಗವಿರ್ದುದಕೆ ಕಾರಣವನು।
ತಂದೆ ಕುಂದದೆ ಕರುಣಿಸೆಂದು ವಂದಿಸಿ ಭೂಪ
ಕಂದರ್ಪನಿನಕುಲ ಹರಿಶ್ಚಂದ್ರ ಭೂನಾಥ
ನೆಂದಡಾ ಮುನಿನಾಥನಂದು ಮಾಱುತ್ತರಂಗುಡಲೆಂದು ತಱಸಂದನು ॥ ೫೯ ॥

ನೆರದ ವೇದಂಗಳುಗ್ಗಡವುಪನಿಷತ್ತುಗಳ
ಗರವಟಿಗೆಯಣಿಮಾದಿಗಳ ಬೊಬ್ಬೆ ಧರ್ಮದ
ಬ್ಬರ ಘನಜ್ಞಾನ ಪ್ರಭಾದೀಪ್ತಿಗಳು ಹರಿಬ್ರಹ್ಮಾದಿ ಸುರರ ಕಾಹು ।
ಪುರುಷಾರ್ಥ ನಾಲ್ಕಱೊಳು ಸಲುಗೆ ಪುಣ್ಯದ ಪುಂಜ
ಸಿರಿಸರಸ್ವತಿಯರೆಡೆಯಾಟವೆಸೆದಿರೆ ಜಗ
ದ್ಗುರು ವಿರೂಪಾಕ್ಷನಿಲ್ಲಿಯೆ ಸುಖವೊಳಿಪ್ಪ ಪಂಪಾಕ್ಷೇತ್ರವಿದೆಯೆಂದನು ॥ ೬೦ ॥

ಪುದಿದ ಭಕ್ತಿ ಜ್ಞಾನ ವೈರಾಗ್ಯಮುತ್ತಮಾಂ
ಗದ ಮಕುಟದಗ್ರದೊಳು ಹೊಳೆವ ಮಣಿಗಣದಂತೆ
ತುದಿ ತೋಱುತದೆ ನಿಂದು ನಿಲುಕಿ ನಿಟ್ಟಿಸಿ ನೋಡು ನೋಡು ಕಟ್ಟಿದಿರೊಳಿಪ್ಪ ।
ಅದು ಹೇಮಕೂಟ ಮತ್ತದು ಮತಂಗಾದ್ರಿ ಹೋ
ಗದು ಮಾಲ್ಯವಂತವಿಂತವಱ ಮಹಿಮೆಗಳನಾ
ಮದನಹರನೇ ಬಲ್ಲನೆಂದು ತೋಱಿದನು ಭೂನಾಥಂಗೆ ಮುನಿನಾಥನು ॥ ೬೧ ॥

ನಿನಗೆ ಹೇಳುವುದೇನು ದೆಸೆದೆಸೆಯೊಳೊಂದು ಯೋ
ಜನ ಮೂಡ ಕಿನ್ನರೇಶಂ ತೆಂಕ ಜಂಬುಕೇ
ಶನು ಪಡುವ ಸೋಮನಾಥಂ ಬಡಗ ವಾಣಿಭದ್ರಂ ನಾಲ್ಕು ಬಾಗಿಲುಗಳು ।
ಇನಿತೆಡೆಯೊಳಿಡಿದಿಹ ಪ್ರಾಣಿಮಾತ್ರಾಳಿ ನೆ
ಟ್ಟನೆ ಗಣೇಶ್ವರ ರವಕೆ ಯಮದೂತರೊಳಗಾಗಿ
ಮುನಿಯ ಬಾರದು ಗುರುವಿರೂಪಾಕ್ಷನಾಜ್ಞೆ ಕೇಳೆಂದನಾ ಮುನಿನಾಥನು ॥ ೬೨ ॥

ಬಿಡದೊಮ್ಮೆ ಕಂಡ ಜೀವರ ಭವವ್ರಜದ ಬೆಂ
ಬಡಿಗೆ ಪಾತಕದ ತೋಮೆಯ ಕತ್ತಿ ದುಷ್ಕರ್ಮ
ದೆಡೆಗೊರಳ ಕತ್ತರಿ ಸಮಸ್ತ ರೋಗಂಗಳೆಡೆಗೊಡ್ಡಿದಲಗಜ್ಞಾನದ।
ನಡುದಲೆಯ ಗರಗಸಂ ಮಲೆವ ಮಾಯೆಯ ಬಸುಱ
ನೆಡೆಹೊಯ್ವ ಶೂಲವಿನ್ನುಳಿದ ದುರಿತವನರುಹಿ
ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯನವನೀಶ ನೋಡೆಂದನು ॥ ೬೩ ॥

ನುಡಿದೆನ್ನ ಸಂಶಯದ ಸಾಲ ಸವಱಿದೆ ನಿನ್ನ
ಪಡೆದ ಪುಣ್ಯಾಧಿಕನ ಹೆಸರಾವುದಯ್ಯ ನುಡಿ
ನುಡಿಯೆಂದಡೆರಡನೆಯ ಪುರಮಥನಯೆನಿಸುವ ವಸಿಷ್ಠ ಮುನಿಪನ ಮೊಮ್ಮನು ।
ಬಿಡೆ ಪರಾಶರನು ನಾನೆನೆ ಹೆಚ್ಚಿ ಹಿಗ್ಗಿ ನಡೆ
ನಡೆ ತಂದೆ ಮದ್ಗುರುಗಳಡಿಗಳೆಡೆಗೆಂದು ಬಳಿ
ವಿಡಿದು ನಡೆತಂದು ಕಂಡನು ಮುಂದೆ ಮುನಿವರೇಣ್ಯನನವನಿಪವರೇಣ್ಯನು ॥ ೬೪ ॥

ತಿಳಿಗೊಳನ ಬಳಸಿ ನಳನಳಿಸಿ ಬಳೆದೆಳಮಾವು
ಗಳ ತಳದ ಮಲ್ಲಿಕಾಮಂಟಪದ ತಣ್ಣೆಳಲ
ತೆಳುಗಾಳಿಯೊಳು ಪುಣ್ಯವಪ್ಪ ಪುಳಿನ ಸ್ಥಳದ ಮೇಲಶೋಕೆಯ ತರುವಿನ ।
ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿ ಹಿಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿವ ಪಶುಪತಿಯಂತಿರಿರ್ದ ಮುನಿನಾಥ ಕಣ್ಗೆಸೆದಿರ್ದನು ॥ ೭೫ ॥

ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣ
ವ್ರಾತವೇ ಮುನಿಯಾಯ್ತೊ ಮುಕ್ತಿ ಜಡೆವೊತ್ತುದೋ
ಭೂತದಯೆ ವಲ್ಕಲಾಂಚಲವಾಂತುದೋ ಪುಣ್ಯವಳಸಿ ಭಸಿತವನಿಟ್ಟುದೋ ।
ನೂತನ ಶ್ರುತ್ಯರ್ಥ ನುಡಿಗಲಿತುದೋ ಘನ
ಸ್ವಾತಂತ್ರ್ಯವ್ಯಕ್ತಿ ಬೋಧಿಸತೊಡಗಿತೋ ಎಂಬ
ಚಾತುರ್ಯದಿಂದಿರ್ದ ಮುನಿನಾಥನಂ ಕಂಡು ಹರುಷದಿಂ ಭೂನಾಥನು ॥ ೭೬ ॥

ಜ್ಞಾನವಾಚಾರವಾಗಮ ಧರ್ಮತತಿ ನುತ
ಧ್ಯಾನಾದಿ ಮೂರ್ತಿಗಳನೊಳಕೊಂಡು ತೋರುವ ಚಿ
ದಾನಂದ ರೂಪನತ್ಯಧಿಕ ನಿಶ್ಚಿಂತಂ ನಿರಾವರಣ ನಿತ್ಯತೃಪ್ತ ।
ವೋನದಾಸನದ ಮುದ್ರೆಯ ಹಂಗು ಹೊದ್ದದ ಪ
ರಾನಂದ ಮೂರ್ತಿ ನಿಜಗುರುರಾಜಯೆಂದು ಬಿಡ
ದಾನಂದ ವೇಷವೆಡೆಗೊಂಡು ನಡೆತಂದು ಪೊಗಳುತ್ತಿರ್ದ ಭೂನಾಥನು ॥ ೭೭ ॥

ಸುರ ನರೋರಗ ನಮಿತ ಚರಣ ಜಯಜಯ ದಯಾ
ಭರಣ ಜಯಜಯ ಕೃಪಾವರಣ ಜಯಜಯ ಶಾಂತಿ [ಜಯತು।
ಕಿರಣ ಜಯಜಯ ವಿಗತ ಮರಣ ಜಯಜಯ ದುರಿತ ಹರಣ ಜಯ ಜಯತು
ಗುರುವೆ ಕುಲಗುರುವೆ ಘನಗುರುವೆ ಪರಗುರುವೆ ಮ
ದ್ಗುರುವೆ ಸದ್ಗುರುವೆ ಶರಣಾಗು ಶರಣಾಗೆಂದು
ಧರಣಿಪತಿ ಹರಹಿದನು ನಿಜತನುವನಾ ಮುನಿಯ ಚರಣಸರಸಿಜದೆಡೆಯೊಳು ॥ ೭೮ ॥

ಬಗೆವಿಾಱ ಲೋಚನದೊಳೊಗೆವ ಸುಖಜಲ ಮೆಯ್ಯೊ
ಳೊಗೆದ ಪುಳಕಂ ಕಯ್ಯೊಳೊವಗೆ ಕಂಪನ ನುಡಿಯೊ
ಳೊಗೆವ ತೊದಳಮಳ ಕದಪಿನೊಳೊ ಗೆವ ಬೆಮರು ಕಂಠದೊಳೊಗೆವ ಹೊಸ ಗದ್ಗದ।
ಮಿಗೆ ಮೊಗದೊಳೊಗೆವ ನಸುನಗೆ ಘನಮನೋಮತಿಯೊ
ಳೊಗೆವ ಪರವಶವೆರಸಿ ಮೆಱೆವ ಭೂರಮಣನಂ
ಮೊಗವೆತ್ತಿ ಕುಳ್ಳಿರಿಸಿ ಮೆಯ್ದಡವಿ ಬೋಳೈಸಿ ಮುನಿನಾಥನಿಂತೆಂದನು ॥ ೭೯ ॥

ನೀನೆತ್ತಲೀ ವಿಪಿನವೆತ್ತಲೀ ಬನಕೆ ನೀ
ನೇನು ಕಾರಣ ಬಂದೆಯೆಲೆ ಮಗನೆ ಹೇಳೆನಲು
ಭೂನಾಥನೆಂದ ಖಗಮೃಗದ ಕಾಟಕ್ಕೆ ಸೈರಿಸಲಾಱದವನೀಜನಂ ।
ಹಾನಿವೆತ್ತೊಱಲಿ ಮೊಱೆಯಿಡೆ ಕೇಳ್ದು ಬೇಂಟೆಯ ಸು
ಮಾನಕ್ಕೆ ಬಂದೆನೆಂದೆನೆ ತ್ರಿಕಾಲೋಚಿತ
ಜ್ಞಾನಿ ಮುನಿಯಱಿದನರಸನ ಮೇರೆ ಕೌಶಿಕನ ಕಾಟವಡಿಯಿಟ್ಟನವನು ॥ ೭೦ ॥

ವಿಷಮ ವಿಶ್ವಾಮಿತ್ರಮುನಿ ಮುನಿದು ತಪ್ಪಸಾ
ಧಿಸಿದಪ್ಪನಱಿದಿರೆಂದಱಪದೇಶಱಪಿದಡೆ
ಪಿಸುಣತ್ವವಱಪದಿರ್ದಡೆ ನೃಪನ ಕೇಡ ನಾನೋತುಪೇಕ್ಷಿಸಿದಾತನು ।
ಗಸಣಿಯಾಯ್ತೇಗೆಯ್ವೆನೇದು ಮನದೊಳಗೆ ಚಿಂ
ತಿಸಿ ಮನೆಗೆ ಬಂದ ಶಿಷ್ಯನನು ಬೋಧಿಸಲು ಕುಂ
ದೆಸೆಯದಿರದಾಂ ಪೇಳದಂತೆ ಪೇಳ್ದಪೆನೆಂದು ನೆನೆದನಾ ಮುನಿನಾಥನು ॥ ೭೧ ॥

ಎನ್ನನೊಲುವೊಡೆ ಕುಲಾಚಾರಮಂ ಬಿಡದಿರ್ಪ
ಡುನ್ನತಿಕೆ ಬೇಹಡುತ್ತಮ ಕೀರ್ತಿ ಕೆಡದಿಹಡೆ
ನನ್ನಿಯುಳಿವೊಡೆ ಮಗನೆ ಹೋಗದಿರು ಮಱೆದು ವಿಶ್ವಾಮಿತ್ರನಾಶ್ರಮಕ್ಕೆ ।
ಗನ್ನದಿಂ ಮಱಹಿಕ್ಕಿ ಕೊಂಡೊಯ್ದು ಬಳಿಕ ಮುನಿ
ಬನ್ನಬಡಿಸಿಯೆ ಕಾಡಿದಪನಱಿದಿರೆಂದು ಪೇ
ಳ್ದಿನ್ನೊಂದು ಚೋದ್ಯಮಂ ನೋಡು ಬಾಯೆಂದು ತಂದನು ವಿರೂಪಾಕ್ಷನೆಡೆಗೆ॥೭೨॥

ಧರಣಿಪತಿ ಗುರು ವಸಿಷ್ಠಂಗೆ ಕೈಗೊಟ್ಟು ಬರೆ
ಸುರುಚಿರ ಮಹಾತುಂಗಭದ್ರೆಯೊಳಗುಳ್ಳ ಭಾ
ಸುರ ತೀರ್ಥಮಂ ತೋಱಲದಱೊಳು ಸ್ನಾನ ತರ್ಪಣ ಪಿಂಡ ಪಿತೃ ಕೃತ್ಯಮಂ ।
ಪಿರುದು ಸಂತೋಷದಿಂ ಮಾಡುತಿರಲಾಪುರವ
ವಿರಚಿಸಿ ಮಹಾಗುಡಿಯ ತೋರಣವನೆತ್ತಿ ವಿ
ಪ್ರರು ವಿರೂಪಾಕ್ಷ ಪ್ರಸಾದಮಂ ಕೊಟ್ಟು ಹರಸಿದರು ಮಂಗಳ ರವದೊಳು॥ ೭೩ ॥

ಅತ್ರಿ ಭಾರಧ್ವಾಜಗಸ್ತ್ಯಮುನಿ ಸನ್ನಿಭರು
ಮಿತ್ರಪ್ರಕಾಶರುನ್ನತ ಶೈವತೇಜರೀ
ಕ್ಷೇತ್ರದವರೇಯೆಂದಡಹುದು ನಿನ್ನಯ ಕುಲದ ಮೊದಲ ಭಾಸ್ಕರದರ್ತಿಯಿಂ ।
ಧಾತ್ರಿಯೊಳು ರಾಜಕುಲವೆರಸಲು ಪವಿತ್ರರೀ
ಕ್ಷೇತ್ರ ತ್ರಯಾವಾಸವಾಸಿಗಳೆನಲು ಕೇಳ್ದು
ಪಾತ್ರರಹರೇನು ಮಾಡುವರೆನುತ್ತುತ್ಸವಿಸಿ ಬಂದು ಪುರಮಂ ಪೊಕ್ಕನು ॥೭೪॥

ನಿನ್ನಯ ಮನೋರಥವನೇನ ಹವಣಿಸಬಹುದು
ಹನ್ನೊಂದು ತೀರ್ಥವೀ ಮನ್ಮಥ ಸರೋವರದೊ
ಳುನ್ನತ ಮಹಾಸ್ಕಾಂದ ಪೌರಾಣ ಪ್ರೋಕ್ತ ಕಾಶಿಯೊಳು ಮಣಿಕರ್ಣಿಕೆಯೊಳು ।
ಧನ್ಯರಹರಿಲ್ಲಿಯವಗಾಹನಂ ರುದ್ರಪದ
ಸನ್ನಿಧಿಯ ಪಿಂಡ ಗಯೆಗಧಿಕವೆನೆ ಮೂಡಗಿರಿ
ಯನ್ನಡರಿ ನಡೆಯುತ್ತ ತೋಱಿದಂ ವಾಸಿಷ್ಠಮುನಿ ಸರ್ವತೀರ್ಥಗಳನು ॥೭೫॥

ಹರಿ ವಿರಿಂಚಿಗಳು ಇಂದ್ರಾದಿ ದಿಕ್ಪಾಲರೀ
ಗಿರಿಯಲ್ಲಿ ತಪವಿರ್ದರಾ ಹೆಸರ ಲಿಂಗವಾ
ಸರಸಿಗಳು ಸುರನದಿಯು ತಾನೊಲಿದು ನೆಲಸಿದೆಡೆ ಪಾತಾಳಗಂಗೆಯೆಂದು ।
ಸುರಕುಲಂ ಮುನಿಕುಲಂ ಪಂಚಭೂತಂಗಳಿಂ
ಖರಕರಂ ಹಿಮಕರಂ ಯಜಮಾನವೆರಸಿ ಶಂ
ಬರ ಹರನನುರುಪಿದೆಡೆಯಂ ತೋಱಿ ನಮಿಸೆ ಪಂಪಾಂಬಿಕೆಯ ಕಾಣಿಸಿದನು ॥೭೬॥

ವಂದನೆಯ ಮಾಡಿಯೀ ಮೂರ್ತಿ ಮಹಿಷಾಸುರನ
ಕೊಂದಂದವೆನಲು ಮಾರ್ಕಂಡೆಯ ಪುರಾಣದೊಳ
ಗೆಂದುದೀ ರುದ್ರ ಶಕ್ತಿಯ ಶಿರಸ್ಸೆನಲು ಪಾರ್ವತಿಯರಭಿದಾನದಿಂದ ।
ನಿಂದಳೀಯೆಡೆಯಲ್ಲಿ ಕಾಶಿಯ ವಿಶಾಲಾಕ್ಷಿ
ಯೆಂದು ಕಂಚಿಯಲ ಕಾಮಾಕ್ಷಿಯೆಂದೆಂಬ ಪೆಸ
ರಿಂದಲಂಬಿಕೆಯೆಂದು ಪೇಳೆ ನಮಿಸಲು ವಿರೂಪಾಕ್ಷನಂ ಕಾಣಿಸಿದನು ॥೭೭॥

ತ್ರಾಹಿ ಮಾಂ ಜಗದುದಯರಕ್ಷ ಶಿಕ್ಷಾಧ್ಯಕ್ಷ
ತ್ರಾಹಿ ಮಾಂ ಶರಣಜನದಘ ಜ್ವಲತ ಭಾಳಾಕ್ಷ
ತ್ರಾಹಿ ಮಾಂ ಸಕಲ ಧರ್ಮಾಕಾರ ಮಯವೆನಿಪ ಪುಂಗವೇಂದ್ರಾಕ್ಷ ಪಕ್ಷ ।
ತ್ರಾಹಿ ಮಾಂ ಸುರಪ ಶಿಖಿ ಮರುತ ವಂದಿತ ಯಕ್ಷ
ತ್ರಾಹಿ ಮಾಂ ಭಕ್ತಕುಲವಾಂಛಿತದ ಸುರವೃಕ್ಷ
ತ್ರಾಹಿ ಮಾಂ ಶ್ರೀಗುರು ವಿರೂಪಾಕ್ಷ ಶರಣೆನುತ್ತೆಱಗಿದಂ ಭೂನಾಥನು ॥೭೮॥

ನೋಡಿ ಪರಮಾನಂದ ಮೂಡಿ ಸಂತಸದೊಳೋ
ಲಾಡಿ ಪುಳಕಸ್ವೇದ ತೊದಳು ಕಂಪನ ಮಱವೆ
ಗೂಡಿ ಮನದೊಳು ತನುವಿನೆಚ್ಚಱಿಂದುಬ್ಬಿ ಹಾರೈಸಿ ಹರುಷದ ಸುಖದಲಿ ।
ಹಾಡಿ ನಾನಾ ಸ್ನಪನ ಯಕ್ಷ ಕರ್ದಮ ಪುಷ್ಪ
ಗಾಡಿವಡೆಯಲು ಮಹಾರುದ್ರಾಭಿಷೇಚನದ
ಜೋಡಿಯಿಂ ಪಂಪಾಂಬಿಕಾಪತಿಯ ಪೂಜೆಮಾಡಿದ ಹರಿಶ್ಚಂದ್ರನೃಪನು ॥೭೯॥

ಧೂಪಾರತಿಯು ಸಕಲ ವಾದ್ಯ ರವದೊಳು ಮಾಡಿ
ದಾಪೊತ್ತು ಸುರುಚಿರ ಸುಧಾ ನಿವೇದ್ಯವನಿತ್ತು
ಕಾಪಾಲಗೆಸೆವ ಕರ್ಪುರ ವೀಳೆಯಗೊಟ್ಟು ರತ್ನದಾರತಿಯನೆತ್ತಿ।
ಶ್ರೀಪಾರ್ವತೀಪತಿಗೆ ಪ್ರೀತ್ಯರ್ಥವಾಗಿಯಾ
ಭೂಪನಲ್ಲಿಯ ದ್ವಿಜರ ಕರೆದಿಷ್ಟತುಷ್ಟಿಯಂ
ಬೇಪನಿತನಿತ್ತು ಮತ್ತಂ ಮನಂದಣಿಯದಾ ವಿಪ್ರತತಿಗಿಂತೆಂದನು ॥೮೦॥

ಅಂಗ ವಂಗ ಕಳಿಂಗ ದೇಶಂಗಳೊಳು ನಿಮ್ಮ
ಕಂಗೆ ಸೊಗುಸವ ನಾಡ ಬೇಡಿ ನಾನೀವೆನೆನೆ
ತುಂಗಭದ್ರಾತೀರಮಂ ಬಿಟ್ಟು ಭೂಪ ನಾವೆಲ್ಲಿಗಂ ಬಾರೆವೆನಲು।
ಗಂಗೆಯುತ್ತರಿಯ ಕರದ ಗ್ರಾಮ ವಿರೂಪಾಕ್ಷ
ಲಿಂಗ ಭೋಗಕ್ಕೆಂದು ಧಾರೆಶಾಸನವ ನೃಪ
ಪುಂಗವ ಹರಿಶ್ಚಂದ್ರ ರಾಯನೊಲಿದಿತ್ತು ವಿಪ್ರರಿಗೆ ಮತ್ತಿಂತೆಂದನು ॥೮೧॥

ಗುರುವಿರೂಪಾಕ್ಷ ಸನ್ನಿಧಿಯೊಳೆನ್ನಂ ನೀವು
ಹರಸುವುದು ಶಿವ ಪೂಜೆಯಂ ಮಾಡಿಯುಘವ ಸಂ
ಹರಿಸುವುದುಯೆಂದವರ್ಗೆ ಕೈಮುಗಿದು ಸುಖದಿಂ ಪ್ರಸಾದ ಪಾದೋದಕವನು।
ಧರಿಸಿಯಾಲಿಂಗಕ್ಕೆ ಮತ್ತೆ ಮತ್ತೆಱಗಿಯಾ
ಪರಿತುಷ್ಟನಹ ನೃಪಗೆ ಮಂತ್ರಾಕ್ಷತೆಯನಿತ್ತು
ಖರಕರಕುಲದ ರಾಜ ವನಧಿ ವರ್ಧನ ಸುಧಾಕರನನಾ ಘೋಷಿಸಿದರು ॥೮೨॥

ಇಂದಾನು ಕೃತಕೃತ್ಯನಾದೆನೆನ್ನಯ ಜನ್ಮ
ವಿಂದು ಸಾಫಲ್ಯವಾಯ್ತಖಿಳ ಜಗದಳಲುರಿಯ
ನಂದಿಸುವ ಪಾರದಿಯೆ ಸಂಸಾರವಾರುಧಿಯನುತ್ತರಿಪ ಗುರುವಾದವ।
ತಂದು ತೋಱುತ್ತಲಾ ಶ್ರೀಗುರುವಿರೂಪಾಕ್ಷ
ತಂದೆಯಂ ಕಾಣಿಸಿತು ನಾಡಗಾದೆಯ ಬಿಟ್ಟ
ಯಿಂದ ಕಟಕವ ಕಂಡೆನೆಂಬುದೆನಗಾಯ್ತೆನುತ್ತೆಱಗಿದಂ ಭೂನಾಥನು ॥೮೩॥

---

೬

ಕೂಡಿರ್ದ ಬೇಡರಂ ಕೆಡಹಿದಡೆ ಕೋಪಾಗ್ನಿ
ಮೂಡಿ ಬೆನ್ನಟ್ಟುವ ಹರಿಶ್ಚಂದ್ರ ನೃಪನ ಕೊಂ
ಡೋಡಿ ಬಂದಡಗಿತ್ತು ಕೌಶಿಕನ ಬನದೊಳಗೆ ಮಾಯದ ವರಾಹನಂದು ॥ಸೂಚನೆ॥

ಗುರುವಸಿಷ್ಠಂಗೆಱಗಿ ನೇಮವಂ ಪಡೆದಖಿಳ
ಗುರುವಿರೂಪಾಕ್ಷಲಿಂಗವನು ಬೀಳ್ಕೊಂಡು ಭಾ
ಸುರ ವರೂಥವನೇಱಿ ಭೂಪಾಲ ಮಕರಧ್ವಜಂ ನಡೆಯೆ ತಡೆವೇಂಟೆಗೆ ।
ಪರಿಕರದ ಪರಿವಾರವನುವಾಗಿ ವಿಪಿನದೊಳು
ಹರೆದು ನಡೆಯಲ್ಕತ್ತಲಿತ್ತ ಕೌಶಿಕಮುನೀ
ಶ್ವರನೊಂದು ಮಾಯಾವರಾಹನಂ ಮಾಡಿ ಕಳುಹಿದನು ಭೂರಮಣನೆಡೆಗೆ ॥೧॥

ಇಳೆಯೊಡೆಯನಿಂ ಮುಂದೆ ಹರಿದು ಮೃಗದಿಕ್ಕೆಯಂ
ತಿಳಿವ ಹಜ್ಜೆಯನಱಿವ ಬಲೆಯ ಹಸರಿಸುವ ಸೊ
ಪ್ಪುಳನಾಲಿಸುವ ಕುತ್ತುಱಿಂ ಶೋಧಿಸುವ ಸನ್ನೆಗೆಯ್ವ ಸರುಹಂ ಕಟ್ಟುವ ।
ಹೊಳೆಯ ಮೇಯಿಸುವ ತೋಹಂ ಬಿಗಿವ ಕುಳಿಕಪ್ಪ
ನಿಳಿವ ಬೇಗೆಯನಿಡುವ ಬೆಳ್ವಾರ ಬಿಡುವ ಭುಜ
ಬಲ ಪುಳಿಂದರು ಕಂಡರಂದೊಂದು ಸೊಕ್ಕಿದೆಕ್ಕಲನ ನಡು ಕಾನನದಲಿ ॥೨॥

ಹೇರಿಟ್ಟಿಗಳ ಕಳೆದುಕೊಂಡು ಶಬರರ ಮೊತ್ತ
ವಾರಿ ಬೊಬ್ಬಿಱಿದು ಕುಕಿಲಿಱಿದು ತಮತಮಗೆ ನೆಱೆ
ವೀರಮಂ ನುಡಿವವರನಿನ್ನಱಿಯಬಹುದೆಂದು ಜಱೆದು ಪಡೆ ಮುಳಿದೆದ್ದುದು ।
ವಾರುಧಿಯ ಕುಡಿದು ವಡಬನ ಹಿಡಿದು ತಪ್ಪವರ
ಮೇರುವಂ ಕಿತ್ತು ವಾಸುಗಿಯನುಗಿವವರ ಮುಂದೆ
ಯಾರು ನಿಲಬಹುದೆಂಬ ಚತುರಂಗ ಬಲಕಿದಿರುವಾಯ್ದುದು ವರಾಹನಂದು ॥೩॥

ಸಿಡಿಲ ಕಿಡಿಯಂತೆಸೆವ ಕಣ್ಣು ಬ್ರಹ್ಮಾಸ್ತ್ರದೆರ
ಡುಡಿಯನಿಱುಕಿದ ತೆಱದ ದಾಡೆ ವಜ್ರದ ಚಿಪ್ಪ
ನಿಡಿದುವೆನಿಸಿರ್ಪ ಕಿವಿ ಬಲನ ನೇಗಿಲ ಪೊಲ್ವ ತುಂಡ ಮೃತ್ಯುವಿನ ಕಯ್ಯ ।
ನಿಡಿಯ ನಾರಾಚದಗೆಯೆನಿಪ ಮೆಯ್ ರೋಮತತಿ
ಕಡಗಿ ಕಾಲನ ಕೋಣನರರೆ ವಾರಾಹಮುಖ
ವಡೆದಿರದೆನಿಪ್ಪೊಡಲು ಮೆಱೆವ ಸೂಕರನಿರಲು ಕಂಡರಂತಾ ಬೇಡರು ॥೪॥

ಕವಿಕವಿಯೆನುತ್ತ ಬೇಡರು ನಾಯ ಹಾಸಮಂ
ತಿವಿದು ಬಿಲುವೊಯ್ದು ತೆಗೆ ನೆಱೆದೆಂಟು ದೆಸೆಯಿಂದ
ತವತವಗೆ ಹೊಕ್ಕು ಮಿಕ್ಕೆಚ್ಚಡದನಾಲಸದೆ ಲೆಕ್ಕಿಸದೆ ಕೈಕೊಳ್ಳದೆ।
ಬವರಿಸದೆ ಬಗೆಯುದಿರುತಿರೆ ಕಂಡು ಮುಂಗುಡಿಯ
ತವಕಿಗರು ಹೇವರಿಸಿ ಹೊದ್ದಿ ಹೊಡೆ ಕುತ್ತು ಕೊಲು
ತಿವಿಯೆಂದು ಬೆರಸುತಿರೆ ಕಂಡು ಕಿಗ್ಗಣ್ಣಿಕ್ಕಿ ನೋಡಿತ್ತು ನಾಲ್ದೆಸೆಯನು ॥೫॥

ಕೊಬ್ಬಿಡಿದ ಬೆನ್ನ ಭರದಿಂದ ಬೆಟ್ಟವನಡರು
ತೊಬ್ಬುಳಿಯನೊಡೆದು ಪುಡು ಪುಡಿಸಿ ಕುಡುದಾಡೆಯಿಂ
ನಿಬ್ಬರದಿ ಮಸೆದು ಕೊರಡಂ ಹೊಯ್ದು ಮಂದಗತಿಯಿಂ ಸೊಕ್ಕಿ ಮಲೆತು ಕೊಳುತ।
ಅಬ್ಬರವ ಕೇಳಿಯಾಲಿಸುತ ಸೊಪ್ಪಂ ಬೆದಕು
ತಿಬ್ಬಗಿಯು ಮಾಡಿ ತೃಣದಿಂ ಶಕುನಮಂ ನೋಡಿ
ಹೆಬ್ಬಂದಿ ವಿಪಿನದೊಳು ನಿಂದುದಾ ಶಬರರಿಗೆ ಮೃತ್ಯುತಾನೆಂಬಂದದಿ ॥೬॥

ಎಲೆಲೆಲೆಲೆಲೇ ಹಂದಿಯನುವಾದುದುಬುಬುಬೆಂ
ದುಲಿದು ನಾಯ್ಗಳುವೆರಸಿ ಮುಕ್ಕುಱುಕ್ಕಲು ಮೆಲ್ಲ
ನೊರೆದುಬ್ಬಿ ಪುಟನೆಗೆದು ಗಜಱು ಗರ್ಜಿಸಿ ಪುಳಿಂದರ ಮೇಲೆ ಬವರಿದಿರುಗಿ।
ಬಲವಂದು ಹೊಯ್ದು ಬೇಗಕ್ಕೆ ಬಿಱುಮಂದಿ ನಾ
ಳಲ ಹೊಱೆಗಳಂ ಕೊಟ್ಟದಂತೆಲ್ಲರೊಡಲ ಕಳ
ವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸಮಿಗಂ ಕಾಡೊದಱಲು ॥೭॥

ಅಡವಿ ನಡುಗಲು ದೆಸೆಗಳೊಡೆಯೆ ಪುಡಿಪುಡಿಸುತ್ತ
ಲೊಡಸಾರ್ದು ಪಡೆಯು ಕೆಡಹುತ್ತ ಬರೆ ಕೋಪದಿಂ
ಹೊಡಕರಿಸಿ ತಡವಿಡದೆ ಕುಡುದಾಡೆಯಿಂ ಬೇಡವಡೆಯೊಡಲನೀಡಿಱುವುತ।
ಕಡಿವಡೆದ ಕಡಿಗಳೊಳು ಬಿಡದೆ ನಡೆಯುಲು ಕಂಡು
ಕೆಡೆಕೆಡೆಯೆನುತ್ತ ಮೂದಲಿಸಿ ಮರಳಿದೊಡಡಗ
ಕಡಿ ಮಾರಿಗೆಱೆ ನೆತ್ತರಂ ಹೊದೆಸು ಚರ್ಮಮಂ ತೊಡು ಬೇಗ ಬಿಡು ಸರಳನು॥೮॥

ಕುನ್ನಿಗಳ ಕವಿಸು ಬೆನ್ನಡಗನುಱೆ ತಿನಿಸು ಚಲ
ವಿನ್ನು ಹೆಣಗಿಕ್ಕು ನಿನ್ನಳವಿನೊಳು ಹೊಕ್ಕು ತಿವಿ
ಮುನ್ನ ಹಂದಿಯು ಕರುಳ ತಿನು ತಿದಿಯು ಕಳೆ ಕೊರಳ ಕಡಿ ಕಾಲ ಸಂದ ಬಿಡಿಸು।
ಇನ್ನಬರ ಕಾಡಿತ್ತು ಉನ್ನತರ ಮಡುಹಿತ್ತು
ಬನ್ನಬಡಿಸಿದ ಸಿಟ್ಟು ಕಳೆವೆವೆಂದೆನುತ ಸಂ
ಪನ್ನ ಸಾಹಸ ಪುಳಿಂದರು ಜೋಡಿಯಿಂ ಕವಿದು ಹೊಕ್ಕು ಹಂದಿಯ ತಿವಿದರು ॥೯॥

ಅಟ್ಟಿಬರೆ ಹಂದಿ ಕವಡಿಕೆಯ ರಾಸಿಯ ಕಲ್ಲು
ತಟ್ಟಿದಂತಾಗಿ ಚೆಲ್ಲಿದ ಶಬರ ಸಂಕುಲಂ
ಕೆಟ್ಟೋಡಿ ಮಗುಳ್ದು ಮೊಳಕಾಲಿಕ್ಕಿಯುಂಡುಗೊಂಡುಸಿರ ಸಂತೈಸಿಕೊಳುತ।
ಮುಟ್ಟುಗೊಂಡಿರದುರಿಯ ನೊರಜು ಕಾಡುವ ತೆಱದಿ
ನಿಟ್ಟೆಲುವ ಮುಱು ಕೊರಳ ಕೊಱೆ ಬರಿಯನಿಱು ಮಾಣ
ದಿಟ್ಟಿಯಿಂದಿಡುಕುವುದೆನುತ್ತುಲದು ನಾಲ್ದೆಸೆಗೆ ಕವಿದರಂತಾ ಬೇಡರು ॥೧೦॥

ಹಳ್ಳದೊತ್ತಿನ ಹೊದಱ ಹೊಸ ಮೆಳೆಯ ಜೊಪ್ಪದಿಂ
ಘಳ್ಳಿಡುವ ನಾಯಿ ಸುತ್ತಲು ಪರಿಯೆ ಗಾಳಿವಿಡಿ
ದಳ್ಳಂಕಗೊಂಡು ಹೊಗಲ್‌ಬಾರದಿಟ್ಟೆಡೆಯೊಳೆಡಬಲನನಾರೈವುತ।
ಸುಳ್ಳಿದ್ದ ಬಾಲ ಸಿಗುಱೆದ್ದರೋಮಂ ಕೆದಱು
ಮೆಳ್ಳಿಸುವ ಕಣ್ಣು ದಾಡೆಗಳಿಂದ ಕಿಡಿಯುದಿರೆ
ಹಿಳ್ಳೊಡೆದು ಹಿಂದೆ ಮರಳ್ದಿಕ್ಕಲಂ ಬೀದಿವರಿದುದು ಬೇಂಟೆಕಾಱರೊಳಗೆ ॥೧೧॥

ಇಕ್ಕೆಲದ ಕುನ್ನಿಗಳು ಮಿಡುಕಲೀಯದೆ ಮೃಗವ
ಮುಕ್ಕುಱುಕ್ಕಲು ಕೆಲಬಲನ ನೋಡಿ ದಾಡೆಯಿಂ
ಸೊಕ್ಕಿ ನಲಿಯುತ್ತಲುಬ್ಬುತ್ತ ಬರೆ ಶಬರಾಧಿಪರು ಕೆರಳಿ ಬೆಂಬತ್ತುತ।
ಇಕ್ಕಿಕ್ಕು ಕಲ್ಲಲಟ್ಟಿಯಲಱಿಯೊ ಸಬಳದಿಂ
ಹೊಕ್ಕುಮೊನೆಗಾಣಲಱು ದಾಡೆಯಂ ಮುಱಿಯ ಬಡಿ
ಯಿಕ್ಕೆಯಂ ಹೊಗಗುಡದಿರೆಕ್ಕಲನನೆನುತ ಬೊಬ್ಬಿಕ್ಕಿ ಸರಳಂ ಸುರಿದರು ॥೧೨॥

ಕಣ್ಣನಿಱು ಕೇಸರವ ಸುಡು ಬಿಡದೆ ಖಂಡಮಂ
ಸಣ್ಣ ಗಡಿಯಲಿ ನಾಯಿ ಮೂಳೆಯಂ ಮೋದು ನೀಂ
ತಣ್ಣನೆ ತಣಿಯ ತಿನ್ನು ತೊಡೆಯಡಗನೆನುತಲಟ್ಟಿಯ ಕಲಗಳುರವಣಿಸಲು।
ಬಣ್ಣಿಸಲದೇಕೆ ಹರಿ ಕರಿಗಳಿಗೆ ಕೆರಳಿ ಸೌ
ಪರ್ಣನಹಿಕುಲಕೆ ಮುನಿದೆಱಗಿ ಕೊಲುವಂತೆ ಮು
ಕ್ಕಣ್ಣಸಮವೆನಿಪ ವಿಶ್ವಾಮಿತ್ರ ಕಳುಹಿದ ವರಾಹ ಕೊಂದುದು ಪಡೆಯನು ॥೧೩॥

ಬಸುಱು ಬಗಿ ಯುಗಿ ಕರುಳ ಸುಗಿ ಚರ್ಮಮಂ ಕೊರಳ
ಬೆಸುಗೆಯಂ ಬಿಡಿಸೆಲುವ ಮುಱು ಮೂಳೆಯಂ ಮೋದು
ಬಿಸಿನೆತ್ತರಂ ಕುಡಿಯೆನುತ್ತೆ ನಾಲ್ದೆಸೆಗಳಿಂದುಲದೆಸುತ ಮುಕ್ಕುಱುಕ್ಕಿ।
ಅಸಿಯನಣೆದಂಬುಗಳ ಟೊಣೆದುಲದು ಮಱೆದು ಲೆ
ಕ್ಕಿಸದಿಟ್ಟಿಯಂ ಕಡಿದು ಮುಂಗುಡಿಯ ನಾಯ್ಗಳಂ
ಕುಸುರಿದಱಿದಾ ಸಮೂಹವನೆಲ್ಲಮಂ ನಾಲ್ಕುದೆಸೆಗೆ ಸೀಳ್ಪಿಕ್ಕಿತಂದು ॥೧೪॥

ಕಡುಗಿ ಕೆಯ್ಕೊಂಡು ಬೊಬ್ಬಿಟ್ಟುಲವ ಲುಬ್ಧಕರ
ಎಡೆಗೆವುರವಣಿಸಿ ಹರಿದೆಯ್ದಿ ತೊತ್ತಳದುಳಿದು
ಕೆಡಹಿ ಸತ್ವದಿ ಬಂದ ಪಡೆಯ ನೆಱೆತಱಿದು ವೀರರ ಜಱೆದು ಕರುಳ ಹಱಿದು|
ಕಡು ಬಳಲ ಕಣ್ಣು ಕೆಂಪಡರಲುಸುರಿಕ್ಕಿ ಮೊಗ
ಜಡಿದು ಕಟವಾಯೊಸರ್ವ ನೊರೆ ತೇಂಕುವಳ್ಳೆಯಿಂ
ಬಿಡದಂಡುಗೊಂಡು ಮುಸುಡಂ ನೆಗಹಿ ಱೊಪ್ಪವಂ ಮಲಗಿ ಮತ್ತನುವಾದುದು
||೧೫||

ಬಸುಱ ಬಾದಣಕೆ ಬಾಯ್ಬಿಟ್ಟು ದುಱದುಱನೊಗುವ
ಬಿಸಿನೆತ್ತರಂ ಕುಡಿದು ನಡು ಬೆನ್ನ ಮೂಳೆಯಂ
ಸಸಿದು ಕಡಿಕಡಿದಗಿದು ಕರುಳ ಹಿಣಿಲಂ ಹಿಕ್ಕಿ ತಿಂದು ತೊಡೆಯಡಗನವುಡಿ|
ಬೆಸೆದು ದಣ್ಣನೆ ದಣಿದು ತಲೆಯೆತ್ತಿ ಮೂಗರಳು
ತುಸುರಿಕ್ಕುತೊಲೆಯುತ್ತ ಮಲೆಯುತ್ತ ಕುತ್ತುಱಿಂ
ಗೊಸೆದು ಬರಲದಱೊಳಡಗಿರ್ದೊಬ್ಬ ಬೇಡ ನೋಡಿದುದನೇವಣ್ಣಿಸುವೆನು ||೧೬||

ಬಿಟ್ಟ ತಲೆ ಗಿಡುಹಿಡಿದು ಕಳೆದುಡುಗೆ ಕಾಡ ಮುಳು
ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಳಲ್ವ
ಮೊಟ್ಟೆಗೂಳೆಡಹಿ ಕೆಡೆದೊಡೆದ ಮೊಳಕಾಲ್ ತೇಕುವಳ್ಳೆಗಳುವೆರಸೊಱಲುತ|
ಕೆಟ್ಟೋಡುತಿರಲೊರ್ವನವನ ಕಂಡಿದಿರಡ್ಡ
ಗಟ್ಟಿ ಕೇಳಲು ಹುಹುಹು ಹುಲಿಯಲ್ಲ ಹಂದಿಯಱೆ
ಯಟ್ಟಿ ಬರುತಿರ್ದುದೆನೆಯೆಲ್ಲಿತೋಱೆನಲು ನೀವೇ ಅಱಿಸಿಕೊಂಬುದೆಂದ ||೧೭||

ನಡುಗುವವಯವ ಬಿಕ್ಕು ಪಾಱುವೆದೆ ಬಱತ ಬಾಯ್
ಸಿಡಿದರಳ್ವ ನಾಸಾಪುಟಂ ನಟ್ಟ ಕಣ್ಣು ಬೆಮ
ರಿಡುವ ಮೊಗ ಬಿಚ್ಚೆಳಲ್ವ ಮಂಡೆ ನಿಟ್ಟೋಟದಿಂದೋಡುತ್ತಲೆಡಹಿ ಕೆಡೆದು|
ಒಡೆದು ಮೊಣಕ್ಕೈಕಾಲ್ಗಳತಿ ಭಯರಸವನೆಯ್ದೆ
ಯೆಡೆಗೊಂಡ ಚಿತ್ತದಿಂ ಹೊಱಗನಾಲಸದೆ ದುಡ
ದುಡನೋಡಿ ಬರುತಿರ್ಪ ಬೇಡನಾಕಾರವಂ ನೋಡಿದಂ ರೂಥೀಶನು ||೧೮||

ಹೆದಱೆದೆಯ ಬೇಡನಂ ಬೋಳೈಸಿ ನೃಪರೂಪ
ಮದನನಲ್ಲಿಗೆ ತಂದು ನುಡಿಸಿ ಕೇಳಲು ಪೇಳ್ವ
ಕುದಿಹವೇಕದಿದೆನ್ನದೆಲ್ಲಾ ಕಿರಾತ ಸಂಕುಲದ ಗುಱು ನೆಱದುದಿಂದು|
ಹದುಳದಿಂದರಸ ಮನ್ನೆಯ ಗಂಡನಾಗು ಬೇ
ಗದೊಳೆಂದಡೇಂ ಕಾರಣಂ ಪೇಳೆನಲ್ಕೆ ಪೇ
ಳ್ದುದಕೆ ತೆಱಹಿಲ್ಲ ಹೋಗೆಂದಡವನೀಶನವನಂ ಜಱೆದು ಬೆಸಗೊಂಡನು ||೧೯||

ಕಡುಗಲಿ ಹಿರಣ್ಯಾಕ್ಷನೆಂಬ ರಕ್ಕಸನ ಬೆ
ನ್ನಡಗನುಗಿದಂದಿನ ವರಾಹನೋ ಪುರಹರಂ
ಪೊಡೆಯೆ ತೋಳ್ಪಱಿದ ಭೀಕರ ಗಜಾಸುರನೊ ಜಗದಳಲನಾಱುಸುವೆನೆಂದು।
ಕಡುಕೈದು ದುರ್ಗಿ ನಿರ್ಘಾತನಂ ಗೆಯ್ಯೆ ಕೋ
ಡುಡಿದ ಮಹಿಷಾಸುರನೊ ಎಂದೆಂಬ ಸಂದೇಹ
ಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡೆನರಸ ಚಿತ್ತೈಸೆಂದನು ‖೨೦‖

ಕೊಬ್ಬಿಬೆಳೆದ ವರಾಹನಿರಲಾಗದೇ ಕಾಡೊ
ಳಬ್ಬರಿಸಿ ನುಡಿವೆಯದಱಿಂ ಬೇಡವಡೆಗೆ ಬ
ಪ್ಪುಬ್ಬಸವದೇನೊ ನೀನೋಡಿ ಹೋಹುದಕೆ ಕಾರಣವಾವುದೆಲವೊ ಎನಲು।
ಉಬ್ಬಿ ಮುಂಗುಡಿವರಿದು ಕಡುಕೈದ ಶಬರರೊಳ
ಗೊಬ್ಬರುಳಿಯುದ ತೆಱದಿ ಕೊಂದಿಕ್ಕಿ ನಾಯ್ಗಳಂ
ಗಬ್ಬವಿಕ್ಕಿಸಿದ ರಕ್ಕಸವಂದಿ ತಾನೆ ಹೇಳಿತ್ತು ನಾನೇಕೆಂದನು ‖೨೧‖

ಪಡೆಯೆಯ್ದೆ ಮಡಿಯಿತ್ತೆ ಮಡಿಯಿತ್ತು ನಾಯ್ ಕೂಡೆ
ಕೆಡದವೇ ಕೆಡೆದವಾ ಹಂದಿಯಿರ್ದಪುದೆಯುದೆ
ಎಡೆಯೆನಿತು ಸಾರೆ ತೋಱಿಸಿದಪಾ ತೋಱಿದಪೆನೇಳ್ವೆವೇ ನಡೆಯಿಮೆನಲು।
ಕಡುಮುಳಿದು ರಥವನುರವಣಿಸಿ ನೂಂಕುವ ಭೂಮಿ
ಯೊಡೆಯಂಗೆ ಭಾಷೆಯಂ ಕೊಟ್ಟು ನಾನಾ ಬೇಡ
ವಡೆಯೊಡೆಯರೆಯ್ದೆ ಕಂಡರು ಜೊಪ್ಪಮಂ ಮಲಗಿ ದಾಡೆಗಡಿವೆಕ್ಕಲನನು ‖೨೨‖

ಎಲೆ ದೇವ ಶಬರಾರಿಯಿದೆ ನೋಡು ನೋಡು ಮ
ತ್ತೆಲೆ ದೇವ ಮಲೆವ ವೀರರ ಮಾರಿಯಿದೆ ನೋಡು
ಎಲೆ ದೇವ ಕುನ್ನಿಗಳ ಗುನ್ನವಂ ಕೊಂಬ ಸತ್ವ ಸಮರ್ಥ ಮೃತ್ಯು ರೂಪು।
ಎಲೆ ದೇವ ಕತ್ತಲೆಯ ಮೊತ್ತ ಹರಣಂಬಡೆದು
ದೆಲೆ ದೇವ ತರಣಿಕುಲ ನೀನು ಕೊಲುವೆಡೆಗೆ ತಾಂ
ಗೆಲುವೆನೆಂಬೀ ಭರದಿ ಹಂದಿಯಿದೆ ನೋಡೆನುತ್ತಿರ್ದರಂತಾ ಬೇಡರು ‖೨೩‖

ಮುನ್ನ ಬೇಂಟೆಯು ಜೋಕೆಯುಱಿದ ಬೇಡರು ಮಡಿದ
ರುನ್ನತದನಾಯು ಕುನ್ನಿಗಳಲ್ಲಿ ಸೈಗೆಡದು
ವಿನ್ನೇನೆನುತ್ತ ಹೇವರಿಸಿ ಮೂದಲಿಸಿ ತಮ್ಮೊಳಗೆ ಕೈವೊಯ್ದು ಹರಿದು।
ಬೆನ್ನಡಗನಗಿ ಬಸುಱ ಬಗಿ ಕರುಳನುಗಿ ಕೆಡಹು
ತಿನ್ನು ತಿದಿಗಳೆ ಮೂಳೆಯಂ ಮುಱಿಯೆನುತ್ತ ಹೆ
ಗ್ಗುನ್ನಿಗಳ ತಲೆದಡವಿ ಹಾಸಮಂ ತಿವಿದು ಕವಿದರು ಬೇಡರೆಣ್ದೆಸೆಯೊಳು ‖೨೪‖

ಕೂಡೆ ಬೇಡರ ವೊತ್ತವುಲಿದು ಬೊಬ್ಬಿಕ್ಕಲದು
ದಾಡೆಗುಟ್ಟುತ್ತ ಧಿಕ್ಕರಿಸಿ ಕೆಕ್ಕರಿಸುತ್ತ
ಲೋಡುತ್ತ ಘುಡುಘುಡೆಂದುಲಿಯೆ ಬಱಸಿಡಿಲ ಬಳಗಂ ವೊಳಗಿದಂತಾಗಲು।
ಈಡಿಱಿದು ಶಬರ ಸಂಕುಳವ ಸೀಳುತ್ತಲತಿ
ಝಾಡಿಸುತ ಕದಳಿ ವನದೊಳು ಸೂಸಿಗೆಯ ಬಂಡಿ
ಯೋಡಿದಂತಾಗೆ ಮರಳಿತ್ತು ಮಂದಿಯ ಕೆದಱಿ ಹಿಂದೆ ಮಗುಳ್ಪಾಲಿಸುತ್ತ ॥೨೫॥

ಮೃತ್ಯುರೂಪಿನ ಹಂದಿ ಕಾನನದೊಳೊಕ್ಕಲಿ
ಕ್ಕಿತ್ತು ನೆಱೆಸುತ್ತಿ ಬೆಂಬತ್ತಿ ತಲೆಯೆತ್ತಿ ಮನ
ವೆತ್ತಿಯುಲಿಯುತ್ತ ತಿರುಗುತ್ತ ಹರಿಯುತ್ತ ಬೆದಱುತ್ತೆಯ್ದೆ ಬಲವೆಲ್ಲವ।
ಒತ್ತಿ ಸೀಳಿತ್ತು ಕೆರಳಿತ್ತು ಮುರಿಯಿತ್ತು ಹರಿ
ಯಿತ್ತು ಕೊಱೆಯಿತ್ತು ಕುಱುಕಿತ್ತು ದಣಿಯಿತ್ತು ನೋ
ಡಿತ್ತು ಕತ್ತಲೆಯಿನನ ನೋಡುವಂತಾ ಗುಣೋತ್ತಮನಂ ಬಳೋತ್ತಮನನು ॥೨೬॥

ಮಸೆವ ದಾಡೆಯ ಕುಡಿಗಳಿಂದ ಕಿಡಿ ಸುರಿಯೆ ಘೂ
ರ್ಮಿಸುವ ಮೂಗಿಂದ ಕರ್ಬೊಗೆ ನೆಗೆಯೆ ಮುನಿದು ನಿ
ಟ್ಟಿಸುವ ಕೆಂಗಣ್ಣ ಕಡೆಯಿಂದ ದಳ್ಳುರಿ ಸೂಸೆ ಬಲಿದ ಕೊರಳೊಲೆದ ಮುಸುಡು।
ಕುಸಿದ ತಲೆ ನೆಗೆದ ಬೆನ್ ನಟ್ಟ ರೋಮಾಳಿ ಮಿ
ಳ್ಳಿಸುವ ಬಾಲಂ ರೌದ್ರಕೋಪಮಂ ಬೀಱೆ ಗ
ರ್ಜಿಸಿ ಬೀದಿವರಿದು ತೊತ್ತಳದುಳಿದು ಕೊಂದು ಕೂಗಡಿಸಿತ್ತು ಲುಬ್ಧಕರನು ॥೨೭॥

ಇದ್ದ ಬೇಡರನೆಯ್ದೆ ಕೆಡಹಿದಡೆ ರಥದ ಮೇ
ಲಿದ್ದು ಕೋಪಾಟೋಪದಿಂದ ಕರತಳವ ಮಾ
ಱಿದ್ದಿ ಕೋದಂಡಮಂ ಸೆಳೆದು ಶರಮೂಡಿಗೆಯ ಮಡಲಱಿದು ಕೈಹೊಡೆಯನು।
ತಿದ್ದಿ ನಾರಿಯ ನೀವಿ ಮಿಡಿದು ಬಾಗಿದ ಕೊಪ್ಪಿ
ನಿದ್ದೆಸೆಯನಾರ್ಕೈದು ನೆಱೆ ಮೃತ್ಯು ದೇವತೆಗೆ
ಬಿದ್ದನಿಕ್ಕುವೆನೆಂದು ಭೂವಲ್ಲಭಂ ನುಡಿಯೆ ದಿಗುಪಾಲರಳವಳಿದರು ॥೨೮।

ಎಡೆಯಾದ ನೀಡಡಿ ಶರೀರದೊಡನತಿಬಾಗು
ವಡೆದೆದದ ಮೆಯ್ ನೆಗೆದ ಬಲದಕಟಿನಾರಿಯಂ
ತುಡುಕಿ ಕರ್ಣದ ಕಡೆಗೆ ಸೆಳೆದ ಕೈತುದಿವೆರಳು ಕೂರ್ಗಣೆಯ ಮೊನೆಯ ಮೇಲೆ।
ನಡೆದು ಗುಱಿಯಂ ಹೊತ್ತು ಕಡೆಗಣ್ಣ ಕೆಂಪೆಸೆಯೆ
ಬಿಡೆ ದೃಷ್ಟಿಮುಷ್ಟಿ ಶರ ಸಂಧಾನವನುವಾಗೆ
ಕೆಡೆಕೆಡೆಯೆನುತ್ತೆ ಕೂಕಿಱಿದೆಚ್ಚನಬ್ಜುಜ ಸಖ ಕುಲ ವನಧಿ ಕುಮುದ ಸಖನು ॥೨೯॥

ಗರಳಗೊರಳವನರಳ ಸರಳಂಗೆ ಮುನಿವಂತೆ
ಯಿರುಳ ತಿರುಳಿನ ಹೊರಳಿಗಾ ತರಣಿ ಕೆರಳ್ವಂತೆ
ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು।
ಹುರಳಳಿದುದುರವೊಡೆದು ಸರಳುರ್ಚೆ ನರಳುತ್ತ
ತೊರಳೆಯುಡಸಲು ಮೂಗನರಳಿಸೆಚ್ಚಂಬ ಹೊ
ತ್ತುರುಳ್ವ ಕಂಬನಿಯಿಂದ ತರಳ ಚಿತ್ತದ ಹಂದಿ ಮರಳಿ ಕಾನನಕೆಯ್ದುತು ॥೩೦॥

ಪುದಿದ ಗಿಡುವಿನೊಳು ಮಡುವಿನೊಳು ಬೆಟ್ಟದೊಳು ಘ
ಟ್ಟದೊಳು ಸರುವಿನೊಳು ದರುವಿನೊಳು ಹಳ್ಳದೊಳು ಕೊ [ಹೊಕ್ಕು ಮಿಕ್ಕು।
ಳ್ಳದೊಳು ಬೆಳದಿಱುಬಿನೊಳು ತುಱುಬಿನೊಳು ಸಂದಿಯೊಳು ಗೊಂದಿಯೊಳು
ಇದಿರೊಳೊಡ್ಡಿದ ಮರಂ ಮುಱಿಯೆ ಮೆಳೆಯೊಡೆಯೆ ಮೃಗ
ಬೆದಱೆ ಕೆದಱೆಧರೆ ಕಳಿದೋಡುವೆಕ್ಕಲನನ
ಟ್ಟಿದನಬುಜಸಖ ಕುಲ ಲಲಾಮನರಿಭೂಪಾಲ ದರ್ಪ ಸರ್ಪ ಮಯೂರನು ॥೩೧॥

ಅಂಬಿನಳವಿಗೆ ಸಿಲುಕುವಂತೆ ಸುರಗಿಯಲಿಱುವ
ಡಿಂಬುಗೊಡುವಂತಳ್ಳೆ ಹೊಯ್ದು ಬಳಲ್ವಂತೆ ಸ
ತ್ವಂ ಬಾಡೆ ನಡೆಗೆಟ್ಟು ನಿಲುವಂತೆ ಧರೆಯೊಳಾ ಬಿದ್ದುದೆಂಬಂತೆ ಹಲವ।
ನಂಬಿಸುತ ಮೋಹಿಸುತ ಹೋಹ ಕಾಡೆಕ್ಕಲನ
ಬೆಂಬಳಿಯಲೊಂದೇ ವರೂಥದಿಂ ಭೂಪ ನಿಕು
ರುಂಬದಲ್ಲಣ ಹರಿಶ್ಚಂದ್ರರಾಯಂ ಹರಿದನಾಯಾಸಮಂ ಬಗೆಯದೆ ॥೩೨॥

ಧರೆಯೊಳಗೆ ಬೇಗದಿಂ ಹರಿಣನತ್ಯಧಿಕವಾ
ಹರಿಣನಿಂ ಮರುತನುದ್ದಂಡವಾ ಹರಿಣನಿಂ
ಮರುತನಿಂ ಸರಳಧಿಕ ತೀವ್ರವಾ ಹರಿಣನಿಂ ಮರುತನಿಂ ಸರಳಿನಿಂದ।
ವರದೃಷ್ಟಿಯಧಿಕವಾ ಹರಿಣನಿಂ ಮರುತನಿಂ
ಸರಳಿನಿಂ ದೃಷ್ಟಿಯಿಂ ಮನವುಗ್ರಸತ್ವ ವಾ
ಹರಿಣನಿಂ ಮರುತನಿಂ ಸರಳಿನಿಂ ದೃಷ್ಟಿಯಿಂ ಮನದಿಂ ರಥಾಶ್ವ ಮಿಗಿಲು ॥೩೩॥

ಬಳಿವಿಡಿದು ಬಳಚಿದಂಬಿಂ ಮುಂದೆ ಹರಿದು ವನ
ದೊಳಗಡಗಿ ಮಾಯುವಾದೆಕ್ಕಲನನಲ್ಲಲ್ಲಿ
ಸುಳಿದಱಸಿ ಕಾಣದೆ ಮನಂ ನೊಂದು ಧೃತಿಯುಡುಗಿ ಡಗೆದೋಱೆ ಕಟ್ಟಾಸಱು।
ಮೊಳೆತು ಬಾಯಾಱೆ ತನು ಬೆಮರಿ ಮುಖ ಬಾಡಿ ರವಿ
ಕುಲ ಶಿರೋಮಣಿ ಹರಿಶ್ಚಂದ್ರರಾಯಂ ಕಂಡ
ನಳವಿಯೊಳು ನಾನಾ ವಿಶೇಷ ವಿಭವಂಬಡೆದ ಮಂಗಳ ತಪೋವನವನು ॥೩೪॥

ತಳೆದ ಪದ್ಮಾಸನಂ ಸುಗಿದ ತೊಗಲಂಗದಿಂ
ಮೊಳೆತ ಹುತ್ತೊಳಗಱತ ಸುಯ್ ನವ ದ್ವಾರದಿಂ
ಬೆಳೆದ ಕುಜಲತೆ ನೆಲಕ್ಕೊಲೆವ ಡೋವಿಗೆ ದೇಹದೊಳಗೆಯ್ದೆ ಬೀದಿವರಿದು।
ಸುಳಿವೊಱಲೆ ಫಣಿ ನಕುಲ ಮೂಷಕಂ ನೆಲನನೊಡೆ
ದಿಳಿವ ಜಡೆ ನಖಸಂಚವಳಿದ ನಿಟ್ಟೆಲು ದರ್ಪ
ವಳಿದವಯವಂ ಮೆಱೆವ ಘೋರ ತಪದಚಲತರನೀಕ್ಷಿಸಿದನವನೀಶನು ॥೩೫॥

ಮಿಗೆ ವಾತ ಗುಲ್ಮಪರಿವೃತರಾಗಿಯುಂ ನಿರೋ
ಗಿಗಳು ಪರಸತಿಗತಿಪ್ರಿಯರಾಗಿಯುಂ ಸುಶೌ
ಚಿಗಳುಱೆ ಸ್ತ್ರೀನಿಕರ ಸರ್ವಾಂಗರಾಗಿಯುಂ ಬ್ರಹ್ಮಚಾರಿಗಳು ಜಗದ।
ಬಗೆಯೆ ಕರ್ಣಾಂತಾಕ್ಷರಾಗಿಯುಂ ಸೂಕ್ಷ್ಮದೃ
ಷ್ಟಿಗಳು ಕುಲಗೋತ್ರಮಧ್ಯಸ್ಥಿತಿಗಳಾಗಿಯುಂ
ಸೊಗಯಿಪೇಕಾಕಿಗಳೆನಿಸಿ ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು ॥೩೬॥

ಕಂದಮೂಲಂಗೀಳ್ವ ಪೂಗೊಯ್ವ ಕೃಷ್ಣಾಜಿ
ನಂದಳೆವ ರುದ್ರಾಕ್ಷಿಗೋವ ವಲ್ಕಲ ವಸನ
ವೃಂದಮಂ ತೊಳೆವ ಮಿಸುಪಾದಾರವಮಂ ಬಿಗಿವ ಮೌಂಜಿಮೇಖಲೆಗಟ್ಟುವ।
ಒಂದಿ ಭಸಿತವನಿಡುವ ಯಜ್ಞೋಪವೀತಮಂ
ಬಂಧಿಸುವ ಜಡೆಯ ಸುಂಕಿಸುವ ಸಮಿತಂ ತಪ್ಪ
ಹೆಂದದ ಮುನೀಶ್ವರ ಕುಮಾರರಂ ಕಂಡು ಕೈಮುಗಿದಂ ಹರಿಶ್ಚಂದ್ರನು ॥೩೭॥

ಸಿಂಗದೊಡನೆಕ್ಕೆಗುಟ್ಟುವ ಕರಿಗಳಂ ಹುಲಿಯ
ಜಂಗುಳಿಯ ನೀಡಿಱುವ ಹರಿಣಂಗಳಂ ಹಲವು
ಮುಂಗುರಿಯ ಮೇಲೆ ತಲೆಯಂ ನೀಡಿ ನವಿಲ ಮುದ್ದಾಡಿಸುವ ಸರ್ಪಂಗಳ।
ಕಂಗೆಸೆವ ಸಾರಮೇಯಂಗಳೊಡನಾಡುವ ಕು
ರಂಗ ಶಿಶುವಂ ಕಾಡಬೆಕ್ಕನಟ್ಟುವ ಮೂಷ
ಕಂಗಳಂ ನೋಡಿ ಬೆಱಗಾಗುತಂ ನಡೆತಂದನರಿತಿಮಿರ ಕಮಲಸಖನು ॥೩೮।

ವಿದಿತವೆನೆ ವೇದಘೋಷದ ಪುರಾಣಪ್ರಸಂ
ಗದ ತರ್ಕತಂತ್ರಸಂವಾದದಾಗಮ ವಿಚಾ
ರದ ಸದೌಪನಿಷರ್ಥಶ್ರವಣದಾ ಸ್ತವಸ್ತೋತ್ರಪಠನ ಪ್ರಕರದ।
ಮೃದುವಾಕ್ಯಲಕ್ಷಣಾಲಾಪದ ಶಿವಾರ್ಚನಾಂ
ಗದ ಘಂಟಿಕಾರವದ ನಿತ್ಯಹೋಮಸ್ವಧಾಂ
ತ್ಯದ ಶ್ರವಣ ಸಂಭ್ರಮಕೆ ಬೆಱಗಾಗುತಿರ್ದನು ಹರಿಶ್ಚಂದ್ರಭೂನಾಥನು ॥೩೯॥

ಫಳಭಾರದಿಂದೊಲೆದು ತೂಗಿ ಬಾಗುವ ಮರಂ
ಗಳ ಕೆಳಗ ತುಱುಗಿ ನಳನಳಿಸಿ ಬೆಳೆದೆಳಲತೆಯ
ತಳಿರ ತಿಳಿಗೊಳನ ಪುಳಿನ ಸ್ಥಳದ ಕಮಲ ಕೈರವದ ತನಿಗಂಪುವೆರಸಿ।
ಸುಳಿವ ತಣ್ಣೆಲರ ತಂಪಂ ಕಂಡು ಮಂತ್ರಿ ಭೂ
ತಳನಾಥ ಬಿಡುವೊಡಿದು ಠಾವೆಂದು ಬಿನ್ನೈಸೆ
ಜಲಜಸಖಕುಲ ನಿಳಿದನಂದು ರಥಮಂ ಪಟ್ಟದಂಗನೆ ಕುಮಾರ ಸಹಿತ ॥೪೦॥

ಬಳವಳಿದ ರಥತುರಂಗ ವೃಂದಮಂ ಬಿಟ್ಟು ಶೀ
ತಳ ವಾರಿಯಂ ತೋಱಿ ಮೆಯ್ದೊಳೆದು ಲಲಿತ ಶಾ
ಡ್ವಳವನೊಲವಿಂ ಕೊಯ್ದು ಮುಂದಿಟ್ಟು ಕಟ್ಟಿ ಪ್ರಧಾನ ನಟ್ಟಡವಿಯೊಳಗೆ।
ಬಳಿವಿಡಿದು ಬಂದ ಕಟಕವನೆಯ್ದೆ ಬಿಡಿಸಿ ಭೂ
ತಳಪತಿಗೆ ಕೈಗೊಟ್ಟು ನಿರ್ಮಳ ಸರೋವರದೊ
ಳಿಳುಪಿ ಶಿಶಿರೋಪಚಾರಂಗಳಂ ಮಾಡಿದಂ ಡಗೆ ತೊಲಗಿ ವಿಶ್ರಮಿಸಲು ॥೪೧॥

ಜಲಜದೆಳ ಎಲೆಗಳಿಂ ವೊಗೆ ವೊಗೆದು ತೆಗೆದು ನಿ
ರ್ಮಳ ಜಲವನೀಂಟಿ ಪುಳಿನ ಸ್ಥಳದ ಮೇಲೆ ಕೆಂ
ದಳಿರ ಹಸೆಯಂ ಹಾಸಿ ನೃಪರೂಪ ಚಂದ್ರಮಂ ಮಂತ್ರಿ ಸತಿ ಸುತರು ಸಹಿತ।
ಮೊಳೆವ ಸುಖಮಂ ಸಾಗಿಸುತ್ತ ತಾಂಬೂಲ ಕರ
ತಳನಾಗಿ ನಲಿದೋಲಗಂಗೊಟ್ಟು ದೀಹದರ
ಗಿಳಿ ನವಿಲು ಹಂಸೆ ಕೋಕಿಲ ಪಾರಿವಂಗಳಂ ನೋಡಿ ಹರ್ಷಂದಳೆದನು ॥೪೨॥

ಘನ ಪುಣ್ಯಮಯವೆನಿಪ್ಪೀ ತಪೋವನದೊಳಿಹ
ಮುನಿಯಾವನೋ ಮಹಾದೇವನೇ ಬಲ್ಲನಾ
ತನ ಶಾಂತಿಯಿಂದ ಶಶಿ ಚಾರಿತ್ರದಿಂ ಗಂಗೆ ವರ ತಪಸ್ತೇಜದಿಂದ।
ದಿನಕರಂ ಸುಳಿವಿಂದ ತಂಗಾಳಿ ನುಡಿಯ ಮೋ
ಹನದಿಂದ ಸುಧೆಯುದಾರತ್ವದಿಂ ಸುರಕುಜಂ
ಜನಿಸದಿರವೆಂದು ಕೊಂಡಾಡುತಿರ್ದಂ ಹರಿಶ್ಚಂದ್ರನಾ ಮಂತ್ರಿಯೊಡನೆ ॥೪೩॥

ಹೊಗಳುತ್ತ ಹಾರಯಿಸುತುಬ್ಬುತ್ತ ಕೊಬ್ಬುತ್ತ
ನಗುತ ನಲಿಯುತ್ತ ಹಾಡುತ್ತಾಡುತಾನಂದ
ವೊಗೆಯುತಿರಲೊಬ್ಬ ಮುನಿಯಂ ಕಂಡಿದಾವನಾಶ್ರಮವೆಂದು ಬೆಸಗೊಂಡಡೆ।
ವಿಗಡ ವಿಶ್ವಾಮಿತ್ರ ಮುನಿಯ ಬನವೆನೆ ಸುಖಂ
ಸುಗಿದು ಪೋಯ್ತುಡೆದಂತೆ ಹಾವಗಿದು ಬಿಟ್ಟಂತೆ
ಬಗೆ ಬೆದಱಿ ಗುರುವಾಜ್ಞೆಗೆಟ್ಟು ದಿನ್ನೇಗೆಯ್ವೆನೆಂದನು ಹರಿಶ್ಚಂದ್ರನು ॥೪೪॥

ಶಿವಪೂಜೆಗೆಯ್ದು ಯಾಗಂಗಳಂ ನಡೆಸಿ ಸ
ತ್ಯವನುಡಿದು ದಾನ ಧರ್ಮಂಗಳಂ ಮಾಡಿ ದೇ
ಶವನು ಪಾಲಿಸಿ ಕುಲಾಚಾರದಿಂ ನಡೆದಖಿಳ ಮುನಿಜನವನಾರಾಧಿಸಿ ।
ಅವಿಚಾರಮಂ ಬಿಟ್ಟು ನಾನಾ ಪುರಾಣ ಕಥ
ನವನು ತಿಳಿದಿಂದುತನಕೆಂತಕ್ಕೆ ಪಡೆದ ಪು
ಣ್ಯವನು ಕೆಡಿಸಿದೆನು ಗುರುವಾಜ್ಞೆಗೆಟ್ಟೆನ್ನಿಂದ ಪಾಪಿಗಳದಾರೆಂದನು ॥೪೫॥

ಗುರು ಸದಾಶಿವನು ಗುರುಸತಿ ಗಿರಿಜೆ ಗುರುಸುತರು
ಕರಿವದನ ಷಣ್ಮುಖರು ಗುರುಸಖರು ವರಗಣೇ
ಶ್ವರರು ಗುರುಕುಲವೆಯ್ದೆ ಶಿವಕುಲಂ ಗುರು ನುಡಿದ ನುಡಿ ಶುದ್ಧ ಪಂಚಾಕ್ಷರಿ।
ಗುರುಮತಂ ಶೈವಾಗಮುವ್ರತಂ ಗುರುನಾಮ
ವರಶಿವ ಸ್ತೋತ್ರ ಗುರು ತುಷ್ಟಿ ಶಿವ ತುಷ್ಟಿಯದು
ಪರವಿಲ್ಲೆನಿಪ್ಪಾತನೇಂ ಧನ್ಯನೋ ಮಹಾದೇವ ಗುರು ಶರಣೆಂದನು ॥೪೬॥

ಆನು ಗುರುವಾಜ್ಞೆಯಂ ಮೀಱುದುದಱಿಂದೆನಗೆ
ಹಾನಿ ಹೊಗದಿರದೆಂದಡೇಕೆ ಹೊಕ್ಕಪುದೆನಲು
ದಾನಿ ಗುರು ನೆನಹಿಂದ ಬಪ್ಪ ಪುಣ್ಯಂ ಮಱೆದಡೇಕೆ ಕೇಡಾಗದೆನಲು।
ಜ್ಞಾನಕೃತದಿಂದೊಗೆದೊಡೊಲ್ಲೆನೆನಬಾರದ
ಜ್ಞಾನಕೃತಕಿಲ್ಲವಪಜಯಗಳೆಂದೆನೆ ಗುಣಾ
ನೂನ ಮಱೆದುಱೆ ಮೆಟ್ಟಿದಡೆ ಮುಳ್ಳು ನೆಡದಿಹುದೆ ಹೇಳೆಂದನವನೀಶನು ॥೪೭॥

ಮನದೊಳಗೆ ಮಱುಗುತಲ್ಲಿರ್ದು ವಿಶ್ವಾಮಿತ್ರ
ಮುನಿಯು ಕಾಟಕ್ಕೆ ಗುಱಿಯಾಗಿ ಗುರುವಾಜ್ಞೆಗೆ
ಟ್ಟನವಧಿಯ ಪತಿತನಪ್ಪುದಱಿಂದೆ ಹೋಹೆವೇಳರಸಯೆನೆ ಮಂತ್ರಿಗೆಂದ।
ಬನಕೆ ಬಂದೆನಗೆ ನಮಿಸದೆ ಹೋದನೆಂದು ನೆ
ಟ್ಟನೆ ಶಪಿಸದಿರನೆನಲು ಶಪಿಸಿ ಮಾಡುವುದೇನು
ವಿನುತ ಗುರುವಾಜ್ಞೆಗೆಡದಿಪ್ಪುದೇ ಲೇಸು ಹೋಹುದೆ ಮಂತ್ರವೇಳೆಂದನು ॥೪೮॥

ಎಳಸುವಬಲೆಯರ ನಡುವಿರ್ದತಿ ಜಿತೇಂದ್ರಿಯಾ
ಮಳನೆನಿಪುದರಿದಲ್ಲದಕಟ ನಿರ್ಜರ ಭೂಮಿ
ಯೊಳಗಿರ್ದುನಾಂ ಜಿತೇಂದ್ರಿಯನೆಂಬುದೇನರಿದಸತ್ಯಮಂ ನುಡಿಯದಿಪ್ಪ।
ಬಳವೆನಗೆ ಗುರುವಾಜ್ಞೆಯೈಸಲೇಯದೆ ನನಗೆ
ಮುಳಿದವರ ಮುಖದೊಳಹುದೆನಿಸದುಳಿದಂತೆ ನಿ
ಷ್ಫಲವಾವುದಿರ್ದಡಂ ಹೋದಡಂ ಕೇಡಾಗದಿರದು ನಿಶ್ಚಯವೆಂದನು ॥೪೯॥

ಹೊಳೆವ ಮೇರುವ ಸುತ್ತಿ ಬೆಂಡಾದ ರವಿ ಚಂದ್ರ
ಕಳೆಯು ತೊಡೆಯೆಡೆಯೊಳೊಯ್ಯನೆ ಮಲಗುವಂತೆ ರವಿ
ಕುಲದ ರಾಯಂ ವರಾಹನ ಹಿಂದೆ ಸುತ್ತಿದಾಸಱವೇಳೆ ಗುರುವಾಜ್ಞೆಯು।
ಕಳೆದು ಕೌಶಿಕನಾಶ್ರಮಂಬೊಕ್ಕ ಚಿಂತೆಯಿಂ
ಮುಳುಗುತ್ತ ನಿಜಸತಿಯ ತೋರದೊಡೆಗಳ ಮೇಲೆ
ಲಲಿತ ಮಣಿಮಕುಟ ಮಂಡಿತ ಮಸ್ತಕವನಿಳುಹಿ ಮಗ್ಗುಲಿಕ್ಕಿದನಾಗಳು ॥೫೦॥

ಆ ಸಮಯದೊಳು ಕಣ್ಣ ಮುಂದೆಸೆವ ಸತಿಯ ನಿಡು
ಬಾಸೆ ಪೊಲೆ ಮುಡಿ ಮುಖದ ಮೋಹನಂ ತಳಿರ್ಗಳಿಂ
ಬೀಸಿ ಬಳಲ್ದರಿ ಜೀಯ ಬೊಪ್ಪಯ್ಯಯೆಂದೆಂಬ ಸುತನ ಸವಿನುಡಿ ಚರಣವ।
ಓಸರಿಸದೊತ್ತುವ ಚಮೂಪನುಪಚರಿಯದಿಂ
ದಾ ಸಕಳ ಕುಸುಮದ ಸುಗಂಧ ಸುಖನಿಕರದ ಸು
ಧಾ ಸೂಕ್ತಿಗಳು ಸುಳಿವ ತಂಗಾಳಿಗಳು ಸೊಗಸವರಸಂಗೆ ಚಿಂತೆಯು ಕಯ್ಯೊಳು॥೫೧॥

ಸತಿ ಮಡಿಸಿ ನೀಡುವೆಲೆವಿಡಿದ ಕೈ ಬಸವಳಿದು
ದತಿ ಚಿಂತೆಯೊಳು ಮಱೆದ ತನು ಜೊಮ್ಮು ವಿಡಿದ ಪು
ರ್ಬತಿ ಭಾರವಾಗಿ ಕಣ್ಮುಚ್ಚಿ ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು।
ವಿತತ ಸುಖದಿಂದಿರುತಿರಲ್ಕೆ ನಾನಾ ದುಃಖ
ಯುತಮಪ್ಪುದೊಂದು ಕನಸಂ ಕಂಡು ನೊಂದು ಭೂ
ಪತಿ ಬೆದಱಿದಂತೆ ಛೋಂಕೆನಲೆದ್ದು ಬೆಬ್ಬಳಿಸಿ ನಾಲ್ದೆಸೆಯನಾರಯ್ವನು ॥೫೨॥

ನಾಡೆ ಕಂದಿದ ಮೊಗಂ ಬಱತ ಬಾಯ್ ಕೆಲಬಲನ
ನೋಡಿ ಬೆಚ್ಚುವ ದೃಷ್ಟಿ ಸೆರೆ ನೆಗೆದ ಗಂಟಲ
ಲ್ಲಾಡುವೆದೆ ಬಿಡೆ ನಡುಗುತಿಪ್ಪ ತೊಡೆ ಶಂಕಿಸುವ ಮೆಯ್ ಧರಾಪತಿಯ ಮೇಲೆ।
ಕೂಡೆ ತೋಱಲು ಕಂಡು ತೂಪಿಱಿದು ಮುಂಗಯ್ಯ
ಸೂಡಗವನುಱೆ ನಿವಾಳಿಸಿ ಮುಖಕ್ಕೆಱೆದು ಕೊಂ
ಡಾಡಿ ಬೋಳೈಸಿ ಏಳೆಯವಿತ್ತು ನುಡಿಸಿದಳು ರಾಣಿ ನಿಜವಲ್ಲಭನನು ॥೫೩॥

ಧುರದೊಳರಿ ಭೂಭುಜರನಂಜಿಸುವ ನಡುಗಿಸುವ
ಕೊರಗಿಸುವ ಕೋಡಿಸುವ ಬಳುಕಿಸುವ ಜಳುಕಿಸುವ
ಬಿರುದಂಕಮಲ್ಲ ನೀ ನಡುಗಲೇತಕ್ಕೆ ಹೇಳೆಂದು ಮೆಲ್ಲನೆ ನುಡಿಸಲು।
ತರುಣಿ ಕೇಳೊಂದು ಕನಸಂ ಕಂಡೆನಾ ಕನಸು
ನಿರುತವೆಂದೇ ಕಣ್ಣ ತೆಱೆದೆ ನೀನಿಂತಿದಱ
ಪರಿಯಂ ವಿಚಾರಿಸೆಂದವನೀಶ ನುಡಿಯಲಾ ನುಡಿಗೆ ಸತಿ ಹೂಂಕೊಂಡಳು ॥೫೪॥

ಘುಡಿ ಘುಡಿಸುತೊಬ್ಬಮುನಿ ಬಂದು ನಾನೋಲಗಂ
ಗೊಡುವ ಮಣಿಮಂಟಪದ ಕಂಭವೆಲ್ಲವನು ತಡೆ
ಗಡಿದು ಹೊಂಗಳಸಂಗಳಂ ಮಾಣದೊಡೆಬಡಿದು ನೆರೆದ ಸಭೆಯೊಳಗೆನ್ನನು।
ಕೆಡಹಿ ಸಿಂಹಾಸನವ ನೊಯ್ವಾಗಳೆನ್ನೆದೆಯ
ನಡರ್ದೊಂದು ಕಾಗೆ ಕರೆದುದು ಬಳಿಕ್ಕಾಂ ಗಿರಿಯ
ನಡರ್ದು ಶಿಖರದೊಳೆಸೆವ ಮಣಿಗೃಹಂಬೊಕ್ಕೆನಿದಱಂತಸ್ಥವೇನೆಂದನು ॥೫೫॥

ಇದಕಿನಿತು ದುಗುಡವೇಕಾ ಕುಪಿತ ಮುನಿಪನೆಂ
ಬುದು ಕೌಶಿಕಂ ಬಳಿಕ್ಕಿನ ವಿಗುರ್ಬಣೆಗಳೆಂ
ಬುದು ಮುನಿಯ ಗೊಡ್ಡಾಟದಿಂ ನಮಗೆ ಬಪ್ಪ ಕಿಱಿದಲ್ಪಸಂಕಟವಿದಕ್ಕೆ।
ಹೆದಱದಿರ್ದೊಡೆ ಮುಂದೆ ಲೇಸುಂಟು ಪರ್ವತದ
ತುದಿಯ ಗೃಹಮಂ ಪೊಗುವೆನೆಂಬುದು ಮಹಾನೂನ
ಪದವಿ ತಪ್ಪದು ದಿಟಂ ಮಱುಗ ಬೇಡಿನ್ನೊಂದು ಮಾತ ಚಿತ್ತೈಸೆಂದಳು ॥೫೬॥

ಬಗೆವಡೀ ಕನಸು ಗುರುವಾಜ್ಞೆಯಂ ಮಿಾಱುತ
ಕ್ಕೊಗೆವ ಕೇಡಿಂಗೆ ಸೂಚನೆ ಮುನಿಯಬೇಡ ಮಂ
ತ್ರಿಗೆ ಮಗಂಗೆನಗೆ ರಾಜ್ಯಕ್ಕೆ ಚತುರಂಗ ಸೇನೆಗೆ ಸಕಲ ಭಂಡಾರಕೆ।
ನಗರಕ್ಕೆ ಸರ್ವ ಪರಿವಾರಕ್ಕೆ ತೇಜದೇ
ಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ
ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆನೆಂದಳು ॥೫೭॥

ಏನನಂಗನೆ ನುಡಿದಳೇನ ನಾಲಸಿದೆನಿದ
ಕೇನು ಮಱು ಮಾತಿನ್ನು ಮೇಲೆ ಮಾಡುವುದೇನು
ತಾನಾವನೆಲ್ಲಿಂದ ಬಂದೆನೆನ್ನೊಡನಿರ್ದರಾರು ನೆಲೆಯಾವುದೆಂದು।
ಏನುವಂ ಕಾಣದೋರಂತೆ ಮರವಟ್ಟುದು
ಮ್ಮಾನವೂಡಲಂ ತೀವಿ ತುಳುಕಾಡುತಿರಲು ರಿಪು
ಭೂನಾಥ ಶರಧಿ ವಡಬಾನಲಂ ಮಱೆದು ಚಿಂತಾಚಿತ್ರನಿರುತಿರ್ದನು ॥೫೮॥

ಬಿಡೆ ತಪೋವನವ ಕಾಣುತ್ತ ಕಡೆಗಣಿಸಿ ಹೋ
ದಡೆ ಕೇಳ್ದು ಮುನಿ ಮುನಿವನಲ್ಲದಿಂದಿನ ಹಗಲ
ಕಡೆತನಕ ನೋಡಿದೆವು ಕೌಶಿಕ ಮುನೀಶ್ವರಂಗರಸ ವಂದಿಸಿದನೆಂದು।
ನುಡಿದು ನಡೆಗೊಂಬವೇಳೇಳೆಂದು ಮಂತ್ರಿ ತ
ನ್ನೊಡೆಯಂಗೆ ಬುದ್ಧಿವೇಳ್ದೆಬ್ಬಿಸುತ್ತಿರಲತ್ತ
ಪೊಡವೀಶನಂ ತಂದ ಹಂದಿ ಹರಿಯಿತ್ತು ಕೌಶಿಕನನುಷ್ಠಾನದೆಡೆಗೆ ॥೫೯॥

ನಿಡು ಸರದೊಳಿಳಿವುಸುರು ಹೊಯ್ವಳ್ಳೆ ಡೆಂಡಣಿಸು
ವಡಿ ಹನಿವ ಬೆಮರು ಮಱುವೊನೆಗಂಡ ಬಾಣಂಗ
ಳೆಡೆಯಿಂದ ಸುರಿವ ಬಿಸಿ ನೆತ್ತರೇಱುಗಳ ವೇದನೆಗಾಱದರೆ ಮುಚ್ಚುವ।
ಕಡೆಗಂಗಳರಳ್ವ ನಾಸಾಪುಟಂ ಬಲಿದ ನೊರೆ
ಯಿಡುವ ಕಟವಾಯ್ ಕುಸಿದ ತಲೆ ಸುಗಿದ ದರ್ಪ ಹುರಿ [||೬೦||
ಯೊಡೆದ ರೋಮಂ ತೂಗಿ ತೊನೆದು ಮೆಯ್ಮಱೆವ ಹಂದಿಯನು ಕೌಶಿಕ ಕಂಡನು

---

೭

ಭೂಪ ಸತ್ಕುಲದೀಪನೊಡನೆ ವಿಶ್ವಾಮಿತ್ರ
ಪಾಪಿ ಕೋಪಿಸಿ ಹೊಲತಿಯರನು ಪುಟ್ಟಿಸಿ ಕಳುಹೆ
ಭಾಪು ಸ್ಥಿರಂಜೀವ ಸತ್ತಿಗೆಯನೀಯಲ್ಲದಡೆ ಗಂಡನಾಗೆಂದರು ॥ಸೂಚನೆ॥

ಹಂದಿಯಂ ಕಾಣುಹತಡಂ ಕೋಪಗಿಚ್ಚು ಭುಗಿ
ಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ
ಸಂದ ಯೋಗಂ ಹಿಂಗಿ ದಯೆ ದಾಂಟಿ ನೀತಿ ಬೀತಾನಂದವಱಿತು ಹೋಗಿ।
ಹಿಂದ ನೆನೆದುರಿದೆದ್ದು ಸಿಕ್ಕಿದನಲಾ ಭೂಪ
ನಿಂದು ನಾನಾಯ್ತು ತಾನಾಯ್ತು ಕೆಡಿಸದೆ ಮಾಣೆ
ನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು ॥೧॥

ಮುನಿಗೆ ಹೊಲೆಯಾವುದತಿಕೋಪ ಬದ್ಧ ದ್ವೇಷ
ಮನಿಮಿತ್ತ ವೈರವದಱಿಂದ ಹುಟ್ಟಿದರಾಗಿ
ವನಿತೆಯರು ಕಡೆಗೆ ಹೊಲತಿಯರಾಗಿ ಕೆಲಸಾರಿ ನಿಂದು ಬೆಸನಾವುದೆನಲು।
ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ
ವನದೊಳೈದನೆ ನೀವು ಸರ್ವಬುದ್ಧಿಗಳೊಳಾ
ತನ ಮರುಳು ಮಾಡುತಿರಿ ಹೋಗಿಯೆಂದಟ್ಟಿನಂ ದುರ್ಮಂತ್ರ ಬಲವಂತನು ॥೨॥

ಹೊಸ ಕುಟಿಲ ಕುಂತಲದ ಚಂಚಲಾಕ್ಷಿಗಳ ಕ
ರ್ಕಶ ಕುಚದ ಶಿಥಿಲ ಮಧ್ಯದ ಲಘು ಶ್ವಾಸದ
ತೃಸಮರಾಗಾಧರದ ಗೂಢ ನಾಭಿಯ ಮಿಱಿಕೊಬ್ಬಿದ ನಿತಂಬ ಯುಗದ।
ಅಸದಳದ ಜಡಗತಿಯ ಬೆಳುನಗೆಯ ವಕ್ರವಾ
ಕ್ಯ ಸಮೂಹದವಗುಣಂಗಳ ಸಂಗದಿಂ ಕುಲಂ
ಹಸಗೆಟ್ಟ ನಾಮಿಕೆಯರಾದರಲ್ಲದೆ ಸಂಗವಾರ ಕುಲಮಂ ಕೆಡಿಸದು ॥೩॥

ಸಂದ ಕಾರಿರುಳ ಕನ್ನೆಯರು ಹಗಲಂ ನೋಡ
ಲೆಂದು ಬಂದರೊ ಸುರಾಸುರರಬುಧಿಯಂ ಮಥಿಸು
ವಂದು ಹೊಸ ವಿಷದ ಹೊಗೆಹೊಯ್ದು ಕಗ್ಗನೆ ಕಂದಿ ಜಲದೇವಿಯರು ಮನದಲಿ।
ನೊಂದು ಮಾನಿಸರಾದರೋ ಕಮಲಜಂ ನೀಲ
ದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀ
ವಂದಳೆದವೋ ಎನಿಪ್ಪಂದದಿಂ ಬಂದರಂಗನೆಯರವನೀಶನೆಡೆಗೆ ॥೪॥

ಮಾಯುದಬಲೆಯುರು ಕಾಣುತ್ತ ಮಝು ಭಾಪಧಟ
ರಾಯ ಮಝುರೇ ರಾಯ ರಾಯದಳವುಳ ಕಾಱ
ರಾಯ ಕಂಟಕರಾಯ ರಾಯಜಗಜಟ್ಟಿ ರಾಯದಲ್ಲಣ ರಾಯಕೋಳಾಹಳ।
ರಾಯಭುಜಬಲ ಭೀಮ ರಾಯ ಮರ್ದನರಾಯ
ಜೀಯ ಸ್ಥಿರಂಜೀವಯೆಂದು ಕೀರ್ತಿಸಿ ಗಾಣ
ನಾಯಕಿಯರೊಲಿದು ದಂಡಿಗೆವಿಡಿದು ಪೊಡಮಟ್ಟು ಹಾಡಲುದ್ಯೋಗಿಸಿದರು ॥೫॥

ಗತಿ ಗಮಕ ಗಹಗಹಿಕೆ ತಿರುಪು ಚಾಳೆಯ ಕೊಂಕು
ಜತಿ ಜೋಕೆ ಮಾರ್ಗವಣೆ ವಹಣಿ ತರಹರಿಕೆ ಕಂ
ಪಿತ ಹೊಂಪು ಬಾಗು ಡೊಕ್ಕರವಿವರ ಕಾಳಾಸ ಕಮ್ಮವಣೆ ಲೋಲಂಗಿತ।
ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋ
ಚಿತ ತಾರಮಧುರ ಮಂದ್ರಂಗಳಿಂ ಹಾಡಿ ಭೂ
ಪತಿಯ ದುಗುಡವನು ತೊಳೆದರು ರಾಗರಸ ಲಹರಿಯಿಂದನಾಮಿಕ ಸತಿಯರು ॥೬॥

ಎಕ್ಕಲನ ಬಳಿವಿಡಿದು ಸುತ್ತಿದಾಸಱನು ಮುನಿ
ರಕ್ಕಸನ ಬನಕೆ ಒಂದಂಜಿಕೆಯನೆರಡನೆಯ
ಮುಕ್ಕಣ್ಣನೆನಿಪ ಗುರುವಾಜ್ಞೆಗೆಟ್ಟಳಲನಲ್ಲದೆ ಕನಸಕಂಡ ಭಯುವ।
ಮಿಕ್ಕು ಮಱೆವಂತಡಸಿ ಕವಿವ ಗತಿಗಳ ಸೊಗನ
ನಕ್ಕಿಸದೆ ಸಮಯ ಸಮಯುದ ಪಸಾಯಕ್ಕೆ ಮನ
ವುಕ್ಕಿ ಸರ್ವಾಭರಣಮಂ ಗಾಣ ರಾಣಿಯುರಿಗಿತ್ತನು ಹರಿಶ್ಚಂದ್ರನು ॥೭॥

ಬಡತನದ ಹೊತ್ತಾನೆ ದೊರಕಿ ಫಲವೇನು ನೀ
ರಡಸಿರ್ದ ಹೊತ್ತಾಜ್ಯ ದೊರಕಿ ಫಲವೇನು ರುಜೆ
ಯುಡಸಿ ಕೆಡದಿಹ ಹೊತ್ತು ರಂಭೆ ದೊರಕೊಂಡಲ್ಲಿ ಫಲವೇನು ಸಾವ ಹೊತ್ತು।
ಪೊಡವಿಯೊಡೆತನ ದೊರಕಿ ಫಲವೇನು ಕಡುವಿಸಿಲು
ಹೊಡೆದು ಬೆಂಡಾಗಿ ಬೀಳ್ವೆಮಗೆ ನೀನೊಲಿದು ಮಣಿ
ದೊಡಿಗೆಗಳನಿತ್ತು ಫಲವೇನು ಭೂನಾಥ ಹೇಳೆನುತ ಮತ್ತಿಂತೆಂದರು ॥೮॥

ಕಡಲೊಳಾಳ್ವಂಗೆ ತೆಪ್ಪವನು ದಾರಿದ್ರಂಗೆ
ಕಡವರವನತಿ ರೋಗಿಗಮೃತಮಂ ಕೊಟ್ಟಡವ
ರಡಿಗಡಿಗದಾವ ಹರುಷವನೆಯ್ದುತಿಪ್ಪರವರಂ ಪೋಲ್ವರೀ ಪೊತ್ತಿನ।
ಸುಡುಸುಡನೆ ಸುಡುವ ಬಿಱುಬಿಸಿಲ ಸೆಕೆಯುಸುರ ಬಿಸಿ
ಹೊಡೆದುದುರಿಹೊತ್ತಿ ಬಾಯ್ಬತ್ತಿ ಡಗೆ ಸುತ್ತಿ ಸಾ
ವಡಸುತಿದೆ ನಿನ್ನ ಮುತ್ತಿನ ಸತ್ತಿಗೆಯನಿತ್ತು ಸಲಹು ಭೂಭುಜಯೆಂದರು ॥೯॥

ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪ
ಟ್ಟವ ಕಟ್ಟುವಂದಿದಿಲ್ಲದೊಡರಸುತನ ಸಲ್ಲ
ದವನಿಯೊಳು ಯುದ್ಧರಂಗದೊಳಿದಂ ಕಂಡ ಹಗೆಗಳು ನಿಲ್ಲರಿದಱ ಕೆಳಗೆ।
ಕವಿವ ನೆಳಲೊಳಗಾವನಿರ್ದನಾತಂಗೆ ತಾಂ
ತವಿಲೆಡರು ಬಡತನ ನಿರೋಧವಪಕೀರ್ತಿ ಪರಿ
ಭವಭಯಂ ಹರೆವುದಿದನಱಿದಱಿದು ಸತ್ತಿಗೆಯ ಕೊಡಬಹುದೆ ಹೇಳೆಂದನು ||೧೦||

ಕೊಡಬಾರದೊಡವೆಯಂ ಕೊಡುವುದರಿದೈಸೆ ಕೊಡು
ವೊಡವೆಗಳನಾರಾದಡಂ ಕೊಡರೆ ಹೇಳೆನಲು
ಬಿಡೆಬೇಡುವರ ಬಾಯಿ ಹಱಿವುದೇ ಬೇಡಿದುವನೀವ ದೊರೆಯಾವನೆನಲು।
ಕೊಡರೆ ಮುನ್ನಿನ ಬಲಿ ದಧೀಚಿ ಶಿಬಿಗಳು ಬೇಡಿ
ದೊಡವೆಗಳನೆನಲದೇಂ ತ್ಯಾಗವೇ ದಾನ ಗುಣ
ವಿಡಿದೈಸಲೇ ಕೊಟ್ಟರೆನಲೊಂದು ದಾನವೆ ನೀನಿದಂ ಕೊಡಲೆಂದರು ||೧೧||

ಪಾಡಿ ಮೆಚ್ಚಿಸಿದ ಕತದಿಂ ತ್ಯಾಗವಾಸತ್ತು
ಬೇಡಿದುದಱಿಂ ದಾನ ಹವಣಿನ ಪದಸ್ಥಿಕೆಯು
ಜೋಡಿಯುಂಟದಱೊಳುಪಕಾರ ಕೌಶಿಕನ ಹೆಸರಿಂಗಿತ್ತಡಾರಾಧನೆ।
ಗಾಡಿಕಾತಿಯರಾಗಿ ವಿಟಲಕ್ಷಣಂ ಮನದ
ಪಾಡಱಿಯಲೆಂದೆವದಱಿಂ ಸಲುಗೆ ಶಂಕಿಸದೆ
ನೀಡಿದೊಡೆ ಕೀರ್ತಿ ಕರುಣಿಸಿ ಕೊಡಲು ಪುಣ್ಯವೀ ಸತ್ತಿಗೆಯೊಳಹುದೆಂದರು ||೧೨||

ಅನುನಯದೊಳೆಲ್ಲಮಂ ಕೊಡಬಹುದು ಬಿಡಬಹುದು
ಜನನಿಯುಂ ಜನಕನಂ ನಲ್ಲಳಂ ದೈವಮಂ
ಮನವಾರೆ ನಂಬಿ ನಚ್ಚಿರ್ದ ಪರಿವಾರಮಂ ಕೊಡುವ ಬಿಡುವತಿಕಲಿಗಳು।
ಜನರೊಳಗೆ ಜನಿಸರೆಂದೆನಲು ನೀನೀಗ ಪೇ
ಳ್ವಸಿತಱೊಳು ಬೇಡಿದಡೆ ಕೊಡಬೇಡ ಕೊಡೆಯುನೀ
ಯೆನೆ ಲೋಭವೇಕರಸಯೆನಲದಲ್ಲದೆ ಬೇಱೆ ಮಾತೆಪಿತರಿಲ್ಲೆಂದನು ||೧೩||

ಲೋಗರಿಗೆ ಕೊಡಬಾರದಾಗಿ ಸತಿ ವಂಶಗತ
ವಾಗಿ ಬಂದುದಱಿಂದ ತಂದೆ ಪಟ್ಟವ ಕಟ್ಟು
ವಾಗಲರ್ಚಿಸಿಕೊಂಬುದಾಗೆ ದೈವಂ ನೆಳಲ ತಂಪನೊಸೆದೀವುದಾಗಿ।
ಸಾಗಿಸುವ ತಾಯ್ ಧುರದೊಳರಿಗಳಂ ನಡುಗಿಸುವು
ದಾಗಿ ಚತುರಂಗಬಲವೆನಿಸಿತೀ ಛತ್ರವೆಂ
ಬಾಗಳಿದನಱಿದಱಿದು ಬೇಡುವರನತಿ ಮರುಳರೆನ್ನರೇ ಮೂಜಗದೊಳು ||೧೪||

ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇ
ಳ್ದೆಳಸಿ ಕಟ್ಬಾಸೆವಟ್ಟೆಯ್ತಂದು ಬೇಡಿ ನಿ
ಷ್ಫಲವಾಗದಂತೆ ನಾವತಿಮಱುಗದಂತಳಲದಂತೆ ಬಿಸುಸುಯ್ಯದಂತೆ।
ತಿಳಿದು ನೀನೆಮಗೆ ವಲ್ಲಭನಾಗಿ ಚಿತ್ತದು
ಮ್ಮಳಿಕೆಯಂ ಕಳೆ ಹರಿಶ್ಚಂದ್ರಭೂನಾಥಯೆಂ
ದಳವಳಿದು ಬಾಯ್ಬಿಟ್ಟು ಕೈಮುಗಿದು ನುಡಿದರೊಲವಿಂದನಾಮಿಕ ಸತಿಯರು ‖೧೫‖

ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲಿಂದುತನಕ।
ಹೊಲತಿಯರು ಬಂದಾವು ಸತಿಯರಾದಪ್ಪೆವೆಂ
ಬುಲಿಹವೆಂಬುದು ಬಂದ ಕಾಲ ಗುಣವೋ ನಿಂದ
ನೆಲದ ಗುಣವೋ ನೋಡುನೋಡೆಂದು ಕಡುಮುಳಿದು ಕೋಪಿಸಿದನವನೀಶನು ‖೧೬‖

ಪಾವನ ಕ್ಷೀರಮಂ ಕೊಡುವ ಕೆಚ್ಚಲ ಮಾಂಸ
ವಾವಲೇಸಿನಿದುಳ್ಳ ಮಧುವನೊಸೆದೀವ ನೊಳ
ವಾವಲೇಸಧಿಕ ಕಸ್ತೂರಿಯಂ ಕೊಡುವ ಮೃಗನಾಭಿ ತಾನಾವಲೇಸು।
ದೇವರಿಗೆ ಸಲ್ಲವೇ ಉತ್ತಮಗುಣಂಗಳಿ
ರ್ದಾವ ಕುಂದಂ ಕಳೆಯಲಾಱವವನೀಶ ಕೇಳ್
ಭಾವಿಸುವೊಡಿಂದೆಮ್ಮ ರೂಪು ಜವ್ವನವಿರಲು ಕುಲದ ಮಾತೇಕೆಂದರು ‖೧೭‖

ಅಕ್ಕಕ್ಕು ಬಚ್ಚಲುದಕಂ ತಿಳಿದಡಾರ ಮಿ
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ।
ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ
ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇ
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವೀ ಮಾತು ತಾ ಹೊಲೆಯೆಂದನು ‖೧೮‖

ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ ಮಾ
ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ ರೂಪನೆಱೆ
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್ ಮುಡಿಗಳಿಂ ಸುಳಿವ ತಂಗಾಳಿಯಿಂ।
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತೆ
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮವೊಂದಧಿಕವೇ ಎಂದರು ‖೧೯‖

ಕಂಡಱುವವ್ಯೆಸಲೇ ನಯನೇಂದ್ರಿಯಂ ಘ್ರಾಣ
ಕೊಂಡಱುವವ್ಯೆಸಲೇ ವಾಸನೆಯ ಕರ್ಣಂಗ
ಳುಂಡಱುವವ್ಯೆಸಲೇ ಶಬ್ದಮಂ ದೂರದಿಂದಲ್ಲದವು ಮುಟ್ಟಲಿಲ್ಲ।
ಭಂಡತನವೀಮಾತಿದಕ್ಕೆಯುಪಮಾನವೇ
ಕೆಂಡವನು ಮುಟ್ಟಿದಡೆ ಬೇವಂತೆ ಕೇಳ್ದಡಂ
ಕಂಡು ವಾಸಿಸಿದಡಾ ಬೆಂದವೇ ಕಾಳುಗೆಡೆಯದೆ ಹೋಗಿ ನೀವೆಂದನು ॥೨೦॥

ಏಗೆಯ್ದಡಂ ಕುಲಜರಥಮಸತಿಯರ ನೋಡ
ಲಾಗದಱಿಯದೆ ಪಾಪದಿಂ ನೋಡಿದಡೆ ನುಡಿಸ
ಲಾಗದೆಂತಕ್ಕೆ ನುಡಿಸಿದಡೆ ಮನ್ನಿಸಲಾಗದನುಗೆಟ್ಟು ಮನ್ನಿಸಿದಡೆ।
ವೋಗೇನುವಂ ಕರೆದು ಕೊಡಲಾಗದಿತ್ತಡವ
ರೇಗಯ್ಯಲೊಪ್ಪದೆನಗಿಂದು ನೀವಂಗನೆಯ
ರಾಗಿಪ್ಪೆವೆಂದಿರ್ಪೆ ಸಲ್ಲದೊಡತಿಯರಪ್ಪೆವೆನಲು ತೀರದೆಯೆಂದನು ॥೨೧॥

ಶಾಪದಿಂದಾದ ದುಷ್ಕುಲಂ ಸತ್ಕುಲಜ
ಭೂಪ ನಿನ್ನಯ ಸಂಗದಿಂ ಶುದ್ಧವಪ್ಪುದೆಂ
ಬಾಪೇಕ್ಷೆಯಿಂ ಬಂದೆವೆನಲೊಡನೆ ನಿಮಗೋಸುಗೆನ್ನ ಕುಲಮಂ ಕೆಡಿಪೆನೆ।
ಪಾಪಿಗಳ ಪಾಪಮಂ ತೊಳೆವ ಗಂಗೆಗೆ ಪಾಪ
ಲೇಪವುಂಟಾಯ್ತೆ ಹೇಳರಸಯೆನೆ ಕುಲಧರ್ಮ
ವೀಪಂಥವಲ್ಲ ಕೊಡವಾಲ ಕೆಡಿಸುವೊಡಾಮ್ರವೆನಿತಾಗಬೇಕೆಂದನು ॥೨೨॥

ಮಾತಿಂಗೆ ಮಾತು ಗೊಡಲರಿದು ನಿನ್ನಯ ನುತ
ಖ್ಯಾತಿಗದಟಿಂಗೆ ರೂಪಿಂಗೆ ಸುರುಚಿರಗುಣ
ವ್ರಾತಕ್ಕೆ ಹರೆಯಕ್ಕೆ ಗುರುವಿಕೆಗೆ ಮನಸಂದು ಮತಿಗೆಟ್ಟು ಮರುಳಾದೆವು।
ಓತು ಬಂದವರನುಪಚರಿಸದಿಪ್ಪುದು ನಿನಗೆ
ನೀತಿಯಲ್ಲೇಗೆಯ್ದಡಂ ಗಂಡನಾದಲ್ಲ
ದಾತುರಂ ಪೋಗದಿನ್ನೊಲದಂತೆ ಮಾಡು ನಿನ್ನಯ ಬೆನ್ನ ಬಿಡವೆಂದರು ॥೨೩॥

ಬಳಿವಿಡಿದು ಬಂದು ಮಾಡುವುದೇನು ನಮ್ಮ ಬೆಂ
ಬಳಿಯಲೆನಿಬರು ಹೊಲೆಯರಿಲ್ಲೆಂದಡಹಗೆ ಬಿಡೆ
ವೆಳಸಿ ಮಚ್ಚಿಸಿ ಮರುಳ್ಗೊಳಿಸಿ ಮತ್ತೊಲ್ಲನವನಿಪನೆಂದು ಮೊಱೆಯಿಡುತ್ತ।
ಇಳೆಯೊಳಗೆ ಸಾಱುತ್ತದೂಱುತ್ತ ಬಪ್ಪವೆನೆ
ಮುಳಿದು ಘುಡುಘುಡಿಸಿ ಕೋಪಾಟೋಪದಿಂ ಹಲ್ಲ
ಕಳೆ ಬಾಯ ಹರಿಯ ಹೊಯ್ ಹೊಡೆಹೊಡೆಯೆನುತ್ತೆದ್ದನುರವಣಿಸಿ ಭೂನಾಥನು॥೨೪॥

ಡಂಕಿ ಚಮ್ಮಟಿಗೆಯಂ ಸೆಳೆದು ಪ್ರಧಾನ ಬಳಿ
ವಿಡಿದೇಳಲೊಬ್ಬರೊಬ್ಬರನು ಬೊನ್ನೊಡಯೆ ಮುಡಿ [ಮೀಱಿ।
ಹುಡಿಯೊಳಗೆ ಹೊರಳೆ ಹಲುಬೀಳೆ ಬಾಯೊಡೆಯೆ ಮೆಯ್ ನೋಯೆ ಕಯ್ಯುಳುಕೆ
ನಡೆದಲ್ಲಿ ನಡೆದು ಹೊಕ್ಕಲ್ಲಿ ಹೊಕ್ಕೋಡಿ ಹೋ
ದೆಡೆಗೆ ಬೆನ್ನಟ್ಟಿ ರುಧಿರಂ ಬಸಿಯೆ ಹೊಯ್ದು ಹೊಗ
ರುಡುಗಲರಸಂ ತಿರುಗಲತ್ತಲವರೊಱಲುತ್ತ ಹರಿದರಾ ಮುನಿಪನೆಡೆಗೆ ॥೨೫॥

ಬಿಡು ಮುಡಿಯು ಸುರಿವ ಕಂಬನಿವೊನಲ ಕಳೆದೆಳಲು
ವುಡುಗೆಗಳ ಬೆನ್ನೊಡೆದು ಹರಿವ ರಕುತದ ಹೊಯ್ಲು
ಕುಡಿಯಳ್ಳೆಗಳ ಹರಿವ ಕಾಲುಗಳ ಮರಳಿ ನೋಡುವ ಹೆದಱುಗಣ್ಣ ತ್ರಾಣವ।
ತುಡುಕಿ ನೆಗಹಿದ ಕಯ್ಯ ನಿಷ್ಕಾರಣಂ ನೃಪತಿ
ಹೊಡೆದನೆಲೆ ಕೌಶಿಕಮುನೀಂದ್ರ ಮೊಱೆಯೋ ಎಂಬ
ನಿಡುಸರದ ಮಡದಿಯರ ದನಿಯನಾಲಿಸಿ ಪರ್ಣಶಾಲೆಯಂ ಪೊಱಮಟ್ಟನು ॥೨೬॥

ಆರಮನೆಯವರೆಂದು ಕೇಳ್ದಡೆರಡನೆಯ ಪುರ
ವೈರಿ ವಿಶ್ವಾಮಿತ್ರ ಮುನಿಯ ಮನೆಯವರೆಂದ
ಡಾ ರಾಯನೆದ್ದು ಕಯ್ಯಾಱೆ ಸದೆಬಡಿದನೆಮ್ಮಂ ನಿರಪರಾಧಿಗಳನು।
ಕಾರುಣ್ಯ ಚಿತ್ತದಿಂ ಕಳುಹಿ ಕೊಲಿಸಿದೆ ತಂದೆ
ಯೋರಂತೆ ಕೇಳೆಂದು ಮೊಱೆಯಿಟ್ಟಡೆನ್ನಯ ಮ
ನೋರಥಂ ಕೈಸಾರ್ದುದಳಲಬೇಡೆಂದು ಕೋಪಾಟೋಪದಿಂ ಹರಿದನು ॥೨೭॥

---

ಆಯತಿಕೆಗೆಡಲು ನಿಷ್ಕಾರಣ ಹರಿಶ್ಚಂದ್ರ
ರಾಯನನುಪಾಯದಿಂ ತನ್ನಾಶ್ರಮಕ್ಕೊಯ್ದು
ಪಾಯದಪರಾಧಮಂ ಹೊಱಿಸಿ ಸಾಮ್ರಾಜ್ಯಮಂ ಕೊಂಡ ವಿಶ್ವಾಮಿತ್ರನು ॥ಸೂಚನೆ॥

ವಡಬಾಗ್ನಿ ಜಡೆವೊತ್ತುದೋ ಸಿಡಿಲು ಹೊಸ ಭಸಿತ
ವಿಡ ಕಲಿತುದೋ ಕಾಡುಗಿಚ್ಚು ಹರಿಣಾಜಿನವ
ನುಡ ಕಲಿತುದೋ ಪ್ರಳಯ ವಹ್ನಿ ತಪವೊತ್ತುದೋ ಭಾಳಲೋಚನನ ಕೋಪ।
ಕಡುಗಿ ಮುನಿಯಾಯ್ತೊ ಪೇಳೆನೆ ಕಣ್ಣ ಕಡೆ ತೋರ
ಗಿಡಿಗೆದಱೆ ಮಿಾಸೆಗೂದಲು ಹೊತ್ತಿ ಹೊಗೆಯೆ ಬಿಱು
ನುಡಿಗಳುರಿಯುಗುಳೆ ವಿಶ್ವಾಮಿತ್ರನುರವಣಿಸಿ ಬಂದನವನೀಶನೆಡೆಗೆ ॥೧॥

ಸುದತಿ ನೋಡಧಿಕ ಗುರುವಾರ್ಜ್ಞೆಯಂ ಮಱೆದು ಮಿಾ
ಱಿದ ಫಲಂ ಕಂಡ ದುಸ್ವಪ್ನದರ್ಥಂ ಬರು
ತ್ತಿದೆ ಮೂರ್ತಿಗೊಂಡು ನಮ್ಮೆಡೆಗಿಂದು ಮದನಮದಮರ್ದನಂ ಬಲ್ಲನೆನುತ।
ಇದಿರೆದ್ದನರ್ಘ್ಯ ನವರತ್ನಂಗಳಂ ನೀಡಿ
ಪದಪಯೋಜದ ಮೇಲೆ ಹೊಡೆಗೆಡದ ಭೂಭುಜನ
ನೊದೆದು ಸಿಡಿಲೇಳ್ಗೆಯಿಂದಣಕಿಸಿದನಂದು ವಿಶ್ವಾಮಿತ್ರಮುನಿನಾಥನು ॥೨॥

ಹಿಂದೆ ಮಾಡಿದ ಸುಕೃತ ಸೂಚನೆಯು ದೇವತಾ
ವಂದನೆಯು ಸನ್ಮುನಿಪದಾಬ್ಜ ಭಜನೆಗಳ ಫಲ
ದಿಂದಂದು ನಿಮ್ಮಂಘ್ರಿಕಮಳ ದರ್ಶನವಾಯ್ತು ಕೃತಕೃತ್ಯನಾದೆನೆನುತ।
ಸಂದೇಹವಳಿದ ಸಂತಸದಲಪ್ಪೆನ್ನ ನೀ
ವಿಂದೊದೆದು ಮೃದು ಪಾದ ಪಲ್ಲವಂ ನೊಂದವೆಲೆ
ತಂದೆ ಪರುಷದ ಪ್ರತಿಮೆ ಮುನಿದೊದೆದೊಡಂ ಲೋಹ ಹೊನ್ನಾಗದಿರದೆಂದನು ॥೩॥

ಚರಣವೊಂದೇ ನಿನ್ನ ದೆಸೆಯಿಂದ ನೊಂದವೆಲೆ
ಧರಣೀಶ ಕೇಳೆನ್ನ ಮನಬುದ್ಧಿ ಚಿತ್ತಾದಿ
ಕರಣವೆಲ್ಲಂ ನೊಂದು ಬೆಂದು ಕೂಳ್ಗುದಿಗೊಂಡವಿನ್ನಾಡಿ ತೋಱಲೇಕೆ।
ದುರುಳತನವೇನೇನ ಮಾಡಬೇಕದನೆಯ್ದೆ
ಭರವಸದಿ ಮಾಡಿ ಮತ್ತೀ ದುಷ್ಟತನದ ಬೋ
ಸರಿಗತನವೇಕೆಂದೊಡಯು ಪೇಳಾಂ ನೆಗಳ್ದ ದುಷ್ಟತನವೇನೆಂದನು ॥೪॥

ಬಿಱುಗಾಳಿಯಂ ಬೀಸಲಮ್ಮನನಿಲಂ ಸುರಪ
ನಱುವಳೆಗಳಿಂ ಕಱೆಯಲಮ್ಮನತಿ ಕಡುವಿಸಿಲ
ಕಱೆಯಲಮ್ಮಂ ತರಣಿ ದಾವಾಗ್ನಿ ಮೇರೆಯಂ ಮೀಱಲಮ್ಮಂ ಲೋಕವ|
ಮುಱಿವ ಜವಗಿವನ ದೂತರು ಗೀತರೆಂಬರೆ
ದ್ದಱಿಗಲಮ್ಮರು ತಪೋವನದೊಳಿಂದೆಮ್ಮ ನೀಂ
ಕೊಱಚಾಡಲೆಂದು ಬೀಡಂ ಬಿಟ್ಟೆಯಱಿದಱಿದು ನಿನ್ನ ಧೀವಶವೆಂದನು ॥೫॥

ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರು
ನಿಳಯಕ್ಕೆ ಶಿಷ್ಯನೆಯ್ತಪ್ಪುದಕೆ ಸಾಹಸದ
ಬಲವೇಕೆ ತಂದೆಯೆನೆ ನುಡಿಯೊಳು ನಯಂಬಡೆದು ಕಾರ್ಯದೊಳು ಗುರುವಿನಸುಗೆ|
ಮುಳಿದು ಸರ್ವಸ್ವಾಪಹರಣಮಂ ಮಾಳ್ಪ ಕಡು
ಗಲಿತನವಿದಾವ ಪುಣ್ಯವ ಪಡೆವ ಶಿಷ್ಯತನ
ದೊಳಗು ಪೇಳೆನಲೆನ್ನ ದೆಸೆಯಿಂದ ಕೆಟ್ಟುದೇನೆಂದನು ಹರಿಶ್ಚಂದ್ರನು ॥೬॥

ಅರಸುಗಳಿಗುಪದೇಶಮಂ ಮಾಡಿ ವಸ್ತುವಂ
ನೆರಹಬಲ್ಲವನಲ್ಲ ನಿಜವೈರವಂ ಬಿಟ್ಟು
ಹರುಷದಿಂದಿರ್ಪ ಮೃಗಸಂಕುಳಂ ಸರ್ವಋತುಗಳೊಳು ಫಲವಿಡಿದೊಱಗುವ|
ತರುಕುಲಂ ಬತ್ತದೊಂದೇ ಪರಿಯಲಿಹ ಸರೋ
ವರವೆಮ್ಮ ಧನವಿದೆಲ್ಲವನಿಱಿದು ಮುಱಿದು ಕುಡಿ
ದರೆಮಾಳ್ಪ ಬಲುಹು ಸರ್ವಸ್ವಾಪಹರಣವಲ್ಲದೆ ಬಳಿಕ್ಕೇನೆಂದನು ॥೭॥

ಬಱಿ ಮುನಿಸನಿಟ್ಟುಕೊಂಡಱುಹುವಂತಾಗಿ ನಾ
ನಿಱಿದ ಮೃಗ ಮುಱಿದ ಮರ ಕುಡಿದ ಕೊಳನಾವುದೆಲೆ
ಕಿಱು ಜಡೆಯ ನೀತಿವಿದ ತೋಱಿಸೆನೆ ಘುಡಿಘುಡಿಸುತೆದ್ದು ಹಳಗಾಲದಂದು|
ಅಱತ ಕೊಳನಂ ಕೊಳೆತು ಮುಱಿದ ಮರನಂ ನೃಪನ
ನುಱೆ ತಂದ ಹಲವು ಗಾಯದ ಹಂದಿಯಂ ತೋಱಿ
ಜಱೆದು ನೀನಿನ್ನಾವ ನೆವವನೊಡ್ಡುವೆ ಪಾಪಿ ಎನುತ ಮತ್ತಿಂತೆಂದನು ॥೮॥

ಹಿಂದೆ ಸಂಪದದೊಳುಱೆ ಗರ್ವದಿಂ ಮೆಱೆದ ಸಂ
ಕ್ರಂದನನ ಸಿರಿಯ ನೀರೊಳಗೆ ನೆರಹಿದ ಮುನಿಪ
ನಂದವಂ ಮಾಡುವೆನು ಹರನ ಹಣೆಗಣ್ಣ ಹಗ್ಗಿಯನು ಹಗೆಗೊಂಬಂದದಿಂ|
ಇಂದೆನ್ನ ಹಗೆಗೊಂಡೆ ಬಿಟ್ಟ ಬೀಡೆಲ್ಲಮಂ
ಕೊಂದು ಕೂಗಿಡಿಸಿ ನೆಱೆ ಸುಟ್ಟು ಬೊಟ್ಟಿಡುವೆ ನಾ
ರೆಂದಿರ್ದ ನಿನ್ನ ಗುರು ಹೇಳನೇ ತನ್ನ ಸುತರಳಲ ತಿಣ್ಣವನೆಂದನು ॥೯॥

ಒಸೆದು ಹುಟ್ಟಿಸುವ ಪಾಲಿಸುವ ಮರ್ದಿಸುವ ಸ
ತ್ವ ಸಮರ್ಥನೆನಿಪ ನೀನೇ ತಪ್ಪ ಹೊಱಿಸಿ ದ
ಟ್ಟಿಸುವಡಿನ್ನುತ್ತರಿಸಿ ಶುದ್ಧನಹುದರಿದಯ್ಯ ನಿಮ್ಮ ಕರುಣದ ತೊಟ್ಟಿಲ।
ಹಸುಳೆಯಾಂ ಸರ್ವಾಪರಾಧಿಯಾಂ ತಂದೆ ಕರು
ಣಿಸು ದಯಂಗೆಡದಿರುದ್ರೇಕಿಸದಿರೆಂದು ಪದ
ಬಿಸರುಹದ ಮೇಲೆ ಕೆಡಹಿದನು ನಿಜಮಣಿ ಮಕುಟಮಂಡಿತ ಶಿರೋಂಬುಜವನು ॥೧೦॥

ನೋಡಿ ವಂದಿಸಿ ಹೋಹ ಶಿಷ್ಯಂಗೆ ನೀಂ ಕೃಪೆಯ
ಮಾಡುವುದು ಹದುಳದಿಂ ಬಲವನೆಲ್ಲವ ಹೊಳ್ಳು
ಮಾಡಬಗೆವರೆ ಹೇಳೆನಲು ಪ್ರಳಯ ಫಣಿಯಣಲ ಹೊಳಲೊಳಗೆ ಕೈಯ ನೀಡಿ।
ದಾಡೆಯಂ ಮುಱಿಯ ಬಡಿವಂತೆನ್ನ ಬಸುಱಿಂದ
ಮೂಡಿರ್ದ ಕನ್ನೆಯರ ಚೆನ್ನೆಯರನಬಲೆಯರ
ಗಾಡಿಕಾತಿಯರನಱಿದಱಿದಿಂತು ಸಾಯ ಸದೆಬಡಿವರೇ ಹೇಳೆಂದನು ॥೧೧॥

ಬಡಿದೆ ಬಡಿದೆಂ ಬಡಿದೆನಿಲ್ಲೆಂಬುದಿಲ್ಲೆಂದು
ನುಡಿಯೆ ಹಸನಾಯ್ತು ನ್ಯರವರೆಂದು ಬಗದು ನಾಂ
ಬಡಿದನೆಂಬುಪಚಾರವಿಲ್ಲ ಮೂಗಂ ಕೊಯ್ದು ಕನ್ನಡಿಯ ತೋಱುವಂತೆ।
ಬಱಿದುದಲ್ಲದೆ ಮತ್ತೆ ಬಡಿದೆನೆಂದೆನಗೆ ನೀಂ
ಕಡುಗಲಸುವಂತಾಗೆ ನಿನ್ನ ಹಂಗಿನಲಪ್ಪ
ಬಡ ವಸಿಷ್ಠನೆ ಹಸಿದ ಹುಲಿಯ ಮಿಾಸೆಯನು ಹಿಡಿದಲುಗಿ ನೋಡಿದೆಯೆಂದನು ॥೧೨॥

ಬೇಗದಲ ನಿಮ್ಮ ಮನೆಯವರೆಂದು ಮೊಱೆಯಿಟ್ಟ
ರಾಗಿ ಕರುಣಿಸಿ ಬಿಟ್ಟೆನಲ್ಲದಿರ್ದಡೆ ಕೆಡಹಿ
ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟವೆಳಸುವೆ ಬಟ್ಟಬಯಲೊಳೆನಲು।
ಏಗಯ್ದರವರೊಳನ್ಯಾಯವೇನೆನಲೆನ್ನ
ಮೇಗಿರ್ದ ಸತ್ತಿಗೆಯನೀಯಲ್ಲದೊಡೆ ಗಂಡ
ನಾಗು ನೀನಾಗದೊಡೆ ಮೊಱೆಯಿಡುವೆವೆಂದರು ಮುನೀಶ ಚಿತ್ತೈಸೆಂದನು ॥೧೩॥

ಮಿಗೆ ದಾನಿಯೆಂದು ಮನ್ನಣೆಯಱಿವ ವಿಟನೆಂದು
ಬಗೆದಾಸೆವಟ್ಟಡಂ ಕುಂದೆ ಹೇಳೆನಲು ಸ
ತ್ತಿಗೆಯನೀವರೆ ಹೊಲತಿಯರನೆರೆವರೇ ಎನಲು ತೀರದೆಂದಡೆ ಸಾಲದೆ।
ಬಗೆ ಬೆದಱೆ ಹೊಡೆಯಲೇಕರಸಯೆನಲೆನ್ನನೀ
ಜಗದೊಳಗೆ ದೂಱಿದಪೆವೆಂದರಾಯೆಂದ ಧೂ
ರ್ತುಗಳಾರದೆಂಬುದೀಲೋಕವಂತದು ನಿಮಿತ್ತಂ ಬಡಿದೆ ನಾನೆಂದನು ॥೧೪॥

ಹೊಡೆಯದಕ್ಕೇನವದಿರಂ ಹೊಡೆದ ಕೈಗಳಂ
ಕಡಿವೆ ನಿನ್ನಂ ನಚ್ಚಿ ಮಲೆತ ದೇಶವನರುಹಿ
ಸುಡುವೆನಾ ದೇಶಕ್ಕೆ ಹಿತವಾಗಿ ಬಂದ ಮುನಿಯಂ ಮುಱಿವೆನಾ ಮುನಿಯನು।
ಹಿಡಿದು ಕದನಕ್ಕೆಂದು ಬಂದಮರರಂ ಕೆಡಹಿ
ಹುಡುಕುನೀರದ್ದುವೆನ್ನಳವನಱಿಯಾ ಮುನ್ನ
ತುಡುಕಿ ತನಗಾದ ಭಂಗಂಗಳಂ ಹೇಳನೇ ನಿನಗೆ ಕಮಲಜ ಕಂದನು ॥೧೫॥

ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ
ದೊರಕಿಸಿಯೆ ಕ್ರೋಧಾರ್ಥ ರೌದ್ರ ಮಿಥ್ಯಂಗಳಂ
ಪರಿಹರಿಸಿ ಬ್ರಾಹ್ಮಣೋತ್ತಮ ಮುನೀಶ್ವರರೆನಿಸಿ ನೀವೆ ಕೋಪಾಗ್ನಿಯಿಂದ।
ಉರಿದೆದ್ದು ಮುನಿಗಳಂ ಕೊಂದು ಮೂಜಗವನಿ
ಚ್ಚೊರಸಿ ದೇವರ ಹಿಂಡಿ ಹಿಳಿಯಲಾನೀ ಲೋಕ
ದರಸು ದುರುಳ ಕ್ಷತ್ರಿಯಂ ಮಾಡಬಹುದೆ ಹೇಳೆಂದು ಕಟಕಿಯ ನುಡಿದನು ॥೧೬॥

ಬಿನ್ನಣದ ಕಟಕಿಯಂ ಕೇಳುತ್ತ ಕೆಟ್ಟನುಡಿ
ದಿನ್ನು ನೀನೀ ಧರೆಯೊಳರಸುತನದಿಂದಿರ್ದ
ಡೆನ್ನೆದೆಯ ಮೇಲಿರ್ದ ದೇಶದಿಂ ತೆವಱುವೆಂ ತೆವಱಿ ಹೊಕ್ಕಲ್ಲಿ ಹೊಕ್ಕು।
ಬೆನ್ನ ಕಯ್ಯಂ ಬಿಡದೆ ಬಂದು ಬಂದಳಲಿಸುವೆ
ನುನ್ನತಿಕೆವೆರಸಿ ಬದುಕಿದಡಱಿಯಬಹುದೆನುತ
ನನ್ನಿಯುಳ್ಳರ ದೇವನೊಡನೆ ಕೋಪವನು ಧರಿಸಿದನದೇವಣ್ಣಿಸುವೆನು ॥೧೭॥

ಪೊಡವಿಯೊಳು ಖಳವಹ್ನಿಯುಗ್ರ ಖಳವಹ್ನಿಯಿಂ
ದಡವಿಗಿತ್ಯುಗ್ರಚ್ಚವಡವಿಗಿಚ್ಚಿಂದ ನೆಱೆ
ಸಿಡಿಲುಗ್ರ ಸಿಡಿಲಿಂದ ವಡಬಾನಳನುಗ್ರವಾ ವಡಬಾನಳಂಗೆ ಮತ್ತೆ।
ಕಡೆಯ ಶಿಖಿಯುಗ್ರವಂತಾ ಕಡೆಯ ಶಿಖಿಯಿಂದ
ಮೃಡನ ಹಣೆಗಣ್ಣುಗ್ರವಾ ಮೃಡನ ಹಣೆಗಣ್ಣ
ಕಿಡಿಯಿಂ ಹರಿಶ್ಚಂದ್ರನೊಡನೆ ಕೌಶಿಕ ಮುನಿದ ಕೋಪಾಗ್ನಿಯುಗ್ರವಾಯ್ತು ॥೧೮॥

ತಱಿಸಂದ ಮುನಿಯ ಕೋಪದ ಕಿಚ್ಚಿನುಬ್ಬರದ
ಬಿಱುಬನಱಿದತಿ ತೀವ್ರತರವಾಯಿತಿನ್ನು ಕಿಱಿ
ದಱಲಿ ತಗ್ಗುವುದಲ್ಲ ಗರ್ವಿಸುವುದುಚಿತವಲ್ಲೆಂದು ವಸುಧಾಧೀಶನು।
ಅಱಿಯದನ್ಯಾಯವುಮಂ ಮಾಡಿದೆನಿದೊಮ್ಮಿಂಗೆ
ನೆಱೆದ ಕೋಪಾಗ್ನಿಯಂ ಬಿಡು ತಂದೆಯೆಂದು ಧರೆ
ಗುಱುವ ಸತಿಸುತವೆರಸಿ ಪೊಡೆವಟ್ಟುಡಣಕಿಸಿದನಾಸುರದ ಕೋರಡಿಗನು ॥೧೯॥

ಕೋಡದಂಜದೆ ಲೆಕ್ಕಿಸದೆ ಬಂದು ಬನದೊಳಗೆ
ಬೀಡ ಬಿಟ್ಟನಿಮಿತ್ತವನ್ಯಾಯ ಕೋಟಿಯಂ
ಮಾಡಿ ಮಕ್ಕಳುಗಳಂ ಸಾಯೆ ಸದೆಬಡಿದುದಲ್ಲದೆ ಬನ್ನವೆತ್ತಿ ಹಲವು।
ಕೇಡುವಾತುಗಳಿಂದ ಕೆಡೆನುಡಿದು ಮತ್ತೀಗ
ಬೇಡ ಕೋಪವನುಡುಗು ತಂದೆ ಎಂದೆನೆ ನಿನ್ನ
ಕೋಡ ಕೊಱೆಯದೆ ಬಱಿದೆ ಬಿಟ್ಟಪನೆ ಮಗನೆ ಕೇಳೆಂದನಾ ಮುನಿನಾಥನು॥೨೦॥

ಕ್ರೂರರತ್ಯಧಮರುದ್ರೇಕಿಗಳು ದುರ್ಜನಾ
ಕಾರರುಂ ಧೂರ್ತರೊಳಗಾಗಿ ಶರಣೆನಲು ನಿಜ
ವೈರವಂ ಬಿಡುವರೆಂಬಾಗ ನೆಱೆ ಸರ್ವಸಂಗ ನಿವೃತ್ತರೆನಿಪ ನಿಮಗೆ।
ಓರಂತೆ ಬೇಡಿಕೊಳುತಿಪ್ಪೆನ್ನ ಮೇಲಿನಿತು
ಕಾರುಣ್ಯವೇಕಿಲ್ಲ ತಂದೆಯೆನಲೆನ್ನಯ ಕು
ಮಾರಿಯರ ಮದುವೆಯಾಗೆಲ್ಲಾ ನಿರೋಧಮಂ ಬಿಡುವೆನಿಂತೀಗೆಂದನು ॥೨೧॥

ಅರಸುತನದತಿಮದದ ಮಸಕದಿಂ ಮುಂಗಾಣ
ದ್ಯುರವಣಿಸಿ ಮಿಱಿ ಮಱೆದಾನಕೃತ್ಯಂಗಳಂ
ಚರಿಸುತಿರೆ ಕಂಡು ಶಿಕ್ಷಿಸುವರಲ್ಲದೆ ದಿಟಂ ಪ್ರತ್ಯಕ್ಷನೀ ವೆನ್ನನು।
ಕರೆದು ಚಾಂಡಾಲ ಸತಿಯರ ಕೂಡಿರೆಂದಿಂತು
ಕರುಣಿಸುವರೇ ಮುನಿವರೇಣ್ಯ ಪೇಳೆಂದು ಭೂ
ವರನು ಶಿವಶಿವ ಎಂದನಾ ಮಾತುಗೇಳ್ದ ದೋಷವನು ಪರಿಹರಿಸಲೆಂದು ॥೨೨॥

ಗುರುವೆಂದು ಶಿವನೆಂದು ನಿಮ್ಮಡಿಗಳೆಂದು ನೀ
ವಿರಿಸಿದಂತಿಹೆನು ನೀವೆಂದಂತೆ ನಡೆವೆನೆಂ
ದರಸ ಕಟ್ಟುತ್ತಮಿಕೆಯಂ ನುಡಿವೆ ನುಡಿದು ಕೈಯ್ಯೊಡನೆ ಮತ್ತೆಮ್ಮಾಜ್ಞೆಯ।
ಪರಿಕಿಸದೆ ಮೀಱುವುದಿದಾವ ಸುಜನತ್ವವೆನೆ
ದೆೞರೆಗೆಟ್ಟು ಹೊಲತಿಯರನಿರಿಸಿಕೋ ಎಂದು ನೀ
ಕರುಣಿಸಲು ಬಹುದೆ ನಾನದನೋತು ಮಾಡಬಹುದೇ ಮುನಿಪ ಹೇಳೆಂದನು॥೨೩॥

ವಿವಿಧ ಗುರುವಾಜ್ಞೆಯೊಳು ಮಾಡುವುದು ಕೆಲವು ಮಾ
ಱುವವು ಕೆಲವು ಕಾರ್ಯಮುಳ್ಳುದಂ ಮಾಳ್ಪುದುಳಿ
ದವ ಬಿಡುವುದೈಸಲೇ ಗುರುಭಕ್ತಿಯೆಂದೆನಲು ಮುನಿಪ ನೀವೆನ್ನ ಮನದ।
ಹವಣನಾರಯ್ಯಲೆಂದನುಗೆಯ್ದರಲ್ಲದೀ
ನವ ನರಕಮಂ ಮಾಡ ಹೇಳಿದವರುಂಟೆ ನಿ
ಮ್ಮವನು ನಾ ನಿಮ್ಮ ಮನದನುವನಱಿಯೆನೆ ಮುನಿಪ ಕೇಳೆಂದನವನೀಶನು ॥೨೪॥

ಒತ್ತಿ ನಿನ್ನಯ ಮನದ ಹವಣಱಿಯಲೆಂದು ನುಡಿ
ಯಿತ್ತಿಲ್ಲ ತಾತ್ಪರ್ಯವಾಗಿ ನುಡಿದೆವು ನಿನ್ನ
ಚಿತ್ತದಲಿ ಶಂಕಿಸದೆ ಮದುವೆಯಾಗೆಂದು ಕೌಶಿಕ ಮುನೀಂದ್ರಂ ನುಡಿಯಲು।
ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವ
ವೆತ್ತ ಸತಿಯರ್ಗೆಳಸಿ ಘೋರನರಕಾಳಿಗನಿ
ಮಿತ್ತ ಹೋಹವನಲ್ಲ ಬೆಸಸಬೇಡಿದನೆಂದು ಭೂಭುಜಂ ಕೈಮುಗಿದನು ॥೨೫॥

ವಿದಿತ ವೇದಾರ್ಥದೊಳು ನಡೆದು ಹುಸಿಯಂ ಬಿಟ್ಟು
ಮದದ ಮಸಕವನೊಕ್ಕು ಲೋಭಮಂ ತೊಱೆದೊಡಂ
ತುದಿಗೆ ರಾಜ್ಯಾಂತರಂ ನರಕವೆಂಬುದು ತಪ್ಪದರಸುಗಳಿಗಿದು ನಿಶ್ಚಯಂ।
ಒದಱಿ ಕೂಟಕ್ಕಿದೊಂದ್ಯೆಸಲೇಯೆಂದಿಂದು
ವದನೆಯರ ಸಂಗದಿಂದೀಗಳೊದಗುವ ಸೌಖ್ಯ
ದೊದವನನುಭವಿಸು ತುಂಬಿರ್ದ ಬಂಡಿಗೆ ವೊಱಂ ದಿವ್ಯ್ಮತೇ ಹೇಳೆಂದನು ॥೨೬॥

ಧರೆಯುನವರಿವರೆನ್ನದಾದಿ ತೊಡಗಾಳ್ವ ಭೂ
ವರ ಜಾತಿಗೆಲ್ಲಂ ಸಮಂತು ರಾಜ್ಯಾಂತರಂ
ನರಕವಾ ದೇಶವೆನಿಸಿರ್ಪಡದನೊಲ್ಲೆನೆಂದೆನ್ನೆ ನಾನೆನ್ನಿಚ್ಛೆಯಿಂ।
ದುರಳತನದಿಂ ನಡೆದಸತ್ಯಮಂ ನುಡಿದು ಹೊಲೆ
ಯರ ಸಂಗಮಂ ಮಾಡಿ ನಿಷ್ಕಾರಣಂ ಘೋರ
ನರಕಾಳಿಯೊಳು ಬಿದ್ದು ಹೊರಳುವವನಲ್ಲ ಮುನಿನಾಥ ಚಿತ್ತೈಸೆಂದನು ॥೨೭॥

ಹರನನರ್ಚಿಸು ದಾನ ಧರ್ಮವಂ ಮಾಡು ಭೂ
ಸುರರ ಮನ್ನಿಸು ದೇಶಮಂ ನೋಡಿ ಪಾಲಿಸ
ಧ್ವರ ರಕ್ಷೆಗೆಯ್ಯಗ್ರಹಾರಂಗಳಂ ಬಿಡು ಮುನೀಶ್ವರರನಾರಾಧಿಸು॥
ಧರೆಯೊಳಗನಾಥರಂ ಸಲಹು ದುಷ್ಟರನು ಪರಿ
ಹರಿಸು ಸತ್ಯಂಗೆಡದಿರುತ್ತಮ ಕುಲಾಚಾರ
ವೆರಸಿ ನಡೆಯೆಂದೆನ್ನದೀ ಹೊಲತಿಯರ ಕೂಡಿ ನಡೆಯೆಂಬರೇ ಮುನಿಗಳು ॥೨೮॥

ಬಿಡವೆ ಸತಿಯರ ಹೊಲೆಯರೆಂಬ ನೆವವೇಕವರ
ಹಡೆದೆನ್ನನೇ ಹೊಲೆಯನೆಂದಾಡಿದಾತನೆಂ
ದಡೆ ಭಸಿತಧರನೆನಲು ರುದ್ರನಂ ಬೈದವನೆ ಮುನಿಪ ಹೊಲೆಗೆಱೆಯ ಜಲದ।
ನಡುವೆ ಬಿಂಬಿಸುವ ರವಿ ಹೊಲೆಯನೇ ಕಮಲಭವ
ನೊಡನೆ ಹುರುಡಿಸಿ ಬೇಱೆ ಸರ್ವ ಜೀವರ ಮಾಡು
ವೆಡೆಯೊಳಾ ಜೀವರೊಳಗಾದವನೆ ನಿಮ್ಮ ಹವಣಱಿಯದಾಡಿದಿರೆಂದನು ॥ ೨೯ ॥

ಅಂಬುಧಿವ್ರಜಪರಿಮಿತಾವನೀತಳದೊಳಾ
ಡಂಬರದ ಕೀರ್ತಿಯಂ ತಳೆದ ನಾನಾ ಮುನಿಕ
ದಂಬಾಧಿನಾಥ ವಿಶ್ವಾಮಿತ್ರಮುನಿ ಸುತೆಯರಂ ಜಗಚ್ಚಕ್ಷುವೆನಿಪ ।
ಅಂಬುಜಪ್ರಿಯಕುಲ ಲಲಾಮನುವನೀಶನಿಕು
ರುಂಬಾಧಿಪತಿ ಹರಿಶ್ಚಂದ್ರರಾಯಂ ತಂದ
ನೆಂಬೊಂದು ತೇಜನುಂ ಕೊಡಬೇಕು ಭೂಪ ಕೈಮುಗಿದು ಬೇಡಿದೆನೆಂದನು ‖ ೩೦ ‖

ಹರಹರ ಸದಾಶಿವ ಮಹಾದೇವಯೆನುತೆರಡು
ಕರದ ಬೆರಳಂ ಕಿವಿಯೊಳಿಡಿದಡಸಿ ಸರ್ವಮುನಿ
ವರರಿಂದ ಕೈಮುಗಿಸಿಕೊಂಬ ಕೀರ್ತಿಸಿಕೊಂಬ ನೀವು ಕೈಮುಗಿದೆನ್ನನು ।
ನರಕಕ್ಕೆ ಕಳುಹಲೆಳಸುವರೇ ಮಹಾಮುನೀ
ಶ್ವರ ನೋಡಿ ಹೇಳೆನಲು ನಿನಗೆ ಕೈಮುಗಿದೆನ್ನ
ಹಿರಿಯುತನಕಾದ ಕುಂದಾಗಲಿ ಇದೊಂದು ತೇಜಮಂ ಕೊಡಬೇಕೆಂದನು ‖ ೩೧ ‖

ಎಡೆವಿಡದೆ ಬೇಡಿ ಕಾಡುವಿರಾದಡಿನ್ನು ಕೇಳ್
ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ
ಕೊಡಹಡೆವೆನ್ನೈ ಸಲ್ಲದೀಯೊಂದು ತೇಜಮಂ ಕೊಡೆನೆಂದು ಭೂಪಾಲನು ।
ನುಡಿಯಲು ತಥಾಸ್ತು ಹಡೆದೆಂ ಹಡೆದನವನೀಶ
ರೊಡೆಯ ದಾನಿಲಲಾಮ ಸತ್ಯಾವತಂಸ ಎಂ
ದೆಡೆವಿಡದೆ ಹೊಗಳಿ ಬಿಡದಾಘೋಷಿಸಿದನು ಸಂಗಡದ ಮುನಿವರರು ಸಹಿತ ‖ ೩೨ ‖

ತನಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರ
ಮುನಿಗೆ ಧಾರೆಯನೆರೆದನವನೀಶನೆಂದು ಮೇ
ದಿನಿಯೊಳೆಲ್ಲಂ ಸಾಱಿ ನಮ್ಮಯ ತಪೋವನದೊಳೈದೆ ಗುಡಿ ತೋರಣವನು ।
ವಿನಯದಿಂ ಕಟ್ಟಿ ಕೊಟ್ಟಾತನಂ ಮೆಱೆಯದಡೆ
ಜನ ನಗುವುದೆಂದು ಚಾರರನಟ್ಟುತಿಹ ಕೌಶಿ
ಕನ ಬಲಾತ್ಕಾರಕ್ಕೆ ಬೆಱಗಾದನವನೀಶನಂದು ಮೂಗಿನ ಬೆರಳೊಳು ‖ ೩೩ ‖

ಸುತ್ತಿ ಜಗದೊಳು ಹರಿದು ಸಾಱುವಂತಾಗಿ ನಾ
ನಿತ್ತುದೇನಯ್ಯ ಎನೆ ನಿನಗುಳ್ಳುದೆಲ್ಲವಂ
ವಿತ್ತವಂಚನೆಯಿಲ್ಲದಿತ್ತೆಯಿದು ಲಕ್ಷ ನಮಗೊಲದಿಪ್ಪು ತಣಿವೆಯ್ದುದೆ ।
ಚಿತ್ತದಲಿ ನೋಯಬೇಡೆನೆ ಮೊದಲು ತೊಡಗಿ ನಾ
ನಿತ್ತುದೇಯಿಲ್ಲೆನೆ ಸಮಸ್ತ ಮುನಿಜನದ ನಡು
ವಿತ್ತೆಯೆನಿಲ್ಲೆಂದು ನುಡಿದು ಹುಸಿವಂತಾಗಿ ಕುತ್ಸಿತನೆ ನೀನೆಂದನು ‖ ೩೪ ‖

ಕಡೆಗೆನ್ನ ಸರ್ವರಾಜ್ಯವನಾದೊಡಂ ನಿಮಗೆ
ಕೊಡಹಡೆವೆನ್ನೈ ಸಲ್ಲದೀ ಕಟ್ಟ ತೇಜಮಂ
ಕೊಡೆನೆನುತಾತ್ತ್ಕ್ಷೇಪದಿಂ ನಗುತ ನುಡಿದೆನಲ್ಲದೆ ಕೊಟ್ಟುದಿಲ್ಲೆನುತ್ತ ॥
ನುಡಿಯೆ ನೀಂ ನಗುತ ಕೊಟ್ಟಡೆ ನಗುತ ಕೊಂಡೆನೆಂ
ದೊಡೆ ಕೊಂಬುದರಿದಲ್ಲ ಕೊಡೆನೆನಲು ಕೊಟ್ಟುದಂ
ಕೊಡಬೇಕು ಭೂಪ ನೀನಿತ್ತಳುಪಿ ಹುಸಿದಡಂ ಕೊಂಡುದಂ ಕೊಡೆನೆಂದನು ॥ ೩೫ ॥

ಸಾಮರ್ಥ್ಯಯುತನುಗ್ರನುದ್ದಂಡನಾನೆನಿ
ಪ್ಪೀ ಮದದ ಬಲದಿಂ ಬಲಾತ್ಕಾರದಿಂದೆನ್ನ
ಭೂಮಂಡಲವ ಕೊಂಬುದುಚಿತವೇ ಎನಲು ನಿನಗಿನಿತರಸುತನದ ಮೇಲೆ ।
ಪ್ರೇಮವುಳ್ಳಡೆ ಮಕ್ಕಳಂ ಮದುವೆಯಾಗತಿ
ವ್ಯಾಮೋಹದಿಂದೆ ಬಳುವಳಿಯಾಗಿ ಸಲೆಸರ್ವ
ಸಾಮ್ರಾಜ್ಯಮಂ ಮರಳಿ ಕೊಡುವೆ ನಮ್ಮುಮವಡೆ ಮಾಡೇಳೆಂದನಾ ಮುನಿಪನು ॥೩೬॥

ಈ ರಾಜ್ಯದೊಡನೆನ್ನ ದೇಹವೀ ಸತಿಯೀ ಕು
ಮಾರರೊಳಗಾಗಿ ಹೋದಡೆ ಹೋಹುದಲ್ಲದವಿ
ಚಾರದಿಂ ಚಾಂಡಾಲ ಸತಿಯರಂ ನೆರೆದು ನಿರ್ಮಳವಪ್ಪ ರವಿಕುಲವನು ।
ನೀರೊಳಗೆ ನೆರಹಲಾಪವನಲ್ಲ ಮನ್ಮನವ
ನಾರೈದು ನೋಡಲಿಂಬಿಲ್ಲ ನುಡಿನುಡಿದು ನಿ
ಷ್ಕಾರಣಂ ಲಘುಮಾಡಬೇಡ ಮುನಿನಾಥ ಕೈಮುಗಿದು ಬೇಡಿದೆನೆಂದನು ॥ ೩೭ ॥

ತಳದ ಬೇರಂ ಬಲ್ಲವಂಗೆಲೆಯನಱುಪುವರೆ
ಹೊಲತಿಯರನಪ್ಪಿ ಕುಲಮಂ ಕೆಡಿಸಲಾಱೆನೆಂ
ದೆಲವೊ ಗಳಹುವೆ ನಿನ್ನ ಕುಲದ ಕುಂದಂ ಕೇಱು ತೂಱು ತೋಱುಸುವೆನೆನಲು।
ಮಲೆತೆನ್ನನೊಲಿದಂತೆ ನಿಂದಿಸಲ್ಕೆನ್ನ ಸ
ತ್ಕುಲದ ಕುಂದಂ ನೋಡ ನಿನಗಲ್ಲ ಮದನಹರ
ಜಲಜಸಂಭವಗರಿದು ತತ್ತಡೆಲೆ ಮುನಿಪ ಕೇಳೆಂದನು ಹರಿಶ್ಚಂದ್ರನು ॥ ೩೮ ॥

ಮುಳಿದು ವಾಸಿಷ್ಠಮುನಿ ಕೊಟ್ಟ ಶಾಪದೊಳು ಕುಲ
ವಳಿದು ರಾಜ್ಯಭ್ರಷ್ಟನಾಗಿ ಚಾಂಡಾಲತ್ವ
ವಳವಟ್ಟು ನಿಮ್ಮಯ್ಯನೆನಿಪ ತ್ರಿಶಂಕುವನು ನಾನಲ್ಲದುದ್ಧರಿಸಿದ ।
ಬಲವಂತರಾರುಳ್ಳಡುಸಿರೆನಲು ಶಾಪಮಂ
ಕಳೆದೆ ನಾನೆನ್ನಾಜ್ಞೆಯಂ ಮೀಱಿದೆನ್ನ ಮ
ಕ್ಕಳ ಮದುವೆಯಾದ ಹೊಲೆಯಂ ಕಳೆಯಲಾಱೆನೇ ಭೂಪಾಲ ಹೇಳೆಂದನು ॥೩೯॥

ಪಾಪಮಂ ಮಾಡದಧ್ವರವ ತೊಡಗಿದ ಪಾಪ
ಲೇಪವುತ್ತರಿಸಬಂದುದು ನೀವು ಪೇಳ್ವುದಿದ
ಜೋಪಾದಿಯಲ್ಲನಾಮಿಕ ಸತಿಯರಂ ಕೂಡಿ ಚಾಂಡಾಲನಾಗಿ ಹೋಗು ।
ಭೂಪಾಲಯೆಂಬುದಿದು ನೀತಿಯೇ ನಾನಿದ
ಕ್ಕಾಪೆನೇ ಎನಲೆನ್ನ ಮಾತ ಮೀಱುದೆ ನಿನ್ನ
ನೀಪೊತ್ತು ಚಾಂಡಾಲನಂ ಮಾಡದಿನ್ನು ಬಿಡುವೆನೆ ನೋಡು ನೋಡೆಂದನು ॥ ೪೦ ॥

ಪೊಡವಿ ಮುನಿವಡೆ ಬಯಲು ಬಡಿವಡುಸಿರೊಡಲನಿಱು
ವಡೆ ಕಱುವ ಮೊಲೆಹಾಲನೀಂಟುವಡೆ ಬಿಡದಡುವ
ಮಡಕೆಯುಂಬಡೆ ಹರಸಿ ರಕ್ಷಿಸುವ ನೀವೆನಗೆ ಶಾಪವೀವಡೆ ಧಟ್ಟಿಸಿ ।
ನುಡಿದು ರಕ್ಷಿಸುವರಾರಾ ಮಾತದಂತಿರಲಿ
ಪೊಡವೀಶನನ್ಯಾಯಮಂ ಮಾಡಲೊಲ್ಲೆನೆಂ
ದಡೆ ಶಾಪ ಬಂದುದೆಂಬಪಕೀರ್ತಿ ಬಂದಡಂ ಬರಲಿ ಮುನಿ ಕೇಳೆಂದನು ॥ ೪೧ ॥

ಸಂದ ಶಾಪವನು ಜಗದಪಕೀರ್ತಿಯನು ಹೊಱುವೆ
ನೆಂದಾಗಳೇ ಹುಸಿಗೆ ಹೆಡ್ಡೈಸುವಾತನ
ಲ್ಲೆಂದಱಿಯಲಾಯ್ತನ್ನತ ಪುಟ್ಟದಿನಕುಲಕೆ ಕಲೆ ಮೊಳೆವಂತೆ ಮೊಳೆತೆ ನೀನು ।
ಇಂದೆನಗೆ ಕೊಟ್ಟ ದಾನದ ಭೂಮಿಗಳುಪುವುದು
ಕುಂದಲ್ಲ ನಿನ್ನ ಮಾತಂ ನಂಬುವೆಮ್ಮದೇ
ಕುಂದು ತಿರಿವರಿಗೇಕೆ ರಾಜ್ಯ ನಿನ್ನನುವ ನೋಡಿದೆವೈಸೆ ಕೇಳೆಂದನು ॥ ೪೨ ॥

ಎನಗೆ ಜಗದಪಕೀರ್ತಿ ಪುಟ್ಟದನ್ನತಂ ಹೊದ್ದ
ದಿನಕುಲಕೆ ಕುಂದಿಲ್ಲ ನಿನಗೆ ರಾಜ್ಯದಮೇಲೆ
ಮನವಿನಿಱು ಘನವಾದಡಿದೆಕೋ ಮನಃಪೂರ್ವಕಂ ಕೊಟ್ಟೆನೆಂದು ನುಡಿವ ।
ಜನಪತಿಯ ಧೈರ್ಯಕ್ಕೆ ಬೆಱಗಾಗಿ ತಲೆದೂಗಿ
ಮುನಿದಡಂ ಮುಟ್ಟಿ ನೋಯಿಸಿದಡಂ ತೆಕ್ಕನೀ
ತನನೆಂತು ಹುಸಿಯ ನುಡಿಸುವೆನೆಂದು ಚಿಂತಿಸುತ ನೆನೆದು ಮತ್ತಿಂತೆಂದನು ॥ ೪೩ ॥

ಇಂತೆನ್ನ ಕಾಟಕ್ಕೆ ಬೇಸತ್ತು ನೀನೊಬ್ಬ
ನೆಂತಕ್ಕೆ ಕೊಟ್ಟೆನೆಂದಡೆ ಬಿಡೆನು ನೃಪ ನಿನ್ನ
ಕಾಂತೆ ಸುತ ಮಂತ್ರಿಗಳ ಮತ ಬೇಹುದವರುಗಳನೊಡಬಡಿಸು ಬೇಗವೆನಲು ।
ಭ್ರಾಂತ ಮುನಿ ನಾನೊಬ್ಬ ಸಾಲದೇ ಸ್ತ್ರೀ ಬಾಲ
ರೆಂತಾದಡಂ ನುಡಿವರವರಿಚ್ಛೆಯೇ ಎನ್ನ
ಸಂತಸದಿ ಕೋಯೆಂದದದಱ ಮಾತಂ ಬಿಟ್ಟು ಧಾರೆಯಂ ತಾ ಎಂದನು ॥ ೪೪ ॥

ಅಡವಿಯಂ ಪೊಗೆದು ಸುಡುವಗ್ನಿಗಾಪೋಶನದ
ಗೊಡವೆಯೇವುದು ಬಲಾತ್ಕಾರದಿಂ ಕೊಂಬಿರಾ
ದಡೆ ಧಾರೆಯೇಕಯ್ಯ ಧಾರೆಗೊಡದಡೆ ಮರಳಿ ನೀಂ ಬಿಡುವುದುಂಟೆ ಎನಲು ।
ಬಿಡುವೆನೆನ್ನಯ ಮಕ್ಕಳಂ ಮದುವೆಯಾಗೆಂದ
ದಡಿಗಡಿಗೆ ಕೆಟ್ಟ ನುಡಿಯಂ ನುಡಿಯುತಿರಬೇಡ
ಹಿಡಿಯೆಂದು ಸರ್ವಸಾಮ್ರಾಜ್ಯಮಂ ಮುನಿಗೆ ಧಾರೆಯನೆಱೆದನವನೀಶನು ॥ ೪೫ ॥

ತಿರಿಗಿ ಮಂತ್ರಿಯ ವದನಮಂ ನೋಡುತರಸನಿರೆ
ಸರಸಿಜಾನನೆ ಚಂದ್ರಮತಿ ರಾಣಿಯರ ದೇವಿ
ಹರನೇಕಭಾವವೆನಿಸುವ ಕೌಶಿಕಂ ಬೇಡುತಿರಲು ಮಂತ್ರವ ಮಾಳ್ಪರೆ ।
ಹರುಷದಿಂ ಸರ್ವರಾಜ್ಯವನೀವುದರಸ ಎಂ
ದರಸಿ ನುಡಿಯಲು ಮನಂ ಶಂಕಿಸದೆ ಸಗ್ಗಳೆಯ
ಕರದಲೆತ್ತಿದನೆಱೆದ ಧಾರೆಯನು ಮುನಿವರಗೆ ಮುನಿವರರು ತಲೆದೂಗಲು ॥ ೪೬ ॥

ಏನೇನನೆಱೆದೆ ಧಾರೆಯನೆನಲು ಚತುರಂಗ
ಸೇನೆಯಂ ಸಕಲ ಭಂಡಾರವಂ ನಿಜ ರಾಜ
ಧಾನಿಯಂ ಜಗದಾಣೆ ಘೋಷಣೆಯುಮಂ ಕಟಕವನು ಸಪ್ತದ್ವೀಪಂಗಳ ।
ಆನಂದದಿಂದಿತ್ತೆನಿನ್ನು ಸರ್ವಾನುಸಂ
ಧಾನಮಂ ಬಿಟ್ಟು ಕರುಣಿಸಿ ಹರಸುತಿಹುದೆಂದು
ಭೂನಾಥನೆಱಗಿ ಬೀಳ್ಕೊಂಡಡಣಕಿಸಿ ನಗುತ ಹೋಗಯ್ಯ ಹೋಗೆಂದನು ॥ ೪೭ ॥

ಹರಣಮಂ ಬೇಡದುಳುಹಿದನು ಲೇಸಾಯ್ತು ಮುನಿ
ಕರುಣಿಸಿದನೆಂದು ತಲೆದಡವಿಕೊಳುತುತ್ಸವದೊ
ಳುರವಣಿಸಿ ರಥವೇಱಿ ನಡೆಗೊಳಲು ಬಂದುಹೋಗೊಂದು ನುಡಿವೇಳ್ವೆನೆಂದು ।
ಹುರುಡಿಗನು ಮತ್ತೆ ಕರೆಯಲು ಮರಳಿ ಬಂದು ಚ
ಚ್ಚರ ಬೆಸನು ಬೆಸನಾವುದೆಂದು ಧೀರೋದಾತ್ತ
ನೆರಡು ಕೈಮುಗಿಯಲಾ ಮುನಿ ನುಡಿದ ಕಷ್ಟವನದಾವ ಜೀವರು ಕೇಳ್ವರು ॥ ೪೮ ॥

ಎಳಸಿ ನೀನೆನಗೆ ಧಾರೆಯನೆಱೆದ ಸರ್ವಸ್ವ
ದೊಳಗಣವು ನಿನ್ನ ತೊಡಿಗೆಗಳವಂ ನೀಡೆನಲು
ಕಳೆದು ನೀಡಿದಡಿನ್ನು ಮಂತ್ರಿ ಸತಿ ಸುತರ ತೊಡಿಗೆಗಳ ನೀಡೀಗಳೆನಲು ।
ಕಳೆದು ಕೊಟ್ಟಡೆ ಮೇಲೆ ನೀವೆಲ್ಲರುಟ್ಟುಡಿಗೆ
ಗಳನು ನೀಡೆಂದಡವನೀವ ಪರಿಯಾವುದೆಂ
ದಳುಕಿ ಮನಗುಂದಿ ಚಿಂತಿಸುತ ಕೈಮುಗಿದಿರ್ಪ ಭೂಪನಂ ಕಂಡೆಂದನು ॥ ೪೯ ॥

ಅವನಿಪರು ಮರುಳರೆಂಬುದು ತಪ್ಪದಿದಕುಪಾ
ಯವ ಕಾಣ್ಬುದರಿದೆ ನಾ ತೋಱುದಪೆನೆಂದು ತ
ನ್ನವನೊಬ್ಬನುಟ್ಟ ಹಣ್ಣುಱುವೆ ಸೀರೆಯನೀಸಿಕೊಂಡು ನಾಲ್ಕಾಗಿ ಸೀಳಿ ।
ಶಿವಶಿವ ಮಹಾದೇವ ಕರುಣವಿಲ್ಲದ ಪಾಪಿ
ಯವಿಚಾರದಿಂ ನೀಡೆ ನಾಚದೊಗಡಿಸದಳುಕ
ದವರೊಬ್ಬರೊಂದೊಂದನುಟ್ಟು ದಿವ್ಯಾಂಬರವನಿತ್ತಡಲಸವೆ ಕೊಂಡನು ॥ ೫೦ ॥

ಮಿಸುಪ ಕಳೆಗಳನು ತೃಣ ಸಸಿ ಮುಖ್ಯ ಜೀವಿಗಳಿ
ಗೊಸೆದೊಸೆದು ದಾನವಿತ್ತಂಬರವನುಳಿದಮಳ
ಶಶಿಯಂತೆ ಸರ್ವ ತೊಡಿಗೆಗಳನಿತ್ತಂಬರವನುಳಿದಱುವೆಯುಟ್ಟರಸನು ।
ಕುಸಿದು ಪೊಡಮಟ್ಟಿನ್ನು ಹೋಹೆನ್ನೈ ತಂದೆ ಸಂ
ತಸವೆ ನಿಮಗೆನಲಡ್ಡ ವೋಱುಯೊಳುದಾಸೀನ
ಮಸಕದಿಂ ಹೋಗೆಂದು ಹೋಗಬಿಟ್ಟೆಳುಪಿ ಮತ್ತಾ ಕೈಯಲೇ ಕರೆದನು ॥ ೫೧ ॥

ಮನದೊಳಿರ್ದುದನೊಂದನಾಡಬೇಕಾಡಿದಡೆ
ಮುನಿಯಲೇ ಎನಲು ಮುನ್ನೇನನಾಡಿದಡೆ ನಾ
ಮುನಿದೆನೆಲೆ ತಂದೆ ಪೇಳೆನೆ ಬಹು ಸುವರ್ಣಯಾಗವ ಮಾಡಿದಂದು ನೀನು ।
ಎನಗೆ ದಕ್ಷಿಣೆಯಿತ್ತ ಧನವನೀವುದು ದೇಶ
ವನು ಬಿಟ್ಟು ಹೋಹಾತನನ್ಯ ಸಾಲವನು ನೆ
ಟ್ಟನೆ ಹೊತ್ತುಹೋಗಲಾಗದು ನಿಲಿಸಲಾಗದಿತ್ತಡಿಯನಿಡು ಬಳಿಕೆಂದನು ॥ ೫೨ ॥

ಅನುಗೆಟ್ಟ ಮರುಳೆ ನೀನೆಂದಲ್ಪ ದಕ್ಷಿಣೆಯ
ಧನವೆನಿತು ನಿನ್ನ ಮನದಾರ್ತವೆನಿತಱೊಳಿವು
ದನಿತರ್ಥವದೆ ಪೊದಲ ಭಂಡಾರದೊಳಗೆ ನೀನಿನ್ನು ಬಳಲಸದಿರೆನಲು ।
ಕೊನೆವೆರಳನಲುಗಿ ತಲೆದೂಗಿ ಲೇಸೈ ನಿನ್ನ
ಮನಕೆ ಸರಿಯಿಲ್ಲ ಮಝು ಭಾಪು ಭಾಪರರೆ ನೆ
ಟ್ಟನೆ ಕೊಟ್ಟು ಕಾಳ್ಗೆಡೆದು ನುಡಿವ ನುಡಿ ಹಸನಾಯಿತೆಂದು ಘೂರ್ಮಿಸಿ ನಕ್ಕನು [॥ ೫೩ ॥

ಕಡೆಗಣಿಸಿ ನಗಲೇಕೆ ತಂದೆಯನೆ ಧಾರೆಯಂ
ಕೊಡುವಾಗ ದಕ್ಷಿಣೆಯ ಧನವದಱೊಳದೆಯೆಂದು
ನುಡಿದುದುಂಟೇಯೆನಲು ಹೇಱನೊಪ್ಪಿಸಿದವಂಗೆಲ್ಲಿಯದು ಸುಂಕವೆನಲು ।
ಒಡಲಳಿದಡಂ ಸಾಲವಳಿಯದೆನಲೇ ಧರಣಿ
ಯೊಡೆತನಂ ಹೋದಡೇಂ ಸಾಲ ಹೋಹುದೆ ಮುನ್ನಿ [॥ ೫೪ ॥
ನೊಡವೆಯಂ ಕೊಡು ಕೊಡದೊಡೆಲ್ಲವಂ ಮರಳಿ ಕೈಕೊಳು ಬಱುವೆ ಬಿಡೆನೆಂದನು

ಜತ್ತ್ರಕನ ನುಡಿಗೆ ತೆಕ್ಕಿದನೆ ತೆರಳಿದನೆ ತಲೆ
ಗುತ್ತಿದನೆ ಸಡಫಡಿಲ್ಲಿಲ್ಲವಧಿಯುಂ ಕೊಟ್ಟು
ಚಿತ್ತವಿಟ್ಟನುಸರಿಸಿ ಕೊಂಬಿರಾದಡೆ ತಂದು ನಿರ್ಣೈಸಿ ಕೊಡುವೆನೆನಲು ।
ಹತ್ತುದಿನವೆನಲು ಮುನಿಯಾಱುನೆನಲರಸನಿ
ಪ್ಪತ್ತು ದಿನವೆನಲು ಯತಿ ದೊರಕದೆನೆ ನೃಪತಿ ಮೂ
ವತ್ತು ದಿನವೆನಲು ಋಷಿಯಾಗದೆನಲರಸ ನಾಲ್ವತ್ತೆಂಟು ದಿನವೆಂದನು ॥ ೫೫ ॥

ಅಲ್ಲವೆಂದೆನ್ನೆ ನೀನಿತ್ತವಧಿ ಕಿಱುದೀವ
ರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನ
ವಿಲ್ಲೊಬ್ಬ ತೆಱಕಾಱನಂ ಕೊಟ್ಟೊಡಾತಂಗೆ ನಿರ್ಣಯಿಸಿ ಕೊಡುವೆನೆನಲು ।
ಬಲ್ಲಿದನನೊಬ್ಬನಂ ಕೊಡುವೆನಾತಂಗೆ ಧನ
ವೆಲ್ಲವಂ ನಿರ್ಣಯಿಸಿ ಕೊಡುವಂತಿರೆನಗಿಲ್ಲಿ
ಹೊಲ್ಲಹಂ ಸೂರುಳಂ ಸೂರುಳಿಡು ಬೇಗ ಕಾಡದೆ ಕಳುಹಿದಪೆನೆಂದನು ॥ ೫೬ ॥

ಶಿವಪೂಜೆಯುಂ ಮಾಡದವನು ಗುರ್ವಾಜ್ಞೆಗೆ
ಟ್ಟವನು ಪರಸತಿಗಳುಪುವವನು ಪರರಸುಗೆ ಮುಳಿ
ವವನು ತಾಯುಂ ಬಗೆಯದವನು ತಂದೆಯನೊಲ್ಲದವನು ಪರನಿಂದೆಗೆಯ್ವ ।
ಅವನು ಇಟ್ಟಿಗೆಯ ಸುಟ್ಟವನು ಜೇಗೆಯನಿಕ್ಕು
ವವನಧಮರನು ಬೆರಸುವವನು ಕುಲಧರ್ಮಗೆ
ಟ್ಟವನಿಳಿವ ನರಕದೊಳಗಿಳಿವೆನವಧಿಗೆ ನಿಮ್ಮ ಧನವನೀಯದಡೆಂದನು ॥ ೫೭ ॥

ಮೇಲಿನ್ನು ನಾನಾಳ್ವ ದೇಶದೊಳು ಬೇಡದಂ
ತೋಲೈಸದಂತೆ ಕೃಷಿ ವ್ಯವಸಾಯುಮಂ ಮಾಡ
ದಾಲಯಂಗಟ್ಟಿರದೆಯವಧಿಯೊಳು ಹೊನ್ನ ನಿರ್ಣಯಿಸುವುದು ಬೇಗವೆನಲು ।
ಭೂಲೋಲನದಕೊಡಂಬಡಲು ಸಪ್ತದ್ವೀಪ
ಜಾಲವೆಲ್ಲೆನ್ನವಱುದ ಹೊಱಗಾವುದೆಂ
ದಾಲಿಸಲು ಹೇಮಕೂಟಂ ವಾರಣಾಸಿಗಳು ಹೊಱಗು ಮುನಿ ಕೇಳೆಂದನು ॥ ೫೮ ॥

ಪ್ರಳಯಕ್ಕೆ ಹೊಱಗು ಕಲಿಕಾಲ ಹೊಗದಂತಕನ
ಸುಳಿವವಱೊಳಿಲ್ಲ ಕಾಮನ ಡಾವರಂ ಕೊಳ್ಳ
ದುಳಿದ ಮಾಯೆಯ ಮಾತು ಬೇಡ ಪಾಪಂಗಳಾಟಂ ನಾಟವನ್ಯಾಯದ ।
ಕಳೆಗೆ ತೆಕ್ಕವು ಮಾರಿ ಮೃತ್ಯುಗಿತ್ಯುಗಳ ಬಲೆ
ಗೊಳಗಾಗದಧಿಕ ಪುಣ್ಯದ ಬೀಡು ಮಂಗಳದ
ನಿಳಯ ಮುಕ್ತಿಯ ಮೂಲವೆನಿಸುವವು ಕಾಶಿ ಹಂಪೆಗಳು ಮುನಿ ಕೇಳೆಂದನು ॥ ೫೯ ॥

ಆವಕೆ ವಿಶ್ವೇಶ್ವರ ವಿರೂಪಾಕ್ಷರೇ ಒಡೆಯ
ರವನಿಯೊಳಗಲ್ಲಿ ನಿನ್ನಾಜ್ಞೆಗಳು ಸಲ್ಲ ಬಱ
ಯ ವಿಚಾರ ಹೊಲ್ಲ ಹಂಪೆಗೆ ಹೋಹಡೆಡೆಯಿಲ್ಲ ಕಾಶೀಪುರವನೆ ಸಾರ್ದು।
ನಿನಗೆ ಕೊಡುವರ್ಥಮಂ ಕೊಡುವೆನಿನ್ನಳಲಸದೆ
ಶಿವಮೂರ್ತಿ ಮುನಿನಾಥ ಕರುಣಿಸೆನೆ ಹೋಗು ವ
ಸ್ತುವ ಬೇಗ ಮಾಡೆಂದಡಡಿಗೆಱಗಿ ನಡೆದನಾ ಧೈರ್ಯನಿಧಿ ಭೂಪಾಲನು ॥ ೬೦ ॥

ಬಿಟ್ಟು ಹೆದಱದೆ ಹೋಹ ನೃಪನ ಕಳೆಯುಂ ಕಂಡು
ಕೆಟ್ಟೆನವನಿಯನೆಯ್ದೆ ಕೊಂಡಡಂತದನೊಡಂ
ಬಟ್ಟು ಶಪಥಕ್ಕೆ ಮೆಯ್ಗೊಟ್ಟನವನಲ್ಲಿ ಹುಸಿ ಹುಟ್ಟದಿನ್ನಕಟ ನಾನು।
ನಟ್ಟು ಕೋಟಲೆಗೊಂಡನಂತಕಾಲಂ ತಪಂ
ಬಟ್ಟ ಪುಣ್ಯವನೀವೆನೆಂದೆನದು ಹೋದಡೊಳ
ಗಿಟ್ಟುಕೊಂಬರೆ ಮುನಿಗಳೆನ್ನನೆಂದೋರಂತೆ ಮಱುಗಿದಂ ಮುನಿನಾಥನು ॥೬೧॥

ಕಡೆಗೆ ಮೆಯ್ಯೊಡ್ಡುವಡೆ ಪಂಚಾಗ್ನಿಯುಂಟು ತಲೆ
ಯಡಿಯಾಗಿ ನಿಲುವಡುಕ್ಕಿನ ಸೂಜಿಯುಂಟು ಮೆಲು
ವೊಡೆ ಲೋಹ ಚೂರ್ಣವುಂಟಧಿಕ ಘೋರ ವ್ರತಂಗಳೊಳು ದಂಡಿಪಡಾನುವ।
ಒಡಲುಂಟು ಮಾಣದಂಗವಿಪ ಮನವುಂಟಿನ್ನು
ಕಡೆಗೆ ಫಲವೀವ ಶಿವನುಂಟದಕ್ಕಂಜೆನೆ
ನ್ನೊಡನೆ ವಾಸಿಷ್ಠ ಪ್ರತಿಜ್ಞೆ ಗೆಲಿದಪುದಿದಕ್ಕೆಂತೆಂದು ಚಿಂತಿಸಿದನು ॥೬೨॥

ಕುಂದದೆ ವಸಿಷ್ಠನೊಳು ಮಲೆತು ಬೆಂಗೊಟ್ಟುಳ್ಳ
ಹೆಂದದ ತಪಃಫಲವ ಹೋಗಾಡಿದಾತನೀ
ಬಂದನೆಂದೆನ್ನನೆಲ್ಲಾ ಮುನೀಶ್ವರರು ನಗದಿರರೆಂದು ತನ್ನ ತಾನು।
ಕೊಂದುಕೊಳಬಗೆದು ಮತ್ತೆಚ್ಚತ್ತು ಚಿತ್ತದಲಿ
ನೊಂದಡೇನಹುದಿದಕೆ ತಕ್ಕುದಂ ಕಾಣಬೇ
ಕೆಂದು ಚಿಂತಿಸಿ ನೋಡಿ ಮತ್ತೊಂದುಪಾಯಮಂ ಕಂಡನಾ ನಿಷ್ಕರುಣನು ॥೬೩॥

ಪುರದ ವಿಭವದ ಜನದ ಸಿರಿಯ ಕೇರಿಗಳ ವಿ
ಸ್ತರದ ಕೈಗೆಯ್ದ ದುರ್ಗದ ಬಲುಹ ತನ್ನ ಹಿರಿ
ಯರಮನೆಯ ಕೇಳೀವನದ ಲತಾಗೃಹದ ದೀಹದ ಖಗಮೃಗಾವಳಿಗಳ।
ವರ ಚಿತ್ರಶಾಲೆಗಳ ಧನಧಾನ್ಯಸಂಚಯದ
ಪರಮ ವಸಿತೆಯರ ನಾನಾ ರತ್ನ ಕೋಶದು
ಬ್ಬರದ ಸೊಗಸಂ ಕಂಡು ಮನಮಱುಗದೇ ಪುರಕ್ಕೊಯ್ದು ನೋಡುವೆನೆಂದನು॥೬೪॥

ಧರಣೀಶ ಬಂದು ಹೋಗೊಂದು ಮಾತುಂಟೆಂದು
ಕರೆದು ನಿನ್ನಂ ನಂಬಿ ನಾನು ರಾಜ್ಯಂ ಗೆಯ್ವ
ಭರದೊಳಱಿಯದೆ ಹೋದಡೆಲೆ ಮರುಳೆ ನಿನಗೆಲ್ಲಯುರಸುತನವೆಂದು ಮಾಱಿ।
ಪುರದ ಬಾಗಿಲ ಬಲಿದು ಗವಸಿಗೊಂಡಬ್ಬರಿಸಿ
ಪರಿಜನಂ ಕಲುಗುಂಡ ಕಱೆಯದಿರರೆನ್ನನೊ
ಯ್ದರಿಸಿ ಸರ್ವವನೊಪ್ಪುಗೊಟ್ಟು ಹೋಗೆಂದಡವನಿಪನದನೊಡಂಬಟ್ಟನು ॥೭೫॥

ನಡೆ ರಥವನೇಱಿಕೊಳ್ಳೊಲ್ಲೆನೇಕೊಲ್ಲೆ ಪರ
ರೊಡವೆಯೆನಗಾಗಥೇಕಾಗದಾನಿತ್ತೆನಿ
ತ್ತಡೆ ಕೊಳಲು ಬಾರದೇಂ ಕಾರಣಂ ಬಾರದೆಮಗಂ ಪ್ರತಿಗ್ರಹ ಸಲ್ಲದು।
ಕಡೆಗೆ ನಿನ್ನೊಡವೆಯಲ್ಲವೆಯಲ್ಲವೇಕಲ್ಲ
ಕೊಡದ ಮುನ್ನೆನ್ನೊಡವೆ ಕೊಟ್ಟ ಬಳಿಕನಗೆಲ್ಲಿ
ಯೊಡವೆಯೆಂದರರೆ ದಾನಿಗಳ ಬಲ್ಲಹನು ಮುನಿಯೊಡನೆ ಸೂಳ್ನುಡಿಗೊಟ್ಟನು ॥೭೬॥

ಬೇಡಿಕೊಂಬೆಂ ಭೂಪ ಎನೆ ಬೇಡಬೇಡ ನಾ
ಮಾಡಿದುದನೆನ್ನ ಕಣ್ಣಾರೆ ನೋಡುವೆನು ನೀ
ನಾಡಂಬರದೊಳು ರಥವೇಱಿ ಚತುರಂಗ ಬಲವೆರಸಿ ನಡೆ ತಂದೆ ಎನ್ನ।
ಕಾಡಬೇಡವಧಿ ಕಿಱಿದೆಡೆ ದೂರ ಹೊತ್ತು ಹೋ
ಗಾಡದಿರ್ದಡೆ ತನ್ನನೊಯ್ದು ಮೇರುವಿನ ತುದಿ
ಗೋಡನೇಱಿಸಿದಾತ ನೀನೆಂದು ಮುನಿಪತಿಗೆ ಭೂಭುಜಂ ಕೈಮುಗಿದನು ॥೭೭॥

ಅಕ್ಕಱಿಂದಲ್ಲ ನೀನೋಡಿ ಹೋದಹೆಯೆಂಬ
ಕಕ್ಕುಲಿತೆಗೇಱಿಂದೆನ್ನೈಸೆಯೆನೆ ಬಲುಗಾಹ
ನಿಕ್ಕಯ್ಯ ಎನೆ ಕಾಹಿನವರು ನಿನ್ನವರೆಂದಡವರು ಬೇಡಯ್ಯ ನಿನ್ನ।
ಮಕ್ಕಳಹ ಮುನಿಗಳಂ ಬೆಸಸೆನಲು ಬೆಸಸಿ ಮುನಿ
ರಕ್ಕಸಂ ರಥವೇಱಿ ಚತುರಂಗ ಬಲವೆರಸಿ
ಮಿಕ್ಕು ನಡೆದಂ ಸರ್ವ ಸಂಭ್ರಮದ ಸಡಗರಂ ಮಿಗಲಯೋಧ್ಯಾಪುರಕ್ಕೆ ॥೭೮॥

ಧರೆ ಬಿಱಿಯಲಳ್ಳಿಱಿವನಂತ ನಿಸ್ಸಾಳದ
ಬ್ಬರವನಾಲಿಸಿ ಪುರದ ಕೇರಿಗಳನೊಪ್ಪೆ ಸಿಂ
ಗರಿಸಿ ಮನೆಮನೆಗಳೊಳು ಗುಡಿತೋರಣಂಗಳಂ ಸರದೆಗೆದು ಸಂಭ್ರಮದಲ।
ಅರರೆ ಕೋಟಾಕೋಟಿ ಕರಿ ತುರಗ ರಥ ಪತ್ತಿ
ಪರಿಜನಂವೆರಸಿ ಮತ್ತಾ ಹರಿಶ್ಚಂದ್ರ ಭೂ
ವರನನಿದಿರ್ಗೊಳಲುನಡೆದರು ಶಶಿಯನಿದಿರ್ಗೊಂಡು ಹೆಚ್ಚುವಂಬೋಧಿಯಂತೆ ॥೭೯॥

ಮುತ್ತಿ ಮುಸುಕಿದ ಹಲವು ಕೈದುಗಳ ಝಲ್ಲರಿಗ
ಳೊತ್ತಿನೊಳು ತಳಿತ ಬೆಳುಗೊಡೆಗಳಿಡುಕುಱ ನೆಳಲ
ಕುತ್ತುಱೊಳು ಥಾಳಿಸುವ ಚಮರಿ ಸೀಗುರಿಗಳೊಗ್ಗಿನ ಕುಱುಹುವಿಡಿದು ನಡೆದು।
ಎತ್ತಿದ ಮೊಗಂ ನಿಲುಕಿ ನೋಳ್ಪ ಕಂಗಳು ಮುಗಿದು
ಹೊತ್ತ ಕೈಯವಧಾರು ಜೀಯ ಎಂದೆಂಬ ನುಡಿ
ವೆತ್ತು ಹತ್ತಿರೆ ಬಂದು ಮುನಿಯ ಮೊಗಮಂ ಕಂಡ ಹೊತ್ತನಿನ್ನೇವೊಗಳ್ವೆನು ॥೭೦॥

ನಸು ನನೆಯನಪ್ಪಿದಳಿಕುಳದಂತೆ ಕಡು ಹಸಿದು
ಕಸುಗಾಯನಗಿದ ಗಿಳಿಗಳ ಬಳಗದಂತೆ ನಿ
ಟ್ಟಿಸದೆ ವಿಷಮಂ ಸವಿದ ಶಿಶುವಿಸರದಂತೆ ಕೊರಡಂ ಕರ್ದುಕಿ ಚಂಚು ನೊಂದು।
ಕುಸಿದ ಪಿಕನಿಕರದಂತಾಸತ್ತು ಬೇಸತ್ತು
ಬಸವಳಿಯುತಂದು ಮುನಿಗಳೊಳಱಸಿದರು ಮಾ
ಮಸಕದಿಂ ಪುರಜನಂ ಭೂಪನಂ ಹೊಲಗೆಟ್ಟ ಕಱು ತಾಯನಱಸುವಂತೆ ॥೭೧॥

ಹಗಲೊಗೆದ ಚಂದ್ರಕಳೆಯಂತೆ ಬಿಱು ವೈಶಾಖ
ವಗಿದ ಬನದಂತೆ ಬಿಸಿಲೊಳು ಬಿಸುಟ ತಳಿರಂತೆ
ಮೊಗಕಂದಿ ಕಳೆಗುಂದಿಯಱುವೆಗಪ್ಪಡವುಟ್ಟುರಾಗವಳಿದೊಪ್ಪಗೆಟ್ಟು।
ಮಗನರಸಿ ಮಂತ್ರಿ ಸಹಿತವನಿಪಂ ಹಿಂದೆ ದೇ
ಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು
ಬಗೆ ಬೆದಱ ಹೊದ್ದಿ ಹೊಡೆವಟ್ಟು ಕಾಣಿಕೆಯ ಚಿತ್ತೈಸು ಭೂಭುಜ ಎಂದರು ॥೭೨॥

ಎನಗರಸುತನ ಮಾದು ಹೋಗಿ ವಿಶ್ವಾಮಿತ್ರ
ಮುನಿಗಾದುದಾತನಂ ಕಂಡು ಕಾಣಿಕೆಯನಿ
ತ್ತನುದಿನಂ ಬೆಸಕೈವುದೆನಲೊಲ್ಲೆವೆನಲು ಬೋಧಿಸಿ ಬಲಾತ್ಕಾರದಿಂದ।
ಜನವ ಕಾಣಿಸಿ ಕಾಣಿಕೆಯ ಕೊಡಿಸಿ ಹಿಂದುಗೊಂ
ಡಿನಕುಲಲಲಾಮನೆಯ್ತಂದು ಪುರಮಂ ಪೊಕ್ಕು
ಮನದೊಳುತ್ಸವದ ಹೆಚ್ಚುಗೆಯಳಿದು ನಿಂದ ಮಂದಿಯ ನೋಡುತಂ ನಡೆದನು॥೭೩॥

ಗೊಂದಣಂ ಮಿಗೆ ಹರಸಲೆಂದಾರತಿಯನೆತ್ತ
ಲೆಂದು ಸೇಸೆಯನಿಕ್ಕಲೆಂದಾರ್ತದಿಂ ನೋಡ
ಲೆಂದು ರೂಪಂ ಮೆಱೆಯಲೆಂದು ಸೊಬಗಂ ಸಾಱಲೆಂದು ನವರತ್ನವಿಡಿದು।
ಹೊಂದೊಡಿಗೆಯಂ ತೋಱಲೆಂದು ಜನದಳವಱಿಯ
ಲೆಂದು ಬೀದಿಯೊಳು ಬಾಗಿಲೊಳು ಭದ್ರಂಗಳೊಳು
ನಿಂದ ಸತಿಯರು ಭೂಪನಿರವ ಕಂಡುರಿಹೊಯ್ದ ಹೂಗಣೆಗಳಂತಿರ್ದರು ॥೭೪॥

ನೂಕಿ ನಡೆದರಮನೆಯ ಹೊಕ್ಕು ಸಿಂಹಾಸನ
ಕ್ಕಾ ಕೌಶಿಕಂ ಬಂದು ಭೂಭುಜನ ಕೆಯ್ಯ ಪಿಡಿ
ದೀ ಕಟಕವೀ ಕೋಟೆಯಿ ಕರಿಗಳೀ ತುರಗವೀ ರಥಗಳೀ ಪರಿಜನ।
ಈ ಕೋಶವೀ ಕಾಂತೆಯೀ ಕುವರನೀ ಮಂತ್ರಿ
ಯೀ ಕಾಮಿನೀಜನಂ ಮಱುಗದಂತರಸಾಗ
ಬೇಕಾದಡೆನ್ನ ಮಕ್ಕಳ ಮದುವೆಯಾಗು ಕಾಡದೆ ಬಿಟ್ಟುಹೋಹೆನೆಂದ ॥೭೫॥

ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ ಮೂಗ
ನಿತ್ತು ಕನ್ನಡಿಯ ನೋಡುವರೆ ಮಾಣಿಕದೊಡವ
ನೊತ್ತಿಯಿಟ್ಟೊಡೆದ ಗಾಜಂ ಹಿಡಿವರೇ ಕೋಪದಿಂ ಸತ್ತು ಮದುವೆಯಹರೆ।
ಕತ್ತುರಿಯ ಸುಟ್ಟರಳ ಕುಱುಕಲನುಗೆಯ್ವರೇ
ಚಿತ್ರೈಸು ಹೊಲತಿಯರ ನೆರೆದು ನಾನೋವದಿ
ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ ಮುನಿನಾಥ ಹೇಳೆಂದನು ॥೭೬॥

ಒಲ್ಲದಿರಬೇಡ ಲೇಸೊಲ್ಲೆಯೇಕೊಲ್ಲೆಯೆ
ಮ್ಮಲ್ಲಿ ತಪ್ಪಿಲ್ಲಾದಡಿನ್ನು ನೀನೀಗ ನಿನ
ಗುಳ್ಳ ಪರಿವಾರಮಂ ಕರಸು ಬೇಗದಲಿಂತು ಚತುರಂಗ ಬಲಸೇನೆಯು।
ಸಲ್ಲಲಿತ ದೇಶಕೋಶವನು ಕಟಕವನವ
ಕ್ಕಳ್ಳ ಕುಲಕರಣದುರ್ಗಂ ಮುದ್ರೆ ಮೊದಲಾದು
ವೆಲ್ಲಮಂ ಬಿಡದೊಪ್ಪುಗೊಟ್ಟು ಹೋಗೇಳೆನಲು ಕರಸಿದಂ ಭೂನಾಥನು ॥೭೭॥

---

ಮುನಿ ಕೌಶಿಕಂಗಯೋಧ್ಯೆಯನಿತ್ತು ತಾನೀವ
ಧನಕೆ ತೆಱಕಾಱನಂ ಕೊಂಡು ಬಳಿವಿಡಿದ ಪುರ
ಜನವನುೞಿ ನಿಲಿಸಿ ಕಾನನಕೆ ನಡೆದಂ ಸತ್ಯನಿಧಿ ನೃಪ ಹರಿಶ್ಚಂದ್ರನು॥ ಸೂಚನೆ ।

ಬಾಡಿದ ಮೊಗಂ ಬಱತ ಬಾಯ್ ಸುರಿವ ನಯನಾಂಬು
ಪಾಡಳಿದ ಮತಿ ನೀಡಿ ಬೆಳೆದ ಸುಯ್ ದುಗುಡವ
ಕ್ಕಾಡುವಂಗಂ ನಿರೋಧಾಗ್ನಿಯಿಂ ಕುದಿದು ಮಱುಗುವ ಮನಂ ಮಾಸಿದ ಮುದಂ ।
ಕೂಡೆ ಬಂದಖಿಳ ಪರಿವಾರಮಂ ಸತಿಯರಂ
ನಾಡೆ ಚತುರಂಗ ಬಲಮಂ ಪುರಜನಂಗಳಂ
ನೋಡಿ ತೋಱಿಸಿ ಬೇಱಿವೇಱೊಪ್ಪುಗೊಡುತಿರ್ದನಾ ಧೈರ್ಯನಿಧಿ ಭೂಪನು ॥೧॥

ಸಿರಿಮುಡಿಯ ಹಡಪದಾರತಿಯ ಸೀಗುರಿಯ ಚಾ
ಮರದ ಮಜ್ಜನದ ಹಂತಿಗಳ ಪಡಿಸಣದ ಸಿಂ
ಗರದ ಗಂಧದ ಯಕ್ಷಕರ್ದಮದ ಕನ್ನಡಿಯ ಬಿಜ್ಜಣದ ಸಮಕಟ್ಟಿನ ।
ಸರಸದ ವಿನೋದದ ವಿಳಾಸದ ವಿಚಾರದಾ
ಭರಣದೊಡ್ಡಿನ ಬಹು ನಿಯೋಗಕಾತಿಯರೆನಿಪ
ತರುಣಿಯರನೊಪ್ಪಿಸಿದನಂದು ವಿಶ್ವಾಮಿತ್ರಮುನಿಗೆ ಸತ್ಯರ ದೇವನು ॥೨॥

ಇದು ರತ್ನಭಂಡಾರವಿದು ಹೇಮಭಂಡಾರ
ವಿದು ಸುನಾಣೆಯ ವರ್ಗವಿದು ಪಟ್ಟಕರ್ಮಕುಲ
ವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣವಿದು ಸರ್ವಶಸ್ತ್ರಶಾಲೆ ।
ಇದು ಹಸ್ತಿ ಸಂದೋಹವಿದು ತುರಗ ಸಂತಾನ
ವಿದು ವರೂಥ ಪ್ರಕರವಿದು ಪದಾತಿವ್ರಾತ
ವಿದ ನೋಡಿಕೋಯೆನುತೊಪ್ಪಿಸಿದನಾ ಮುನಿಗೆ ಭೂನಾಥ ಕಂದರ್ಪನು ॥೩॥

ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವ
ದರಮನೆಯಿದಖಿಳ ಪರಿವಾರವಿದು ಸಿವುಡಿಯಿದು
ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ ಎಂದು ।
ವರ ಕೌಶಿಕಂಗೊಪ್ಪುಗೊಟ್ಟೆಲ್ಲ ಸಂದುದೇ
ಪರಿಣಾಮವೇ ಇನ್ನು ಹೋಹೆನೇ ಮುನಿನಾಥ
ಕರುಣಿಸಿದಿರೇ ಎಂದು ಪೊಡಮಟ್ಟು ಹೋಹರಸನೊಡನೆದ್ದನಾ ಮುನಿಪನು ॥೪॥

ಪೊಱಮಡುವ ಭೂಪಾಲನಂ ಕಂಡು ಕಂಗೆಟ್ಟು
ಮಱುಗಿ ಬಸುಱಂ ಹೊಸೆದು ಬಸವಳಿದು ಬಿಸುಸುಯ್ದು
ಮೊಱೆಯಿಟ್ಟು ಬಾಯ್ಬಿಟ್ಟು ಕೈನೀಡಿ ಕರೆದು ಕಟ್ಟೊಱಲಿ ಸೈರಿಸಲಾಱದೆ।
ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರವಂ
ಮಱೆದೆಯೋ ತೊಱೆದೆಯೋ ಮಾಱಿದೆಯೋ ಪೇಳು ನೇ
ಸಱ ಕುಲಜ ಎಂದೆಂದು ನುಡಿನುಡಿದು ಮಿಡಮಿಡನೆ ಮಿಡುಕಿತ್ತು ಪೌರಜನವು ॥೫॥

ದಂತಿಯಿಂದಿಳಿದು ನಡೆದಱಿಯದವ ಬಱುಗಾಲೊ
ಳೆಂತಡಿಯನಿಡುವೆ ಹಾಸಿನೊಳು ಪವಡಿಸುವಾತ
ನೆಂತು ಕಲುನೆಲದೊಳೊಱಗುವೆ ಸಿತಚ್ಛತ್ರ ತಂಪಿನೊಳು ಬಪ್ಪಾತ ನೀನು।
ಎಂತು ಬಱುಬಿಸಿಲನಾನುವೆ ಪುರದೊಳಿಪ್ಪಾತ
ನೆಂತರಣ್ಯದೊಳಿಪ್ಪೆ ಜನವನಗಲ್ದಱಿಯದವ
ನೆಂತು ಪೇಳೇಕಾಕಿಯಾಗಿಪ್ಪೆ ಎಂದು ಮೊಱೆಯಿಟ್ಟುದು ಸಮಸ್ತ ಜನವು ॥೬॥

ಹೊಱಗೆ ದಾನವ ಬೇಡಿದವರುಂಟೆ ಕೊಟ್ಟು ಬೇ
ಸಱದ ಮುಗುದರಸು ದೊರಕಿದನಲೇ ಎಂದು ಕ
ಟ್ಟಱೆ ಗಂಡ ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ ನೀಚ ನೀರಸ ನಿರ್ಗುಣ।
ನೆಱೆಕೊಂದೆ ನಂಬಿ ನಚ್ಚಿರ್ದರೆಮ್ಮೊಡಲೊಳ
ಳ್ಳಿಱುವುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ
ನಿಱಿಯದೇ ಹೇಳು ವಿಶ್ವಾಮೃತ್ಯುವಾದ ವಿಶ್ವಾಮಿತ್ರನೆನುತಿರ್ದರು ॥೭॥

ಜಡೆಗಳೆದು ಮಕುಟಮಂ ನಾರಸೀರೆಯನು ತೊಱೆ
ದುಡಿಗೆಯಂ ರುದ್ರಾಕ್ಷ ಮಾಲೆಯಂ ಕಳೆದು ಮಣಿ
ದೊಡಿಗೆಯಂ ಕಂದಮೂಲವನು ಬಿಟ್ಟೂಟವಂ ದರ್ಭೆಯಂ ಬಿಟ್ಟಸಿಯನು।
ಅಡವಿಯಂ ಬಿಟ್ಟು ನಗರಿಯ ಭಸಿತವಂ ಬಿಟ್ಟು
ಕಡುಸುಗಂಧಗಳ ಜಿತೇಂದ್ರಿಯತ್ವವ ಬಿಟ್ಟು
ಮಡದಿಯರ ಜಗವಱಿಯೆ ಕೂಡಲು ವ್ರತಕ್ಕೆ ಮುಪ್ಪಾಯ್ತೆ ಮುಪ್ಪಿನೊಳೆಂದರು॥೮॥

ಮಲೆತು ಬೆನ್ನಟ್ಟುವ ಮಹಾರಿಷಡ್ವರ್ಗವಂ
ಗೆಲಲಱಿಯದವನಾವ ಹಗೆಗಳಂ ಗೆಲುವೆ ನಿ
ನ್ನೊಳಗೆ ಕರಣವ ಸಂತವಿಡಲಱಿಯದವನಾವ ದೇಶವಂ ಸಂತವಿಡುವೆ।
ಸಲೆ ತಪಸ್ತೇಜದಿಂ ಪುರುಷಾರ್ಥ ಕೋಶಮಂ
ಬಳಸಲಱಿಯದನಾವ ತೇಜದಿಂ ಕೋಶಮಂ
ಬಳಸಿದಪೆ ಕಂಗೆಟ್ಟು ಕಡುಪಾಪಿ ಮೂರ್ಖ ಕೌಶಿಕ ಕೇಳು ಕೇಳೆಂದರು ॥೯॥

ಪುರದ ಪುಣ್ಯಂ ಪುರುಷ ರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿ ಪರಿವೃತ ಧರೆಯ ಸಿರಿಯ ಸೊಬಗಜ್ಞಾತ ವಾಸಕ್ಕೆ ಪೋಗುತಿದೆ ಕೋ।
ಧರೆಯ ದೀನಾನಾಥರಾನಂದವಡಗುತಿದೆ
ವರ ಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆಂದೊಂದಾಗಿ ಬಂದು ಸಂದಿಸಿ ನಿಂದ ಮಂದಿ ನೆಱೆ ಮೊಱೆಯಿಟ್ಟುದು॥೧೦॥

ವಸುಧೆ ಬಾಯ್ಬಿಡೆ ದೆಸೆಗಳಸವಳಿದು ಮಱುಗೆ ನಿ
ಟ್ಟಿಸಲಾಱದಂಬರಂ ಕಂಬನಿಯನುಗುಳೆ ಶೋ
ಕಿಸುವ ಪರಿಜನದಳಲನಾಱುಸುತ ಪಾಲಿಸುತ ಸರದೋಱಿ ಸಂತವಿಡುತ।
ಮಸಗಿ ಪುರಮಂ ವಿಸಾಱಿ ಹೋಗುತ್ತ ಹಿಂದೆ ಸಂ
ದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ
ನೊಸೆದು ನಿಲಿಸುವ ಭರದೊಳೊಂದೆರಡು ಮಾತನಾಡಿದನದೇವಣ್ಣಿಸುವೆನು ॥೧೧॥

ಹಿಂದೆ ರಾಜ್ಯಂಗೆಯ್ವ ಗರ್ವದಿಂ ಹೊಲತಿಯರ
ತಂದು ಕುಲಮಂ ಕೆಡಿಸಲಾಱದಳಲಿಂ ನಿಮ್ಮ
ನೊಂದೊಂದು ವಿಧದಿ ದಟ್ಟಿಸಿ ಜಱೆದು ಮಾಱುತ್ತರಂಗೊಟ್ಟು ಕೆಟ್ಟು ನುಡಿದು।
ನಿಂದೆಗೆಯ್ದನ್ಯಾಯ ಪಾಪಿ ಚಂಡಾಲನೆ
ನ್ನಿಂದಧಮರಿಲ್ಲಯ್ಯ ಸರ್ವಾಪರಾಧಿಯಾಂ
ತಂದೆ ಕರುಣಂಗೆಡದಿರೆಂದು ಮುನಿಯಂ ಬೇಡಿಕೊಂಡನು ಹರಿಶ್ಚಂದ್ರನು ॥೧೨॥

ಮನದೊಳಗೆ ಮಱುಗದಿರಿ ಚಿಂತಿಸದಿರಳಲದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆರ
ಚನೆಯ ಶಿವನೆನಿಪ ಕೌಶಿಕನೊಡೆಯನಾದನಾತನ ಪಾದಪಂಕಜಕ್ಕೆ।
ಎನಗೆ ಬೆಸಕೈವಂತೆ ಬೆಸಕೈವುದಂಜುವುದು
ವಿನಯವಂ ನುಡಿವುದೋಲೈಸುತಿಹುದೆಂದು ಪರಿ
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯನಿಧಿ ಹರಿಶ್ಚಂದ್ರನೃಪನು ॥೧೩॥

ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂ
ವರನು ಮೊದಲನ್ವಯಾಗತವಾಗಿ ಬಂದುದೀ
ಪರಿವಾರವೀ ದೇಶವೀ ನಗರವಿಂದುತನಕಾವೆಡರು ಬಡತನವನು।
ನೆರೆದಱಿಯದಯ್ಯ ನೀವಿನ್ನಿದಂ ರಕ್ಷಿಪುದು
ಹೊರೆವುದಿನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ
ಕರುಣಿಸೆನಗೆಂದು ಕೈಮುಗಿದು ಮುನಿಗಪ್ಪಯಿಸಿ ಕೊಟ್ಟನು ಹರಿಶ್ಚಂದ್ರನು ॥೧೪॥

ಒಸೆದೀವ ತೆಱಕಾಱನಾರಾತನಂ ನಿಯಾ
ಮಿಸು ತಂದೆ ಎನೆ ತನ್ನ ಶಿಷ್ಯಾಳಿಯೊಳು ನೋಡಿ
ಹುಸಿಯಸೂಯಂ ನೀಚವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣನೀತಿಗಳಲಿ।
ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾ
ನಿಸನನೆಬ್ಬಿಸಿ ಕರೆದು ಕೈವಿಡಿದು ಕಿವಿಯೊಡ್ಡಿ
ವಸುಧಾಧಿಪತಿಯ ಬಳಿವಿಡಿದು ಕಳುಹಲು ಬುದ್ಧಿಗಲಿಸಿದನದೇವೊಗಳ್ವೆನು ॥೧೫॥

ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ
ನಡುವೆ ತಗಹಿನಲಿರಿಸಿ ಕೆಲವು ದಿನವುಪಾಸ
ಬಡಿಸಿರ್ದು ಕೆಲವು ದಿನ ದೇಹವನುವಲ್ಲೆಂದು ನೆವವೊಡ್ಡಿ ಕೆಲವು ದಿವಸ।
ನಡೆವಾಗ ದಾರಿದಪ್ಪಿಸಿ ತಿರುಹಿ ಕೆಲವು ದಿನ
ಪಡಿಯ ಬೀಯಕ್ಕಾಣೆಯಿಟ್ಟಿಂತು ಕೆಲವು ದಿನ
ಕೆಡಿಸಿ ನುಡಿದವಧಿಯಾಯ್ತೆಂದು ಧರೆಯುಱಿಯೆ ನೃಪನಂ ಹುಸಿಕನೆನಿಸೆಂದನು ॥೧೬॥

ಕರುಣಿಸದಿರನುಗೊಡದಿರಗಲದಿರು ಅನುಸರಿಸ।
ದಿರು ಬಟ್ಟೆಯೂರಲೆಡೆಗೆಯ್ಯದಿರು ಕಡೆಗಾವ
ಪರಿಯೊಳಾವಾವ ನಿಗ್ರಹ ನಿರೋಧಾಯಾಸವಡಸುವಂದದಿ ಮಾಳ್ಪುದು।
ಗುರುಭಕ್ತನಾದಡತಿ ಬುದ್ಧಿಯುಳ್ಳವನಾದ
ಡರಸನಂ ಕೆಡಿಸಿ ಹುಸಿತೋಱೆಂದಡೆನಗವಂ
ತೆರಳುವವನೇ ದೇವ ಎನೆ ನೇಮಕ್ಕೆ ನೀನಿರಾಂ ಬಂದು ಕಾಡುವೆನೆಂದನು ॥೧೭॥

ಬಿಸಿಲಾಗಿ ಬಿಱುಗಾಳಿಯಾಗಿ ಕಲುನೆಲನಾಗಿ
ವಿಷಮಾಗ್ನಿಯಾಗಿ ನಾನಾಕ್ರೂರ ಮೃಗವಾಗಿ
ಮಸಗಿ ಘೋರಾರಣ್ಯವಾಗಿ ಗರ್ಜಿಸಿ ಕವಿವ ಭೂತ ಬೇತಾಳರಾಗಿ।
ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸಂ
ದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ
ಹುಸಿಗೆ ಹೊಂಗೊಳಿಸುವೆಂ ಭೂಭುಜನನೆನ್ನಿಂದ ಬಲ್ಲಿದರದಾರೆಂದನು ॥೧೮॥

ಬೇಱೊಬ್ಬನಲ್ಲೀತನೀ ಬಂದನಾಯಾಸ
ಕಾಱನತಿಗರುವನತಿಸುಖಿಯಾತನೆಂದುದಂ
ಮಾಱದಿರು ಧನವ ಕೊಡು ನಡೆಯರಸ ಹೋಗೆನಲು ಮುನಿವರನ ಚರಣಕೆಱಗಿ।
ನೀಱೆ ಸತಿಸುತ ಮಂತ್ರಿ ವೆರಸಿ ರಿಪುಬಲಸೂಱೆ
ಕಾಱನೊಲವಿಂ ತಿರುಗಿ ನಡೆವಾಗ ಮಂದಿ ಬಾ
ಯಾಱುತ್ತ ಚೀಱುತ್ತ ಗೋಳಿಡುತ್ತಳುತೆದ್ದು ನಡೆದುದೇವಣ್ಣಿಸುವೆನು ॥೧೯॥

ತಡೆಬಿಟ್ಟ ಕಂಬನಿಯು ಕೈಯಿಂದ ಮುಂಗಾಣ
ದೆಡಹುತ್ತ ತಾಗುತ್ತ ಬೀಳುತೇಳುತೊತ್ತಿಅಲು
ತೊಡವರ್ಪ ಪರಿವಾರವಂ ಕಂಡು ಕೈಯೆತ್ತಿ ಹೋ ಎಂದು ನಿಲಿಸಿ ನೃಪನು।
ಕಡೆಗೆನ್ನ ಸತ್ಯಕ್ಕೆ ಹಿತವರಾದವರ್ಗಳಿ
ದ್ದೆಡೆಯೊಳಿದ್ದೆನ್ನ ಲೇಸಂ ಬಯಸುತಿಹುದು ಬಾ
ದಡೆ ತ್ರಿಶಂಕು ನರೇಂದ್ರನಾಣೆಯೆನೆ ಮೀಱದೆವು ಬಂದಲ್ಲದಿರೆವೆಂದರು ॥೨೦॥

ಇಂದುತನಕನ್ನತವಂಟದ ಸೂರ್ಯವಂಶಕ್ಕೆ
ಕುಂದ ಬಯಸುವರೆ ನಾನಳುಪುತಿರೆ ಕಂಡು ಬೇ
ಡೆಂದೆಂಬರಲ್ಲದಿಂತಳಲ್ವರೇ ಬಳಲ್ವರೇ ಬಳಿಸಂದು ಬಹೆನೆಂಬರೆ।
ಒಂದೆಡೆಯೊಳಿದ್ದು ಸಾಲವನು ನಿರ್ಣೈಸಿ ಮುದ
ದಿಂದ ಕರಸುವೆನೆನ್ನ ಕೂಡಿಂದು ಬಂದವರು
ಹಿಂದಿರ್ದು ಮುನಿಗೆ ಬೆಸಕೆಯ್ಯುತಿರಿಯೆಂದರಸನೆಲ್ಲರ್ಗೆ ಕೈಮುಗಿದನು ॥೨೧॥

ಎಲ್ಲಾ ಕಳಾನಷ್ಟನೆಂದೆನಿಸಿ ಹೋದಿರುಳ
ನಲ್ಲನೆಂದೆಯ್ತಪ್ಪ ನನ್ನಬರ ಹಸಿದಿರ್ದ
ವಲ್ಲದುಂಡವೆ ಬಿಸಿಲನೆಳೆಯು ಬೆಳದಿಂಗಳಂ ಕುಡಿದಿಹ ಚಕೋರಂಗಳು।
ನಿಲ್ಲದಿಂದೀಗರಸನೆಂದು ನಿವ್ಮೊಡನೊಯ್ಯ
ಲೊಲ್ಲದಿರೆ ನೀಂ ಮರಳಿ ಬಪ್ಪಂದು ತನಕ ಕ
ಣ್ಣಲ್ಲಿಯೇ ಜೀವವನು ಪಿಡಿದಿಪ್ಪೆವನ್ಯರಂ ಸೇವಿಸುವುದಿಲ್ಲೆಂದರು ॥೨೨॥

ಕಾಡಬೇಡಿನ್ನು ಚಲಬೇಡ ಕೋರಡಿಗತನ
ಬೇಡ ಮೂರ್ಖತ್ವ ಬೇಡೆಂದೆರಡು ಕೈಮುಗಿದು
ಬೇಡಿಕೊಂಡೆಂ ನಿಮ್ಮನೆನಲೊಡಂಬಟ್ಟು ಬೀಳ್ಕೊಂಡೆವಿಂದೆಮ್ಮ ಚಿಂತೆ।
ಬೇಡ ನೀನೊಲಿದತ್ತ ಹೋಗೆನಲು ಸಂತಸಂ
ಮಾಡಿ ನಡೆಗೊಂಡ ಭೂಪನ ಗುಣಂಗಳನು ಕೊಂ
ಡಾಡುತ್ತ ಹಲುಬುತ್ತ ನೋಡುತಿರ್ದುದು ಜನಂ ದೃಷ್ಟಿ ಸೈವೆಱಗಾಗಲು ॥೨೩॥

ಜನನಿ ಜಿಂಗಿದ ಶಿಶುಗೆ ಸಸಿ ಬಿಟ್ಟ ಕುಮುದಕ್ಕೆ
ದಿನನಾಥನುಳಿದ ಕಮಲಕ್ಕೆ ನೆಱೆ ಸಿರಿ ಸವೆದ
ಮನೆಗೆ ಜೀವಂ ತೊಲಗಿದೊಡಲಿಂಗೆ ತೈಲವಿಂಗಿದ ದೀಪ್ತಿಗುದಕವಱತ।
ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆ
ಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ
ಜನಪತಿ ಹರಿಶ್ಚಂದ್ರನೆಲ್ಲವಂ ಮುನಿಗಿತ್ತರಣ್ಯಕ್ಕೆ ನಡೆವಾಗಲು ॥೨೪॥

ಎಡವಿಡದೆ ದಾರಿಯಱುಹಲು ಮುಂತ್ರಿ ಮುಂದೆ ಸುತ
ನೆಡದ ದೆಸೆಯೊಳು ನಿಜಾಂಗನೆ ಹಿಂದೆ ಬರೆ ಭೂಮಿ
ಯೊಡೆಯನೊಡವೆಗಳೊಡೆತನಂಗಳನೊಡಂಬಟ್ಟು ಮುನಿಗಿತ್ತು ಚಿಂತೆ ತನ್ನ।
ಬಿಡೆ ದಕ್ಷಿಣವ ಬಿಟ್ಟು ದಕ್ಷಿಣಾರ್ಥಂಗಳಂ
ಕೊಡುವೆನೆಂಬುತ್ತರವನುತ್ತರಿಸಲುತ್ತರಂ
ಬಿಡಿದು ನಡೆದಂ ನೆರವನಾರುವಂ ಹಾರದಾ ಧೀರ ಕಾಂತಾರದೊಳಗೆ ॥೨೫॥

ಎನ್ನ ಸತ್ಯ ನಿಮಿತ್ಯವಾಯಸಂಬಡಲೊಲ್ಲೆ
ನೆನ್ನನತಿಗಾಳಿ ಚಳಿ ಬಿಸಿಲು ಹಸಿವೆಂಬಿವಂ
ಮುನ್ನ ಕಂಡಱಿಯರೀ ಸ್ತ್ರೀ ಬಾಲರಿವರು ಮೆಟ್ಟಲು ಪಾದರಕ್ಷೆಯಿಲ್ಲ।
ಬೆನ್ನ ಮುಸುಕಲು ಸೀರೆಯಿಲ್ಲೆಡೆಯ ಸಂಬಳಕೆ
ಹೊನ್ನಿಲ್ಲ ಹಸಿದೆವೆನಲೇನೆಂಬೆ ನಡೆಗೆಟ್ಟ
ಡಿನ್ನು ನಿಲುವೆಡೆಯಾವುದೆಂದು ಹಲವಂ ಚಿಂತಿಸುತ್ತ ಭೂಭುಜ ನಡೆದನು ॥೨೬॥

ಮುಗುದರಡವಿಯ ಗಿಡಮರಂಗಳಂ ನೋಳ್ಪ ಖಗ
ಮೃಗವನೀಕ್ಷಿಸುವ ಶಬರಾಳಿಯಂ ಕಾಣ್ಬ ವಾ
ಸಿಗೆ ನಡೆವ ನಿಲುವ ಭೂಪನನೆಯ್ದುಕೊಂಬ ಭರದಿಂ ಮಿಾಱ ಕಿಱುದೆಡೆಯನು।
ಬಗೆಯದೆಂತಕ್ಕೆ ನಡೆಯಲು ಮೇಲೆ ಕವಿವ ಗಾ
ಳಿಗೆ ಬಿಸಿಲ ಬಿಸಿಗೆ ಹಸಿವಿಂಗೆ ತೃಷೆಯುಬ್ಬರದ
ದಗೆಗೆ ಸೈರಿಸಲಾಱದನುಗೆಟ್ಟು ನಡೆಗೆಡಲು ತೊಡಗಿದರದೇವೊಗಳ್ವೆನು ॥೨೭॥

ನಡೆಗೆಟ್ಟು ಹಿಂದುಳಿಯೆ ಪತಿ ಮುಳಿದಪಂ ಮಿಾಱ
ನಡೆವೆನೆನೆ ಕಾಲ್ ಕುಪ್ಪಳಿಸಿ ನೋಯುತಿವೆ ನೋವ
ನೊಡೆಮೆಟ್ಟಿ ದಡದಡನೆ ಪರಿವೆನೆಂಬಡೆ ಬೆಂದ ದೈವವಱಿವೊಱೆ ಹೊಱಿಸಿತು।
ಮುಡಿ ವೊಲೆ ನಿತಂಬ ಭಾರಕ್ಕೆ ತೊಡೆ ನಡು ಕೊರಳ್
ಕಡಿವಂತಿರಾದಪ್ಪುದೇಗೆಯ್ವೆನೆಂದು ಸಿಡಿ
ಮಿಡಿಗೊಂಬ ಮಾನಿನಿಯ ಭರವನಾಲಸಿ ನಿಲುವನವನೀಶ ಮರನಡಿಯೊಳ್ ॥೨೮॥

ಬಾಡಿದ ಮೊಗಂ ಬಱತ ಬಾಯ್ ಕೆದಱಿದಳಕವ
ಕ್ಕಾಡುವ ಬೆಮರ್ ತೊನೆದು ಮಿಡಿವ ವೊಲೆ ನಡುಬೆನ್ನ
ನೀಡಿಱುವ ಮುಡಿ ಕೊರಗಿದಕ್ಷಿ ತೋಳಂ ತೂಗಿ ಬಾತ ಬೆರಳೊರಸಿ ಮಸೆದು।
ಪಾಡಳಿದ ತೊಡೆ ಹಲವು ಹರಳೊತ್ತಿ ಬೊಕ್ಕೆಗಳು
ಮೂಡಿ ನಡೆಗೆಟ್ಟ ಮೆಲ್ಲಡಿಯ ನಿಜವನಿತೆಯಂ
ನೋಡಿ ಸುಯ್ದನೆ ಸುಯ್ದನಂದು ಸಪ್ತದ್ವೀಪ ಪತಿ ಹರಿಶ್ಚಂದ್ರ ನೃಪನು ॥೨೯॥

ಸುತನನಡಿಗಡಿಗೆತ್ತಿಕೊಂಬ ನಡೆಗೆಡುವ ನಿಜ
ಸತಿಯ ನಡಿಗಡಿಗೆ ಬೋಳೈಪ ಬಳಲುವ ಚಮೂ
ಪತಿಯನಡಿಗಡಿಗೆ ಬಿಡದುಪಚರಿಸುವ ಚಿತ್ತದಾವೇಶದಗ್ರದ ಭರದಲ।
ಅತಿಬಿಸಿಲು ಗಾಳಿ ಕಲು ಮುಳು ಕ್ಷುತ್ಪಿಪಾಸೆ ಜಾ
ಡ್ಯತೆಗಳೆಂಬಿಂತಿವಱ ಕಾಟದಿಂ ಮೊಳೆವ ಧಾ
ವತಿಯನಱಿಯದೆ ನಡೆದನಕಟಕಟ ಭೂಮಿಪಂ ಕಾಲಕ್ಕೆ ಕೈಮುಗಿಯುತ ॥೩೦॥

ಭರದಿಂದ ನಡೆತಂದು ಕೂಡಿಕೊಂಡಂ ಮುನಿಯ
ತೆಱಕಾಱನಿಂದುವಂ ಬೆಂಬಿಡದ ರಾಹುವಿನ
ಪರಿಯೊಳಲ್ಲಿಂ ಹಿಂದೆ ಪಾಪಿ ಕೌಶಿಕನೆಂದಿನಿಂದ ನೂರ್ಮಡಿ ಬಿಸಿಲನು।
ತರಣಿಗಿತ್ತನಿಲನಂ ನಿಲಿಸಿ ಮುಂಬಟ್ಟೆಯೊಳು
ಗಿರಿಗಳಂ ದರಿಗಳಂ ಕಮ್ಮರಿಗಳಂ ಘೋರ
ತರುಗಳಂ ಮೆಳೆಗಳಂ ಖಗಮೃಗಂಗಳನಂದು ನಿರ್ಮಿಸಿದನಾ ಮುನಿಪನು ॥೩೧॥

ಬಟ್ಟೆಯುಂ ತೊಡೆದು ಮುಂದೊಡ್ಡುಗಲ್ಲುಗಳನೊಡೆ
ದಿಟ್ಟು ನೆಲನಂ ಕಾಸಿ ತಳಿತ ನೆಳಲೊಳು ಮುಳ್ಳ
ನೊಟ್ಟಿ ಹಸಿವಂ ತೃಷೆಯನತಿಡಗೆಯನವನೀಶ್ವರನ ಕಳತ್ರಯಕೆ ತೋಱ।
ದಿಟ್ಟ ವಾರಿಯೊಳುಳ್ಳ ನೀರೆಲ್ಲವಂ ಕೆಡಿಸಿ
ಮುಟ್ಟಿ ನಾನಾಕ್ರೂರ ಮೃಗವಾಗಿ ಬಂದಡ್ಡ
ಗಟ್ಟಿ ಗರ್ಜಿಸುತ ಮಾಯಾವೇಷದಿಂದೊಡನೆ ಬಂದ ವಿಶ್ವಾಮಿತ್ರನು ॥೩೨॥

ಮೆಳೆಗಳೊಳು ಬಾಗಿ ಮರದೊಳು ಮುರಿದು ಮುರಿದಿಱಬಿ
ನೊಳು ಸುತ್ತಿ ಕುತ್ತುಱೊಳು ಹಣುಗಿ ಮಿಗೆ ಬೆಳೆದಿಡುಕು [ಪೊಕ್ಕು ಪಿರಿಯ
ಱೊಳು ಕುಸಿದು ಹೊದಱನೊಳು ನುಸುಳಿ ನಳುವಿನೊಳಡಗಿ ನಾಳಲೊಳು
ಕುಳಿಯೊಳೊರ್ಗುಡಿಸಿ ಡೊಂಗರನನೇಱ ಸರುವುಗಳೊ
ಳಿಳಿದದಟುಗೆಟ್ಟು ಬೆಂಡಾದ ಸುಖಿಗಳನುಗ್ರ
ದಳಲ ಬೇಸಱ ಬೇಗೆಗಿಟ್ಟು ವಿಶ್ವಾಮಿತ್ರ ಮುನಿಯನೆಯ್ದದೆ ಮಾಣದು ॥೩೩॥

ಬಳಿವಿಡಿದು ಕೈಗೊಡುವರಿಲ್ಲ ಕಟ್ಟುರಿವಿಸಿಲು
ಸುಳಿಯಲೀಯದು ಕಾಸಿದೊಲೆಯಂತೆ ನೆಲ ಕಾಲ
ನಿಳುಹಲೀಯದು ಹೊದ್ದುವಡೆ ನೆಳಲು ಮುಳ್ಳುಮುತ್ತುಱದೈವಕಡೆ ಗಣಿಸಿದ।
ಬಳಿಕಂದು ಜನನಾಥನಾಗಿಯುಂ ಜನಕೆ ಭೂ
ತಳ ನಾಥನಾಗಿಯುಂ ಭೂಮಿಗಕಟಕಟ ರವಿ
ಕುಲಜನಾಗಿಯು ರವಿಗೆ ತತ್ತ ಹೊತ್ತಿನೊಳನ್ಯನಾಗಿ ತೋಱದನರಸನು ॥೩೪॥

ಬಸವಳಿಯುತುಸುರಲಮ್ಮದ ಸತಿಗೆ ಕೈಗೊಟ್ಟು
ಹಸಿದಳುವ ತನಯಂಗೆ ಹಣುಹಗಿನನಿತ್ತು ನಂ
ಬಿಸುತಿರಲು ಮಾರಿಯಂದದಿ ಬಂದು ತೆಱಕಾಱ ನನಗೆ ತಾ ಭೋಜನವನು।
ಬಿಸಿಲು ಹೊಡೆದೊಡಲುರಿಯುತಿದೆಯೆಂದು ಜಱೆದು ದ
ಟ್ಟಿಸುತಡ್ಡಗೆಡೆದು ಕಾಲ್ವಿಡಿಯೆ ಬೇಡಿಲ್ಲಿ ಸವು
ನಿಸುವುದೆಯೆನಲತ್ತು ಬಳಿಕ ಪೋಗೆಂದಾಣೆಯಿಟ್ಟನಟ್ಟಡವಿಯೊಳಗೆ ॥೩೫॥

ತಂದುದಿಲ್ಲೂರು ದೊರಕಲು ಗಳಿಸಿ ತಂದೀವೆ
ನೆಂದೆಂಬನರಸನಿತ್ತಲ್ಲದಡಿಯಿಡಲೀಯೆ
ನೆಂದೆಂಬ ಮುನಿಪನಿಲ್ಲಿಲ್ಲವೆನೆ ಭೂಪನಿಂತಾಗಬೇಕೆಂಬ ಮೂರ್ಖ।
ನಿಂದ ಮಧ್ಯಾಹ್ನವೊದಲುರಿವ ಬಿಸಿಲೊಳು ಕಾದು
ಬೆಂದಱೆಯ ಮೇಲೆಲ್ಲರಂ ತಗೆದನಕಟ ರವಿ
ಬಂದಸ್ತಗಿರಿ ಮಸ್ತಕನ್ಯಸ್ತಹಸ್ತ ವಿಸ್ತರನಪ್ಪ ಕಾಲತನಕ ॥೩೬॥

ಜಾರೆಯುರು ನಲಿಯೆ ಗಣಿಕಾ ನಿಕರವೆಯ್ದೆ ಶೃಂ
ಗಾರದಿಂದೆಸೆಯುತ್ತ ಸಕಲಮಿಗವಿಕ್ಕೆಯಂ
ಸಾರೆ ಕೌಶಿಕನಿಕರದಾಸಱೋಸರಿಸೆ ಪೊಣರ್ವಕ್ಕಿಗಳ ಜಂಗು ಜರಿಯೆ।
ವಾರಿಜಂಗಳ ಬಿಟ್ಟು ತುಂಬಿಗಳು ಕನ್ನೆಯ್ದಿ
ಲೋರೆಯಂ ಪೊಗೆ ಜಗಕ್ಕೆಯ್ದೆ ತೆಳುಗತ್ತಲೆ ಚ
ಕೋರಿಗಳ ಮನ ನಲಿಯುತಿರೆ ತರಣಿ ಪಶ್ಚಿಮ ಪಯೋರಾಶಿಗೈತಂದನು ॥೩೭॥

ಇಳೆಯಱಿಯಲೆನ್ನ ಕುಲದೊಳು ಪುಟ್ಟಿ ಸರ್ವಭೂ
ತಳಕೊಡೆಯನಾಗಿ ಮೂಲೋಕ ಮುದ್ರಿತ ಕೀರ್ತಿ
ಬಲವಂತನಾಗಿ ಹೆಚ್ಚಿದ ಹರಿಶ್ಚಂದ್ರನಂ ಕೌಶಿಕನ ಕಾಟದಿಂದ।
ಬಳಸುವ ನಿರೋಧಮಂ ಕಾಣಲಾಱದೆ ಚಿಂತೆ
ಮೊಳೆತಡಗುವಂತೆ ಸೂರ್ಯಂ ಪಡುಗಡಲ ನಡುವಿ
ಗಿಳಿದನೆಲ್ಲಾ ದೇಶದುಮ್ಮಳಿಕೆ ಕವಿವಂತೆ ಕಾಳಗತ್ತಲೆ ಕವಿದುದು ॥೩೮॥

ಭೂವರಂ ಚಿಂತಿಸುತ್ತೊಬ್ಬ ನಟ್ಟಡವಿಯೊಳ
ಗಾವೆಡೆಯೊಳೇಗೆಯ್ಯುತಿಪ್ಪನೋ ನೋಳ್ಪೆನೆಂ
ಬೀವಿಕಳದಿಂ ಗಗನ ಹಲಕೆಲವು ಕಂಗಳಂ ಪಡೆದುದೋ ಎಂಬಾದದಿಂ।
ತೀವಿದುವು ನಕ್ಷತ್ರವವನಿಪನ ಸತಿಪುತ್ರ
ರಾವರಿಸುವೀ ತಮಕ್ಕಂಜುಗೆಂದುಱೆ ನಿಶಾ
ದೇವಿ ಹೊತ್ತಿಸಿದ ಹೆಜ್ಜೊಡರೋ ಇದೆಂದೆನಿಸಿ ಮೂಡಿತ್ತು ಶಶಿಬಿಂಬವು ॥೩೯॥

ಮೂಡಿದ ಶಶಾಂಕಂಗೆ ಮಱೆಯಾಗಿ ಪೋಡವಮಂ
ಮಾಡಿ ಕೌಶಿಕನು ಕತ್ತಲೆಗೆ ಕೈವೀಸೆ ನಡು
ಗಾಡೊಳಗೆ ಕಾಡಿಗೆಯು ಸೋನೆವಳೆ ಸುರಿದುದದಕಿನ್ನುಳಿದ ಬಡ ಬಗೆಗಳು।
ಬೇಡ ತಾನುಂಟೆಂಬುದಂ ತನ್ನ ತಾ ಮುಟ್ಟಿ
ನೋಡಿ ಕಂಡಡೆ ಕಂಡನಲ್ಲದುರ್ವಿಯು ಮಾತ
ನಾಡದಿರೆಸಿಪ್ಪಂತೆ ಕಾಳಗತ್ತಲೆ ಕವಿದು ಕಡಲಿಟ್ಟು ಮಡುಗಟ್ಟಿತು ॥೪೦॥

ಲಲಿತನಗರದ ನಡುವಣರಮನೆಯ ಕರುಮಾಡ
ದೊಳಗೆ ಮಱುಹಂಸೆದುಪ್ಪಳ ಹಸೆಯ ಮೇಲೆ ದೆಸೆ
ಗಳ ಸಾಲಭಂಜಿಕೆಯ ಮಣಿವೆಳಗಿನೊಳು ಸುಖದ ಸುಗ್ಗಿಯಂ ಸವಿವರಸನು।
ಬಳಸಿದಡವಿಯ ನಡುವೆ ಕವಿವ ಕತ್ತಲೆಯೊಳಗೆ
ಗುಳಿನೆಲನ ಮೊಳೆಗಲ್ಲ ಮುಳುವಸೆಯ ಮೇಲೆ ಹಸಿ
ದಳವಳಿದು ಹೊದೆಯಲಿಲ್ಲದೆ ಹೊಯ್ವ ಹಿಮವರ್ಷಾಂತಿರ್ದನೇವಣ್ಣಿಸುವೆನು ॥೪೧॥

ಎಡಬಲದ ತೊಡೆಯೊಳೊಱಗಿರ್ದ ಸತಿಸುತರ ನಡಿ
ಗಡಿಗೆ ತಡಹುತ್ತ ಮಂತ್ರಿಯ ಮಲಗಿಕೊಂಡು ನುಡಿ
ದಡೆ ದನಿಗೆ ಶರಭಶಾರ್ದೂಲವೆಯ್ತಂದು ಬಗಿವುವು ಬಳಿಕ್ಕಾನು ಮುನಿಗೆ।
ಕೊಡುವೊಡವೆ ಸಲ್ಲದೊಡಸತ್ಯನಾದಪೆನೆಂಬ
ಕಡುಚಿಂತೆಯಂಜಿಕೆಯ ಬಲದಿಂದ ಸುಮ್ಮನಿಹ
ಪ್ರೋಡವೀಶ್ವರಂಗಿನ್ನು ಮೇಲೆ ಬಹ ಸಂಕಟವನಾವ ಜೀವರು ಕೇಳ್ವರು ॥೪೨॥

ಕುಡಿಯುಳ್ಳಿಯಂ ವೃಶ್ಚಿಕಂ ಮಿಡಿಯೆ ಮಿಡುಮಿಡುನೆ
ಮಿಡುಕುವ ಬಲನನೆತ್ತಿ ನಂಬಿಸುತ್ತಿರೆ ಮಗ್ಗ
ಲೆಡೆಯೊಳಹಿ ಘುಸ್ಸೆನಲು ಹೆದಱಿ ಹಾ ಎಂದೊಱಲುವಂಗನೆಯ ದನಿವಳಿಯಲ।
ನಡೆತಂದು ಹಱಿಮೂಲೆಗೊಂಬ ಹುಲಿ ಕರಡಿಯಂ
ಜಡಿವ ಹೂಂಕೃತಿಗರಣ್ಯದ ಭೂತಭೇತಾಳ
ವಡೆಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದುವಾ ಕೌಶಿಕನ ಪ್ರೇರಣೆಯೊಳು ॥೪೩॥

ನಡನಡನೆ ನಡುಗಿ ಕಣ್ಮುಚ್ಚಿ ತನ್ನೊಡಲನುಱೆ
ಬಿಡಿದಪ್ಪಿಕೊಂಬ ಸತಿಸುತರ ನಂಬಿಸಿ ಬಲಂ
ಗೆಡದೆ ಶಂಕರ ವಿರೂಪಾಕ್ಷ ಶರಣೆಂಬುದೆಂದಡಿಗಡಿಗೆ ಬುದ್ಧಿಗೊಡುವ।
ಪ್ರೋಡವೀಶ್ವರನ ಕೂಡೆ ತೆಱಕಾಱನೆಂದ ನೀ
ನಡವಿಗುಱಿಯಾಗಲೇಕಿವರ ನೋಯಿಸಲೇಕೆ
ಕಡು ಮೂರ್ಖತನವ ಬಿಟ್ಟಸ್ನಾದೊಡಂ ಮುನಿಪನೆಂದುದಂ ಮಾಡೆಂದನು ॥೪೪॥

ಸುಡು ಮಾಣಿದಾವ ನೋವಿಂದೆಲ್ಲರಳಿವ ಕಂ
ಡಡೆ ಕಾಬೆನಲ್ಲದನ್ಯಾಯದಿಂ ನಡೆದೆನ್ನ
ಹಡೆದ ಕುಲಮಂ ಕೆಡಿಸಲಾಪೆನೇ ಎಲೆ ಮರುಳೆ ನೀನೆನ್ನ ಮನದನುವನು।
ಅಡಿಗಡಿಗೆ ತುಡುಕಿ ತೋಡದಿರೆಂದು ಭೂಪಾಲ
ನುಡಿದಾತನಂ ನುಡಿವುತಿರಲು ಹೆಚ್ಚಿದ ರಾತ್ರೆ
ಕಡೆಗಂಡುದಂದುದಯಗಿರಿಯ ಮಸ್ತಕದ ಮೇಲರುಣ ಕಿರಣಂ ಮೊಳೆತುದು ॥೪೫॥

———

## ೧೦

ನಾಡೆ ವಿಶ್ವಾಮಿತ್ರ ಮುನಿಯ ಬೆಸದಿಂ ಬಂದು
ಕೂಡೆ ಮುತ್ತಿದ ದಾವ ಶಿಖಿಯನೆಂತಕ್ಕೆ ನೀ
ಗಾಡಿ ಪುಣ್ಯಾಧೀನದಿಂ ವಾರಣಾಸಿಯಂ ಹೊಕ್ಕನು ಹರಿಶ್ಚಂದ್ರನು ॥ಸೂಚನೆ॥

ನೋಡೆ ಹಳ್ಳದೊಳಿಳಿದು ಕರ ಚರಣಶುದ್ಧಿಯಂ
ಮಾಡಿ ಸಂಧ್ಯಾವಂದನಂಗೆಯ್ದು ತರುಣ ಶಶಿ
ಚೂಡನಡಿದಾವರೆಯನರ್ಚಿಸಿ ಗುರುಸ್ಮರಣೆವೆರಸಿ ಪ್ರಸಾದಫಲವ।
ಸೂಡಿ ತನಯನನೆತ್ತಿಕೊಳುತ ಮಂತ್ರಿಯನು ಮಾ
ತಾಡಿಸುತ ಸತಿಯನೋವುತ್ತ ನಕ್ಷತ್ರಕನ
ಕೂಡುತ್ತರಂಗುಡುತರಣ್ಯಮಂ ನೋಡುತ್ತ ನಡೆದ ಧೀರೋದಾರನು ॥೧॥

ಮುಂದೈಪ ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿ
ಯಿಂದ ಕಾಲ್ ಕಡೆಗಣಿಸಿ ಕವಿವ ಕಾದೆಲರ ಬಿಸಿ
ಯಿಂದ ದೇಹಂ ಕ್ಷುಧಾನಲನ ಬಿಸಿಯಿಂದೊಳಗು ತೃಷೆಯ ಬಿಸಿಯಿಂದ ಬಾಯಿ।
ಬೆಂದು ಬಿರಿದರಳುತ್ತ ಸಾಯುತ್ತ ನೋಯುತ್ತ
ನಿಂದು ನಡೆದಳುಕುತ್ತ ಬಳುಕುತ್ತ ಬರಬರಲು
ಮುಂದೆ ಬಳಿಕೇವೊಗಳ್ವೆ ನಕಟ ನಿಷ್ಕರುಣಮುನಿ ನೆನೆದ ಕುಟಿಲದ ಕುಂದನು ॥೨॥

ವಿನುತ ವಿಶ್ವಾವಸುವಿನಾತ್ಮಭವ ಕೃತವೀರ್ಯ
ನೆನಿಪವನ ಕೈಯಿಂದ ಮಡಿದ ಭೃಗ್ವಾದಿಗಳ
ತನಯನೆನಿಪೊರ್ವ ಮುನಿಯುಗುಳ್ದ ಕೋಪಾಗ್ನಿ ಕಡಲಂ ಕುಡಿದು ಹಸಿವಡಗದೆ।
ಮುನಿದು ಪೊಡವಿಯ ಸುಡುತ ನಡೆತಂದಪುದೊ ರುದ್ರ
ನನಿಮಿತ್ತ ಕಡೆಗಾಲದನಲಂಗೆ ಕೈವೀಸಿ
ದನೊ ಪೇಳಿದೇನೆಂದು ನೃಪನಂಜುತಿರಲು ದಾವಾನಳಂ ಕೈಕೊಂಡುದು ॥೩॥

ಕುತ್ತುಱಾಗಿರ್ದ ಹೆಮ್ಮೆಳೆಗಳಂ ಸುಡುತ ಬಳ
ವೆತ್ತ ಬೆಟ್ಟವ ಸೀಳ್ದು ಸೆಕ್ಕೆಗಳೆವುತ್ತ ಹುಲು
ವೆತ್ತ ನೆಲನಂ ಕರಿಕುವರಿಸುತ್ತ ಬೆಳೆದ ಮರದಿಡುಕುಱೊಳು ನಿಂದುರುಹುತ।
ಹೊತ್ತುತ್ತ ಹೊಗೆಯುತ್ತ ಹಬ್ಬುತ್ತ ಹರಿದು ನೆಗೆ
ಯುತ್ತ ಗಗನವನು ತುಡುಕುತ್ತ ಮುತ್ತಂತಡಸಿ
ಸುತ್ತ ಮುತ್ತಿತ್ತು ದಾವಾನಳನಸತ್ಯಕಾಂತಾರ ದಾವಾನಳನನು ॥೪॥

ಘುಗಿಘುಗಿಲ್ ಘುಗಿಘುಗಿಲ್ ಛಿಳಿಛಿಳಿಲ್ ಛಿಟಿಛಿಟಿಲ್
ಧಗಧಗಿಲ್ ಧಗಧಗಿಲ್ ಘರಿಘರಿಲ್ ಘರಿಘರಿಲ್
ಧಗಧಗಂ ಧಗಧಗಂ ಧಗಧಗಿಲ್ ಛಿಮಿಛಿಮಿಲ್ ಘುರಿಘುರಿಲ್ ಛಟಛಟೆಂದು।
ಒಗೆದು ಧಂಧಗ ಧಗಧಗಂ ಘಳುಘಳೆಂದುಬ್ಬಿ
ನೆಗೆದು ದಳ್ಳುರಿ ಬಳ್ಳಿವರಿದು ಕತ್ತಲಿಸಿ ಕ
ರ್ಬೊಗೆ ಮೀಱಿ ತೋಱಿಕೆಂಗಿಡಿಗೆದಱಿ ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನು ॥೫॥

ಹಿಂದೆ ರಿಪುರಾಯರೆಲ್ಲರ ಕೊಂದದವರ ಕುಲ
ವೃಂದದಳಲುರಿ ನೆಗೆದು ಹೊತ್ತಿ ಹಾರಿರ್ದೀಗ
ಬಂದು ಮುತ್ತಿತ್ತೊ ಕೌಶಿಕನ ತೆಱಕಾಱನರ್ಥವನಿಂದು ಕೊಟ್ಟಲ್ಲದೆ।
ಒಂದಡಿಯನಿಡಲೀಯೆನೆಂದುರಿಯ ಗೆಱೆಯನಾ
ರ್ದಿಂದಿಟ್ಟನೋ ತನ್ನ ಕುಲದವನ ಕಾಯಬೇ
ಕೆಂದು ರವಿಕಿರಣಮಂ ಬಳಸಿದಪನೆನಿಸಿ ದಾವಾಗ್ನಿ ಸುತ್ತಂ ಮುತ್ತಿತು ॥೬॥

ಹೆದಱಿ ಗಜಬಜಿಸಿ ಸತಿಸುತರ ಕೈವಿಡಿದು ನಿ
ಲ್ಲದೆ ಸಾರು ಮಾರಿ ಬಂದತ್ತು ನಡೆನಡೆಯೆಂದು
ಕದುಬಿ ಹರಿಹರದತ್ತಲತ್ತ ದಾರಿಯನಱಸುವನಿತಕೆಲ್ಲಾ ದೆಸೆಯನು।
ಹೊದಿಸಿ ಕೈಕೊಂಡ ಬೇಗೆಯ ಬೇಗಮಂ ಕಂಡು
ಮದವಳಿದು ನಿಂದ ಭೂಪನ ಮೇಲೆ ಸಾಯಲಾ
ಱದೆ ನೊಂದು ಬೆಂದ ನಾನಾ ಖಗ ಮೃಗಂ ಕವಿದವೇನೆಂಬೆನದ್ಭುತವನು ॥೭॥

ಹೆಡೆ ಬೇವ ಸರ್ಪ ಬರಿ ಬೇವ ಸಾರಂಗ ಕೊರ
ಳೆಡೆ ಬೇವ ಸಿಂಹ ತಲೆ ಬೇವ ಹುಲಿ ಕಿವಿ ಬೇವ
ಕಡವು ಕಾಲ್ಬೇವ ಮರೆ ತುಟಿ ಬೇವ ಜಂಬುಕ ವೃಕಂ ಬಸುಱ್ ಬೇವ ಶಶಕ।
ತೊಡೆ ಬೇವ ಹುಲ್ಲೆ ಬಾಲಂ ಬೇವ ಕೋಣ ಹೆ
ದ್ದೊಡೆ ಬೇವ ಹಂದಿ ಪಚ್ಚಳ ಬೇವ ಸೀಳ್ನಾಯಿ
ಕಡಗಿ ಕಂಗೆಟ್ಟು ದೆಸೆಗೆಟ್ಟು ಕವಿದವು ಹರಿಶ್ಚಂದ್ರ ಭೂಪತಿಯ ಮೇಲೆ ॥೮॥

ಕರಿಗೆ ತೊಲಗಿ ದಡೆಹುಲಿ ಮೊರೆವುದೋಸರಿಸಿದಡೆ
ಕರಡಿ ಕೆಲೆವುದು ಹಿಂಗಿದಡೆ ಸರ್ಪ ತುಡುಕುವುದು
ತಿರುಗಿದಡೆ ಸಿಂಹ ಗರ್ಜಿಪುದೊಲೆದಡೆಕ್ಕಲಂ ಚೋಣಿವುದೊಯ್ಯನೆ ಕಳಿದಡೆ।
ಮರೆ ಹೊಯ್ವುದದನುಳಿದಡೆಮ್ಮೆ ಯೆಱಗುವುದು ಪರಿ
ಹರಿಸೆ ಸಾರಂಗವಿಱುವುದು ಮುರಿಯೆ ಕೋಣನಿ ॥೯॥
ಪ್ಪೊರಸುವುದು ಎನುತ ಬಾಯ್ವಿಟ್ಟು ಮಱುಗಿದ ಭೂಪ ಸತಿಸುತರ್ ಬೆಱಗಾಗಲು

ನೂಕಿ ಮೃಗದಿಕ್ಕೆಯುಂ ಬಿಟ್ಟು ದಡವೇಱುತಾ
ಲೋಕಿಸುತ ಮುನ್ನಟ್ಟಿ ಮುಟ್ಟಿ ದೆಸೆದೆಸೆಯೊಳೇ
ಕಾಕಾರವಾದಗ್ನಿಯಂ ಕಂಡು ಗಗನದಮರರು ನೊಂದು ಬೆಂದು ಮಱುಗಿ।
ಆ ಕವಿದುದಾವುರಿದುದಾ ನೆಗದುದಾ ವೊಗೆದು
ದಾ ಕೊಂದುದೆರೆಲೆ ಶಿವಶಿವ ಮಹಾದೇವ ಕರು
ಣಾಕರನೆ ರಕ್ಷಿಸು ಹರಿಶ್ಚಂದ್ರನೃಪನನೆನುತಭವಂಗೆ ವೊಱೆಯಿಟ್ಟರು ॥೧೦॥

ನಡುಗಿದನೆ ಬೆದಱದನೆ ತೆಕ್ಕಿದನೆ ತೆರಳಿದನೆ
ಸೆಡೆದನೇ ಪರಿವೇಷವಾದ ರವಿಯಂತೆ ಕಡು
ಗಡಲ ಕಡೆವಂದು ದಿವಿಜಾಸುರರ ಪಡೆಯ ಪಡಲಡೆ ಕೆಡಪಿ ಮೂಲೋಕವ।
ಸುಡುವ ಹೊಸ ವಿಷದುರಿಯ ನಡುವಿರ್ದ ಮೃಡನಂತೆ
ಬಿಡದಡಸಿ ಸುರುಚಿರಜ್ಞಾನಪ್ರಭಾಳಿ ಕವಿ
ದಡಸಿ ಮುತ್ತಿರ್ದ ಪರಮಾತ್ಮನಂತಿರ್ದನವನಿಪನುರಿಯ ದಾಳಿಯೊಳಗೆ ॥೧೧॥

ಮುಟ್ಟಿ ಕಾಶಿಯನು ಹೊಕ್ಕವನಲ್ಲ ಮುನಿರಿಣವ
ಕೊಟ್ಟಾತನಲ್ಲ ದಾನದ ಭೂಮಿಯಿಂದ ಪೋಱ
ಮಟ್ಟಾತನಲ್ಲಾಯು ತುಂಬಿ ಮಡಿದವನಲ್ಲ ಹೋಹಡಾನೊಬ್ಬನಸುವ।
ಬಿಟ್ಟಾತನಲ್ಲ ನಿಜಸತಿ ಸುತರ್ ಮಂತ್ರಿ ಸಹ
ನಟ್ಟಡವಿಯೊಳಗೆ ದಳ್ಳುರಿ ಹೊಯ್ದು ದುರ್ಮರಣ
ವಟ್ಟುಹೋಹಂತಾದುದೇ ಎಂದು ನೃಪತಿ ಮಱುಗುತ್ತ ಮತ್ತಿಂತೆಂದನು ॥೧೨॥

ಧುರಮುಖದೊಳಂತಕನ ಹಸಿವಡಗೆ ಮಾರಿ ಕೊ
ಕ್ಕರಿಸೆ ಬಲುಮೃತ್ಯುವಿನ ಬಾಯ ಬಱನಳಿಯೆ ಭೀ
ಕರ ಭೂತಭೇತಾಳರುದುಗಲಿಸೆ ಖಡ್ಗವಾಯ್ದಣಿಯೆ ನಿಜಭುಜದ ತೀಂಟೆ।
ಹರಿಯೆ ಹಗೆಗಳ ಕೊಂದು ಮುಕ್ತಿವನಿತೆಯ ಪಯೋ
ಧರದ ಮೇಲೊಱಗುವಂತಿಥ ಮಸ್ತಕದೊಳೊಱಗಿ
ಸುರಪಭೋಗಾಂತರವನೆಯ್ದದಿಂತುರಿಯೊಳಳಿವಂತಾದುದೇ ಎಂದನು ॥೧೩॥

ಕಡಗಿ ಕರ್ದೊಗೆ ಸುತ್ತಿ ದಳ್ಳುರಿಗಳಲೆದು ಕೆಂ
ಗಿಡಿಗೆದಱ ಕೆಂಡಂಗಳಡಸಿ ಸುಡೆ ಮಿಡುಮಿಡನೆ
ಮಿಡುಕಿ ಬಾಯ್ಬಿಟ್ಟೊಱಲಿ ಕೆಡೆದೊಡಲು ಮಡಿದು ಕೈಕಾಲ್ ಬೆಂದು ಸುಕ್ಕುಸುಗಿದು ।
ಮಡದಿ ಸುತರಳಿವುದನು ಕಣ್ಣಾರ ಕಂಡು ನಾಂ
ಕಡೆಯಲಳಿವುದಱಂದ ಮುನ್ನವೀ ಬೇಗೆಯೊಳ
ಗಡಗುವೆಂ ಹಿಡಯಬೇಡುಮ್ಮಳಿಸಬೇಡೆಂದು ನೃಪಬೀಳಲನುವಾದನು ॥೧೪॥

ಒಡೆಯನಳಿವಂ ಕಾಣ್ಬ ಪಾಪಿಯೆನ್ನಿಂದಾರು
ಕಡೆಯ ನರಕಿಗಳು ಬಳಿಕಳಿದಲ್ಲಿ ಫಲವಾವು
ದೊಡಲುವಿಡಿದಾನೊಮ್ಮೆ ಮಡಿಯದಿಹುದಿಲ್ಲಲ್ಲ ನುಡಿಯುತ್ತೆ ಪತಿಯ ಮುಂದೆ।
ಮಡಿದೆನಾದಡೆ ಪುಣ್ಯಕೀರ್ತಿಯುಂಟಾಳ್ ಮುಂದೆ
ನಡೆದಲ್ಲದರಸು ನಡೆವನೆ ಕೆಟ್ಟನುಡಿಗಳಂ
ನುಡಿಯದಿರು ತಂದೆಯೆಂದಾಸತ್ಯ ಕೀರ್ತಿ ಭೂಪಾಲಂಗೆ ಕೈಮುಗಿದನು ॥೧೫॥

ಉತ್ತಮ ಕುಲೀನನತ್ಯಧಿಕ ವಿಪ್ರಂ ವೇದ
ವೇತ್ತ ಸರ್ವಾಗಮಜ್ಞಂ ಶೈವನೆಲೆ ನೆಱೆ ನರೆಯ
ಹೊತ್ತವನು ಮನೆಮಕ್ಕಳಂ ಬಿಟ್ಟು ಬೆಂಬಳಿಯ ನಂಬಿ ಬಂದವನು ನಿನ್ನ।
ಮುತ್ತುತ್ತವಗ್ನಿಗೆ ಮುಂದೆ ನೂಕಿ ನರಕಾಳಿಗನಿ
ವಿತ್ತ ನಡೆದಖಿಳಜಗವಱಿಯಲಪಕೀರ್ತಿಯಂ
ಹೊತ್ತುಕೊಂಬವನಲ್ಲ ನೀಂ ಮುಂದೆ ಹೋದಡೆನ್ನಾಣೆಯೆಂದಂ ಮಂತ್ರಿಗೆ ॥೧೬॥

ಭೋಗವಱಿಯದ ತರುಣನಂ ನಿಧಿಗೆ ಕೊಡೆ ತೃಪ್ತ
ನಾಗಿ ತನ್ನಂ ಕೊಡುವುದೆಂಬಾಗಳೆನ್ನನೀ
ಬೇಗೆಗಾಹುತಿಗೊಟ್ಟಡೆನ್ನಿಂದ ತಣಿದು ನಿಮ್ಮೆಲ್ಲರಂ ತಲೆಗಾವುದು।
ಬೇಗ ಕಳುಹೆಂಬ ಸುತನಂ ನೋಡಿ ಸಾಮ್ರಾಜ್ಯ
ದಾಗನನುಭವಿಸಬೇಕಳಿಯಬೇಡೆನಲು ಭೂ
ಭಾಗದೊಡೆತನ ಕೌಶಿಕಂಗಾದುದಿನ್ನೇನನಾಳ್ವೆ ಭೂಭುಜ ಎಂದನು ॥೧೭॥

ತವಕದಿಂದುತ್ತಾನಪಾದ ಭೂಪನ ಮಗಂ
ಧ್ರುವನು ಮಲತಾಯೆನಿಪ್ಪಾ ಸುರಚಿ ಬಯ್ಯೆ ಹೇ
ವವ ತಾಳ್ದು ಶಿವನ ಮೆಚ್ಚಿಸಿ ಬೇಱೆ ಲೋಕವಂ ಪಡೆದು ಹದಿನಾಲ್ಕು ವಿಧದ।
ಭುವನಾಳಿಗಾಧಾರವಾಗನೇ ಮಗನೆ ಬೇ
ಡುವೊಡೀವ ಶಿವನುಂಟು ಪಡೆವ ನೀನುಂಟು ರಾ
ಜ್ಯವನಾಳ್ವ ಭಾಗ್ಯವುಂಟಳಿಯಬೇಡೆಂದು ಭೂಪಂ ಸುತನ ಬೋಧಿಸಿದನು ॥೧೮॥

ತೀದುದೇ ಮಾತು ಡಳ್ಳುರಿ ಮಿಕ್ಕು ಮಿಾಱಿ ಬರು
ತೀದುದೆನಗಿತ್ತರೇ ಬೆಸನ ನೀವರಸ ಯೆಂ
ದಾ ದಿವ್ಯ ಸತಿಗೆಂದನವನಿಪ ಹರಿಶ್ಚಂದ್ರನುಳ್ಳ ಘನ ಸಿರಿ ಸಂಪದ।
ತೀದಕಡೆಯೊಳು ತನ್ನ ಸತಿಸುತರ ಕೊಂದು ತಾಂ
ಹೋದನೆನಿಸದೆ ಪ್ರಾಣಭೀತಿಯಂ ಕಡೆಮುತ್ತಿ
ಬೀದಿವರಿವುರಿಗಬಲೆಯಂ ಕೊಟ್ಟನೆಂಬಕುಂದಂ ಹೊಱುವನಲ್ಲೆಂದನು ॥೧೯॥

ಮುಳಿದು ಮೊಗೆದೆಲ್ಲರಂ ಕೊಲ್ಲದಿಂದೆನ್ನನೊ
ಬ್ಬಳನೆ ಕೊಂದಪುದೆ ಭೂಭುಜ ನಿಮ್ಮ ಕೂಡೆ ಸರಿ
ಯೊಳು ಜೀವವಂ ಬಿಡುವುದುಚಿತವಲ್ಲಂ ಬಳಿಕ ಬಿಡಿವುದತ್ಯಧಮತನವು।
ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ
ಕಳುಹಿಕೊಡಬೇಕೆಂದು ಮೈಯಿಕ್ಕಿ ಬೇಡಿಕೊಂ
ಡಳು ಗಂಡನಂ ಚಂದ್ರಮತಿ ಪತಿವ್ರತೆಯರಾನಂದನಿಧಿ ಲಲ್ಲೆಗಱೆದು ॥೨೦॥

ಒಳಗುಕ್ಕುವಳಲ ಹಸರಿಸಿಕೊಳುತ ಹೋಗೆಂದು
ಕಳುಹಿದರಸಂಗೆಱಗಿ ಬೀಳ್ಕೊಳುತ್ತಿರೆ ಕಂಡು
ತಿಳಿದಿದೆಲ್ಲಗೆ ಹೋಹೆಯವ್ವ ನಿನ್ನೊಡನೆ ನಾಂ ಬಪ್ಪೆನೆಂದೆನುತ ನಿಱಿಯ।
ಸೆಳೆದಪ್ಪಿ ಬಾಯ್ಬಿಡುವ ಸುತನ ಮುಂಡಾಡಿ ಕಂ
ಗಳ ನೀರನೊರಸಿ ಬೇಗದಲಿ ಬಂದಪೆನು ವು
ಮ್ಮಳಿಸದಿರು ಕಂದಯೆಂದೆಂತಕ್ಕೆ ಸಂತೈಸಿ ಪತಿಯು ಕೂಡಿಂತೆಂದಳು ॥೨೧॥

ಒಸೆದು ಬೇಡಿದನಿತ್ತು ಸಲುಗೆಯುಂ ಸಲಿಸಿ ಮ
ನ್ನಿಸುವ ಪತಿಯೆಂಬ ತೇಜದ ಬಲದಿ ಮಱೆದು ಲೆ
ಕ್ಕಿಸೆನಂಜೆನಿದಿರೇಳೆನೋಸರಿಸೆನಳುಕೆನೇಕಾಸನದೊಳಿರುತಿಪ್ಪೆನು।
ಬೆಸಕೈಯೆನುತ್ತರಂಗೊಡುವೆನೊಮ್ಮೆ ಮೆಮ್ಮದ
ಟ್ಟಿಸುವೆನೆನ್ನಪರಾಧ ಕೋಟಿಯುಂ ಮಱೆದು ಕರು
ಣಿಸು ಭೂಮಿಪಾಲಯೆಂದಡಿಗೆಱಗಿ ಬೀಳ್ಕೊಂಡು ನಿಂದಳಾವುರಿಯಿದಿರೊಳು ॥೨೨॥

ದೆಸೆಗಳಿಗೆ ನಮಿಸಿ ದೈವಕ್ಕೆಱಗಿ ರವಿಗೆ ವಂ
ದಿಸಿ ಕೋಟಿ ಭವಭವದೊಳೆನಗೀ ಹರಿಶ್ಚಂದ್ರ
ವಸುಧೇಶನೇ ಗಂಡನಾಗಲಿ ದಿಟಂ ರೋಹಿತಾಶ್ವನೇ ಮಗನಾಗಲಿ।
ವಸು ಸತ್ಯಕೀರ್ತಿಯೇ ಮಂತ್ರಿಯಾಗಲಿ ತರುಣ
ಶಶಿಮೌಳಿಯೇ ದೈವವಾಗಲೆಮ್ಮಿಳೆಯ ಪಾ
ಲಿಸುವ ವಿಶ್ವಾಮಿತ್ರ ನಿತ್ಯನಾಗಲಿಯೆನುತ ಬೇಡಿಕೊಂಡಿಂತೆಂದಳು ॥೨೩॥

ಪೊಡವೀಶ ಕೇಳುಭಯ ಕುಲಶ್ರದ್ಧೆಯಲ್ಲದಿ
ರ್ದಡೆ ನಿನ್ನನಲ್ಲದನ್ಯರನು ಲೆಕ್ಕಿಸಿದೆನಾ
ದಡೆ ಹಿಂದೆ ನಿನಗೊಂದನಿಕ್ಕಿ ನಾನೊಂದನುಂಡಡೆ ಮೂಱು ಕರಣವಱಿಯೆ।
ಮೃಡನಲ್ಲದನ್ಯದೈವಕ್ಕೆ ನಮಿಸಿದಡೆನ್ನ
ಹೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿ
ರ್ದಡೆ ಬಟ್ಟೆಗೊಟ್ಟಪುದು ಕೇಳೆಂದು ಬೊಬ್ಬೆಗೊಡುವಾ ಪೊತ್ತನೇವೊಗಳ್ವೆನು ॥೨೪॥

ತರುಣಿಯು ಮನಂ ಬೆದಱಬೇಕೆಂದು ನೆಗೆದು ದ
ಳ್ಳುರಿ ಗಗನಮಂ ತೀವಿ ಸುತ್ತಿ ಮುತ್ತಿರೆ ಕಂಡು
ಹರಿದು ಹೊಕ್ಕಳು ಹೊಕ್ಕಳೆಲೆಲೆ ಶಿವಶಿವ ಮಹಾದೇವ ಬಗೆಯದೆ ಹೊಕ್ಕಡ।
ತರುಣ ಸೂರ್ಯನಂ ಕತ್ತಲೆಯನೆ ಹೊಕ್ಕಂತಾಯ್ತು
ನೆರೆದ ಕೌಶಿಕನ ಕೃತಕಾಗ್ನಿ ಹರೆದೋಡಿ ಭಾ
ಪುರೆ ಬಟ್ಟೆಗೊಟ್ಟುದೆಂಬಾಗಳುತ್ತಮರ ಮುಂದಾವ ಠಕ್ಕಿರಲಾಪುದು ॥೨೫॥

ಸುರರ ಹೂಮಳೆಯು ತಂಪಿಂ ನೆಲನ ಬಿಸಿಯಾಱಿ
ತುರಿಯ ನೆವದಿಂ ಸತಿಯ ಶುಚಿತನವನಱಿದು ಭೂ
ವರನಪ್ಪಿದಂ ಮಂತ್ರಿಯೆಱಗಿದಂ ಪುತ್ರನಲಿದಾಡಿದಂ ಸಂತಸದಲಿ।
ರಕ್ಕಪೆಯೊಳಗ್ನಿ ಭಯವೆಂತಕ್ಕಿದೊಮ್ಮಿಂಗೆ
ಪರಿಹರಿಸಿತುಗ್ರಮುನಿಗಿತ್ತವಧಿ ಸನಿಹವಾ
ಯ್ತಿರಬಾರದುರವಣಿಸಿ ನಡೆನಡೆಯೆನುತ್ತ ಹರಿತಂದು ವಿಂಧ್ಯವ ಕಳಿದರು ॥೨೬॥

ಹಲವು ನಗರಂಗಳಂ ಹಲವರಣ್ಯಂಗಳಂ
ಹಲವು ಗಿರಿಗಳ ಕಳಿದು ನಡೆತರಲು ಮುಂದೆನುತ
ಕಲಮಲಕುಲಾಪಕರ್ಷಣೆಯಾನು ವಿಪುಳ ಪಾತಕಕೋಟಿ ಕೋಟಿಯೆಂಬ।
ಜಲಜವನ ಚಂದ್ರ ಕಳೆಯಾನು ಭವಭಯ ಕುಧರ
ಕುಲಿಶಾಭಿಧಾನೆಯಾನೆಂದು ಧರೆಗಱುಪಲೆಂ
ದುಲಿವಂತೆ ಘುಳುಘುಳು ಧ್ವಾನದಿಂದೆಸೆವ ಗಂಗಾನದಿ ವಿರಾಜಿಸಿದಳು ॥೨೭॥

ಘುಳುಘುಳಿಸಿ ಕವಿವ ತೆರೆಗಳು ಹಳಚಿ ಕುದಿವ ಮು
ಮ್ಮಳಿಗಡಲು ಮಱುಗಿ ಮಱಹಂ ಮೋದಿ ಮುರಿದಿಳಿವ
ಪೊಳೆವ ಸುಳಿಗಳ ಬಳಗಮಂ ಬಳಸಿ ಭೋರ್ಗರೆದು ಬೊಬ್ಬಿಡುವ ತಳ್ಳಿವೊನಲು।
ಸೆಳೆದು ಕೈಯಿಂ ಹೊಯ್ಲ್ಲ ಹೋರಟೆಯೊಳುಕ್ಕಿ ಮು
ಮ್ಮಳಿಪ ನೊರೆ ಬುದುಬುದವನೊಡೆಗಲಸಿ ಕದಡಿ ಕಂ
ಗಳವಟ್ಟ ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು ॥೨೮॥

ಬಿಡೆ ಕೇಳ್ದಡಘಹರಂ ನೆನೆಯೆ ಪುಣ್ಯೈಘ ನುಡಿ
ದಡೆ ಸರ್ವಸಿದ್ಧಿ ಕಂಡಡೆ ಜನ್ಮನಾಶ ಪೊಗ
ಳ್ದಡೆ ಸುರೇಂದ್ರತ್ವ ಸೋಂಕಿದಡೆ ಕಮಲಜಪದವಿ ಮಱೆದೊಮ್ಮೆ ಕುಡಿತೆಗೊಂಡು।
ಕುಡಿದೆನಾದಡೆ ಮುಕ್ತಿಯವಗಾಹವಿರ್ದನಾ
ದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವ
ವಡೆವರೀ ಗಂಗೆಯಿಂದಾರಾದಡೆಂಬ ಮಹಿಮೆಗೆ ಸಾಕ್ಷಿ ವೇದಮತವು ॥೨೯॥

ನವಭಂಗಭರಿತೆಯಾಗಿಯುಂ ನತರ ಜನನ ಭಂ
ಗವನಳಿವಳತ್ಯಧೋಗಮನೆಯಾಗಿಯುಂ ಮುಟ್ಟಿ
ದವರನೆಸೆವೂರ್ಧ್ವಗಮನರ ಮಾಳ್ಪಳಾವಗಂ ಪ್ರತಿಕೂಲೆಯೆಂದೆನಿಸಿಯುಂ।
ಸವಿದರ್ಗೆ ಪುಣ್ಯಾನುಕೂಲೆಯಪ್ಪಳು ಘನೋ
ದ್ಭವದ ವಿಷದೇಹಿಯಾಗಿಯುಂ ಜನಕ್ಕಮೃತ ದೇ
ಹವನೀವಳಾಹಾ ವಿರುದ್ಧ ಸ್ವಭಾವೆ ಗಂಗಾನದಿ ಧರಾತಳದೊಳು ॥೨೦॥

ಭವಭಯಾಂಬುಧಿಯನುತ್ತರಿಸುವಂತುತ್ತರಿಸಿ
ಯವಗಾಹವಿರ್ದು೦ ಕೃತಾರ್ಥತೆಯನೆಯ್ದುತಿ
ಪ್ಪವರನೀಕ್ಷಿಸಿ ಗಂಗೆ ಹೆಚ್ಚಿದಳು ನರಕಿಗಳು ತನ್ನೊಳಗೆ ತೊಳೆದ ದೋಷ।
ತವಿಲಾದುದಿಂದು ಪತಿಹಿತವೆಯಹ ಸುದತಿಯನ್ಯ
ತವನಱಿಯದವನೀಶನುಭಯ ಕುಲಶುದ್ಧನಹ
ಕುವರನೀ ಸ್ವಾಮಿಹಿತವನಹ ಮಂತ್ರಿಯ ಸೋಂಕು ತನಗೆ ಕೈಸಾರ್ದುದೆಂದು ॥೨೧॥

ಮರುಜೀವಣಿಯನು ಸವಿದಮೃತಮಂ ಕುಡಿದಂತೆ
ಸುರಕುಜವ ಸಾರ್ದು ಪರುಷವ ಮಲಗಿದಂತೆ ಗುರು
ಕರುಣವಂ ಪಡೆದು ಲಿಂಗವಂ ಪಿಡಿದಂತೆ ನೆನೆವವರ ದುರಿತಾರಣ್ಯವ।
ಉರುಹಲು ಸಮರ್ಥೆಯಹ ಗಂಗೆಯೊಳು ಮಿಂದು ಭಾ
ಸುರ ವಾರಣಾಸಿಯಂ ಹೊಕ್ಕನುತ್ತಮ ನೃಪಂ
ಪರಮ ಪ್ರಸಾದವೊಲವಿಂದ ಸದ್ಭಕ್ತನುದರವನು ಪೊಗುವಂತಾಗಳು ॥೨೨॥

ದುರಿತ ವಿಘಟನ ತೇಜದಿಂ ಸೂರ್ಯವೀಥಿಗಳು
ವರಕೀರ್ತಿ ಬೆಳುದಿಂಗಳಿಂ ಸೋಮವೀಥಿಗಳು
ತರವಿಡಿದು ಸಾಲ್ವಿಡಿದು ಸರಿಸವಿಡಿದೋರಣಂಬಿಡಿದು ಪರಿಪಂತಿವಿಡಿದು।
ಭರಿತ ಹೊಂಗಳಸಂಗಳಿಂ ಸುಧಾಭಿತ್ತಿಗಳ
ಪರಿವಿಡಿಗಳಿಂದುಭಯ ವೀಥಿಗಳು ಮೆಱೆದವೀ
ಶ್ವರವಿಶ್ವಪತಿಯ ನಿಳಯದ ವಳಯಮಮಂ ಬಳಸಿ ತಳತಳಿಸಿ ಹೊಳೆಹೊಳೆವುತ ॥೨೩॥

ನಡೆಯೂಡೆ ಮದ್ದು ವಿಷವೊಡಲಂಗೆ ಹಿತವೆಂಬ
ನುಡಿಯಂತೆ ಸುಖವಿಲ್ಲ ಪುಣ್ಯವುಂಟುಳಿದ ಹಲ
ವೆಡೆಯ ಸುಕ್ಷೇತ್ರಂಗಳೊಳಗವಱ ಪರಿಯಲ್ಲ ಸುಖವುಂಟು ಪುಣ್ಯವುಂಟು।
ಕುಡಿವ ಪಾದೋದಕಂ ಪನ್ನೀರ ಪಾನವಾ
ದಡೆ ಧರಿಸುವ ಪ್ರಸಾದಂ ಸುಧಾಪಿಂಡವಾ
ದಡೆ ಬಿಡುವರಾರೆನಿಪ್ಪಂತೆ ಜನದಿಹಪರಕೆ ಸೊಗಸು ಕಾಶೀ ಕ್ಷೇತ್ರವು ॥೨೪॥

ಕ್ಷಾಮ ಡಾಮರ ಕಾಲಲೀಲೆ ಕರ್ಮಾಥರ್ಮ
ವಾಮಯುಸ್ತೋಮ ಮಾಯೋಪಾಯ ಪಾಪ ತಾ
ಪಾಮೋದ ಮದನನ ಮದಂ ಭೂತ ಖ್ಯಾತಿ ಹುಗಲಾಱವಿಂತೀಗಳೆಂಬ।
ಸಾಮರ್ಥ್ಯಮಂ ಹೇಱಿ ಮಿಾಱಿ ರುದ್ರಂಗೆ ವಿ
ಶ್ರಾಮಸ್ಥಲಾವಾಸವೆನಿಸಿ ರಾಜಿಸುವ ನಾ
ನಾ ಮಹಿಮೆಯಿಂದೆಸೆವ ಕಾಶಿಯ ವಿಶೇಷಮಂ ನೋಡುತರಸಂ ನಡೆದನು ॥೩೫॥

ಬಗೆಯುತ್ತ ಬರಬರಲು ಮುಂದೆ ಮುಸುಕಿದ ಪತಾ
ಕೆಗಳ ತಣ್ಣೆಳಲ ತಂಪಿನ ನಡುವೆ ಕಾಣಲಾ
ಯ್ತುಗಜಾಧಿಪತಿ ವಿಶ್ವಪತಿಯ ನಿಳಯದ ಕಳಸ ಕಣ್ಗೆ ಮಂಗಳವಾಗಲು।
ಅಗಣಿತ ಸ್ವರ್ಗದೊಳು ಥಾಳಿಸುವ ಹಲವು ಚಮ
ರಿಗಳ ಮಧ್ಯದೊಳೋಲಗಂಗೊಟ್ಟು ಕುಳ್ಳಿರ್ದ
ವಿಗತ ಮುಕ್ತ್ಯಂಗನೆಯ ಮಸ್ತಕದ ಮಣಿಮಕುಟ ದಗ್ರವೋ ಎಂಬಂತಿರೆ ॥೩೬॥

ಮದನಹರ ವಿಶ್ವಪತಿಗೆಣೆಯಪ್ಪ ದೈವವೀ
ಹದಿನಾಲ್ಕು ಲೋಕದೊಳಗಿಲ್ಲೆಂದು ಪೇಳಲೆ
ತ್ತಿದ ಹಸ್ತವೋ ಪಾತಕಂಗಳಂ ಮಾಡಿ ಬೆಂಗೊಟ್ಟೋಡಿ ಬಂದವರ್ಗಳ।
ಹೆದಱಬೇಡೆಂದೆತ್ತಿದಭಯ ಹಸ್ತವೋ ಪುಣ್ಯ
ಪದವಿಗಳ ಬೇಹವರು ಬಹುದೆಂದು ಕರೆಯಲೆ
ತ್ತಿದ ಹಸ್ತವೋ ಎನಿಪ್ಪಂತೆ ಗಳೆಗಳ ಘನ ವ್ಯಾಸ ಹಸ್ತಂ ಮೆಱೆದುದು ॥೩೭॥

ಮುಗಿಲ ಬಸುಱಂ ಬಗಿದು ನೆಗೆದೊಗೆದು ಮಿಾಱಿ ಮೆಱೆ
ವಗಣಿತ ವೃಷಧ್ವಜಂಗಳ ಸೂರ್ಯ ಕೋಟಿಯಂ
ತಗೆದವೆಂಬಂತೆ ಮಾರ್ಪೊಳೆವ ಹೊಂಗಳಸಂಗಳೆಸೆವ ಶಿವನಿಳಯಂಗಳ।
ಸೊಗಸಿಗೆಡೆಯಾಡಿ ಯಾಡುತ ಪಾಡುತೆಯ್ತಪ್ಪ
ಪೊಗಳಿ ಪೊಡೆಮಡುವ ಬಲಗೊಂಬ ನೋಡುವ ನಲಿವ
ನಗುವ ನಾನಾ ಜನವನೊತ್ತರಿಸಿ ನಡೆತಂದು ವಿಶ್ವಪತಿಯಂ ಕಂಡನು ॥೩೮॥

ಜಯ ಜನಾರ್ದನ ವಂದ್ಯ ಜಯ ಜಲಜಭವ ಪೂಜ್ಯ
ಜಯ ಜಂಭರಿಪುನಾಥ ಜಯ ಪೂಜನಾತೀತ
ಜಯ ಜಾತವೇದಾಕ್ಷ ಜಯ ಜಾಹ್ನವೀ ಮಕುಟ ಜಯ ಜರಾ ಮರಣ ದೂರ।
ಜಯ ಜಯ ಚಿದಾನಂದ ಜಯ ಜಯ ಜಗತ್ರಾಣ
ಜಯ ಜಯ ಜಿನಾರಾತಿ ಜಯ ಜಯ ಜಯಾವರಣ
ಜಯಯೆಂದು ಪೊಗಳುತಿಹ ಜೋಕೆಯಿಂ ಮೆಱುವ ಜಗದೀಶನಂ ನಿಟ್ಟಿಸಿದನು ॥೩೯॥

ನೋಡಿ ಪರಮಾನಂದ ಮೂಡಿ ಸುಖರಸದೊಳೋ
ಲಾಡಿ ಕೀರ್ತಿಸಿ ಹರಸಿ ಹಾಡಿ ಸದ್ಭಕ್ತಿಯಿಂ
ಬೇಡಿ ಮನದೊಳಗೆ ಮಾತಾಡಿ ನೆಱೆ ಬಿನ್ನಹಂ ಮಾಡಿ ಪ್ರಸಾದ ಫಲವ।
ಸೂಡಿ ಪರಿಣಾಮವಂ ಮಾಡಿ ದುಃಸ್ಥಿತಿಯನೀ
ಡಾಡಿ ಭವಜಲವನೀಸಾಡಿ ಬಲ್ಪಿಂ ಮನಂ
ಮೂಡಿ ಬೀಳ್ಕೊಂಡು ಸಂತಸದಿ ಮರಳಿದನುಳಿದ ಲಿಂಗಂಗಳಂ ನೋಡುತ ॥೪೦॥

ಹಿಂದೆ ಪರ್ವತರ ನಾರದರ ಪ್ರಾಯಶ್ಚಿತ್ತ
ದಿಂದ ಹುಟ್ಟಿದ ಕದನದೊಳು ವಿಚಾರಿಸದೆ ಮುನಿ
ಸಿಂದ ಕಾಶೀಪುರಂ ನೆಱೆ ನರಕಭೂಮಿಯಾಗಲಿ ಎಂದು ಶಾಪವಿತ್ತ।
ಕುಂದಿಂಗೆ ಹೇವರಿಸಿ ದುರ್ವಾಸಮುನಿ ತವಕ
ದಿಂದ ಚಂದ್ರಾವತಂಸನನುಪಾರ್ಚಿಸಿ ಭಕ್ತಿ
ಯಿಂದ ಪ್ರತಿಷ್ಠೆಗೆಯ್ದಿರ್ದ ಕಾಮೇಶನಂ ಕಂಡನು ಹರಿಶ್ಚಂದ್ರನು ॥೪೧॥

ಆವಾವ ಪಾತಕಿಗಳಾದಡಂ ಕಾಶಿಯೊಳು
ಸಾವುದು ತಡಂ ಲಿಂಗವಹರೆಂದು ಪೇಳಲಂ
ದೋವಿ ಸನ್ಯಾಸಿಯೊಬ್ಬಂ ದೀವನರಿಸಿಯಂ ಹೋಗುತಿರ್ದೊರ್ವ್ಮ ಬಂದ।
ಗಾವಳಿಗೆ ಹೆದಱಿ ರಂಜಣಿಗೆಯೊಳಗಡಗಲಾ
ದೀವನಱಿಯದೆ ಸುರಿದ ಸುರೆಯಿಂದ ಸತ್ತವಂ
ಭಾವಿಸಲು ಲಿಂಗವಾದ ವಿಭಾಂಡೇಶನಂ ಕಂಡನಂದವನೀಶನು ॥೪೨॥

ಕಡೆಗಾಲದೊಳು ಜಗವ ವೊಗೆದು ದಹಿಸುವ ಮೃಡನ
ನಡುಗಣ್ಣ ಬೆಂಕಿಯಿಂದೊಗೆದು ನೆಗೆದೆಯ್ದೆ ಘುಡು
ಘುಡಿಸಿ ವೀರೇಶ್ವರಂ ನೆರೆದ ದೇವರ ಹಿಂಡನಂಡಲೆದು ವೊದಲಿಗರನು ॥
ಹುಡಿಗುಟ್ಟೆ ಕಂಡು ಮದವಾಱಿ ಹವ್ವನೆ ಹಾಱಿ
ನಡುಗಿ ಶಿವನಿಲ್ಲದಧ್ವರವ ಮಾಡಿದ ದೋಷ
ವಡಗಬೇಕೆಂದು ದಕ್ಷಂ ಪ್ರತಿಷ್ಠಿಸಿದ ದಕ್ಷೇಶ್ವರನನೀಕ್ಷಿಸಿದನು ॥೪೩॥

ಗಡಿಗೆಟ್ಟ ಲಿಂಗಂಗಳೊಪ್ಪಕ್ಕೆ ಭೋಗಂಗ
ಳಡಕಕ್ಕೆ ಮಂಗಳದ ಮಸಕಕ್ಕೆ ರಚನೆಗಳ
ಸಡಗರಕೆ ಬೆಱಗಾಗುತೆಲ್ಲಾ ನಿರೋಧಮಂ ಮಱೆದು ನೋಡುತ್ತರಸನು।
ನಡೆಯುತಿರಲಿದಿರೆದ್ದು ಮಾರಿಯಂದದಿ ಬಂದು
ಕೊಡು ಹೊನ್ನನಿನ್ನು ತಳುವಿದಡೆನ್ನ ಪತಿಯೆನಗೆ
ಕಡುಮುಳಿವನೆಂದು ಜಱೆಯುತ್ತ ನಕ್ಷತ್ರಕಂ ತುಡುಕಿ ಸೆಱಗಂ ಪಿಡಿದನು ॥೪೪॥

ತಪ್ಪದೀ ಪರಿಯೊಳೆಲ್ಲಾ ದೇವರಂ ನೋಡು
ತಿಪ್ಪೆನೆನಲೊಂದು ಮಾಸಂ ನೆಱೆಯದಿಲ್ಲಿಗೈ
ತಪ್ಪೆನ್ನೆಗಂ ಸೈರಿಸಿದೆನು ನೀನೆನಗೆ ಕೊಟ್ಟವಧಿಯಿಂದಿನ ದಿನದಲಿ।
ಒಪ್ಪೆ ಸಂದಪುದೀಗ ಕೊಡು ಹೊನ್ನನಲ್ಲದೊಡೆ
ಮುಪ್ಪಹುದು ನಿನ್ನ ಸತ್ಯಕ್ಕೆಂದು ನೂಕಿ ತಂ
ದುಪ್ಪರದ ಬಿಱುವಿಸಿಲ ಬೀದಿಯೊಳು ತಗೆದನವನಸಿಬರಂ ನಿಷ್ಕರುಣನು ॥೪೫॥

---

ದೇಶವೆಲ್ಲವನನ್ಯತ ಹೊದ್ದದಂದದಿ ಕೊಟ್ಟು
ಕಾಶಿಯ ನಿವಾಸದೊಳು ಸತಿಸುತರ ಮಾಱಿ ತಾಂ
ಹೇಸದೆಯನಾಮಿಕಂಗಾಳಾಗಿ ಋಣವನುತ್ತರಿಸಿದ ಹರಿಶ್ಚಂದ್ರನು ।ಸೂಚನೆ।

ಕೊಟ್ಟವಧಿಯಂ ನೆನೆದು ನೋಡಿ ಹಪ್ಪನೆ ಹಾಱಿ
ಮುಟ್ಟಿ ಬಂದುದು ದಿನಂ ಕೈಕೊಂಡ ತೆಱದವಂ
ಕಟ್ಟುಗ್ರನಭ್ಯಾಸದವರಿಲ್ಲ ಚಾಚಲಡಪಿಲ್ಲ ನಾಂ ಕುಲಧರ್ಮವ ।
ಬಿಟ್ಟು ತಿರಿವವನಲ್ಲವ್ರೋರ್ಲೈಸಿ ನೆಱೆ ಲಜ್ಜೆ
ಗೆಟ್ಟು ಬೇಡುವಡಿಲ್ಲ ದೊರೆಯಿಲ್ಲ ಕೃಷಿಯಿಂದ
ಹುಟ್ಟಿಸುವೆನೆಂಬಡೆಡೆಯಿಲ್ಲವಿನ್ನೇಗೆಯ್ವೆನೆಂದು ಮಱುಗಿದನರಸನು ॥೧॥

ನೆನೆದ ಸುಖಮಂ ಕೊಡುವ ಸರ್ವ ರಾಜ್ಯವನು ಸ
ತ್ಯನಿಮಿತ್ತ ಬಿಟ್ಟು ನಡೆತಂದೆನ್ನ ಸತ್ಯವಿಂ
ದಿನಲಿ ತಾ ಸೂಱೆವೋಯ್ತೆನ್ನಿಂದ ಪಾಪಿಗಳದಾರೆಂದು ಭೂನಾಥನು ।
ಮನ ನೊಂದು ಮತಿಯುಡುಗಿ ಧೃತಿಗೆಟ್ಟು ಮರವಟ್ಟು
ಕೊನರ್ವ ಕಂಬನಿಯು ಬಿಸುಸುಯ್ಯ ಕಪ್ಪಡದ ಮುಸು
ಕಿನ ಮೊಗದ ಕಯ್ಯ ಮಱೆದೆವೆಯಲಿರ್ದಂ ಜಱೆವ ಸಾಲಿಗನ ನುಡಿಯ ನಡುವೆ ॥೨॥

ಏಗೆಯ್ವೆ ಚಿಂತಾಗ್ನಿಯುರಿಯ ಹೊಯ್ಲಿಂ ಕರಗಿ
ಹೋಗದಿರನೆಚ್ಚಱಿಸಬೇಕೆಂದು ಸತಿಯುವಧಿ
ಮೇಗೆರಡು ಜಾವವಿದಱೊಳಗೆ ತಿದ್ದುವ ಬುದ್ಧಿಯಂ ಕಾಣಬೇಕಲ್ಲದೆ ।
ಮೂಗುವಟ್ಟಿರ್ದಡೇನಹುದೆಂದಡಿರದೆ ಬಳಿ
ಕೇಗೆಯ್ವೆ ಪೇಳೆನಲು ಸಾಲದೊಳು ಪೋದನಿತು
ಪೋಗರೆಮ್ಮಿಬ್ಬರಂ ಮಾಱಿ ಬಳಿಕುಳಿದುದಂ ಕಾಣು ನಡೆನಡೆ ಎಂದಳು ॥೩॥

ಕಡುನಿರೋಧಂಗೊಳಿಸಿ ದೇಶದಿಂ ಪರದೇಶ
ಕೊಡವರಿಸಿತಲ್ಲದಾನಿರ್ದು ನಿಮ್ಮಂ ಮಾಱಿ
ಗೊಡಲಾಪನೇ ಎಂದಡೆಲೆ ಮರುಳೆ ಸರ್ವಕ್ಕೆ ಮೊದಲು ಸತಿಸುತರು ತನ್ನ ।
ಒಡಲು ಕಡೆ ನೇಮಕ್ಕೆ ಸತ್ಯಕ್ಕೆ ಬಂಧನ
ಕ್ಕೆಡೆಯುಲಳುಪಲು ಶಿವ ಮನಂ ನೋಳ್ಪನೈ ಲಜ್ಜೆ
ಗೆಡದೆಮ್ಮ ಮಾಱು ಮತ್ತಾದುದಾಗಲಿ ಎಂದಡವನಿಪನೊಡಂಬಟ್ಟನು ॥೪॥

ಪೊಡವಿಪಂ ಸತಿಸುತರ ತಲೆಗಳಲಿ ಹುಲುಗಟ್ಟಿ
ನಡೆನಡೆದು ಕೈವಿಡಿದು ಮುಂದೊಡ್ಡಿ ತೋಱುತಂ
ಗಡಿಗಳೊಳು ಬೀದಿಯೊಳು ಸಂದಿಯೊಳು ಪುರದೊಳೋರಂತೆ ನಾಚಿಕೆಯನುಳಿದು ।
ಪೊಡವಿಪ ಹರಿಶ್ಚಂದ್ರ ಭೂವರನ ತನಯುನಂ
ಮಡದಿಯಂ ಮಾಱುಗೊಂಬಧಿಕರಿಲ್ಲಾ ಎಂದು
ನಿಡು ಸರದೊಳೊಱಲಿ ಜನಕಱುಪುತ್ತ ತೊಳಲಿದಂ ಸತ್ಯನಿಧಿ ಭೂಪಾಲನು ॥೫॥

ಆನಿಮಿತ್ತ ಮುನಿವ ಮುನಿಪನ ಬೆಸದೊಳಗ್ನಿ ವಿ
ಪ್ರನ ವೇಷದಿಂದ ಬಂದಾವಾವ ಸತಿಪುತ್ರ
ರೆನಿಬರವರೆಂದಡಿವರಿಬ್ಬರೆನಲಿವನಬಲನೀವನಿತೆ ಮುಪ್ಪಿನವಳು ।
ಮನೆಯೊಳಿನ್ನೊಳ್ಳಿತಹರಾರುಂಟು ತಾಯೆಂದ
ಡೆನಗುಳ್ಳರಿವರಯ್ಯ ಕೊಂಡೆನ್ನ ಸಾಕಿಕೊ
ಳ್ಳೆನೆ ಬೆಲೆಯ ಹೇಳೆನಗೆ ಲಾಗಾಗೆ ಹೊಂಗೊಡುವೆನೇಳೆಂಟು ದಿನಕೆಂದನು ॥೬॥

ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆ
ನೆಂದು ಭಾಷೆಯನಿತ್ತೆನೀಯದಿರ್ದಡೆ ಹಾನಿ
ಬಂದಪುದು ಲಾಗನಱಸದೆ ನಿನ್ನ ಮನಕೆ ಬಂದನಿತರ್ಥಮಂ ಕರುಣಿಸು ।
ತಂದೆಯೆನೆ ವನಿತೆಗಿಪ್ಪತ್ತು ಸಾವಿರವನೀ
ನಂದನಂಗಿಪ್ಪತ್ತು ಸಾವಿರವನೀವೆನೆನೆ
ಬಂದುದೆನಿಸುವುದೆಮ್ಮ ತೆಱಕಾಱಗೆಂದೆನಲು ಬಂದುದೆನಿಸಿದನಾಗಳು ॥೭॥

ಬಂದುದೇ ನಕ್ಷತ್ರನಾಮ ಮುನಿ ಎನಲೇನು
ಬಂದುದಾಂ ಬಂದ ದಿನ ಮೊದಲಿಂದು ತನಕೆನ್ನ
ಹಿಂದುಳಿದ ಬತ್ತಾಯ ಬಂದುದೆನ್ನೊಡೆಯಂಗೆ ಕೊಡುವ ಹೊಸ ರಾಸಿ ಹೊನ್ನ ।
ತಂದೀಗ ಕೊಡು ಕೊಡದೊಡಿಲ್ಲೆನ್ನು ಹೋಗಬೇ
ಕೆಂದಡೀ ಹೊನ್ನ ಬತ್ತಾಯಕ್ಕೆ ತೆಱುವನ
ಲ್ಲೆಂದಡೀ ಮಧ್ಯಸ್ಥ ವಿಪ್ರ ಮೆಚ್ಚಲು ಕೊಂಬೆನವನೀಶ ಕೇಳೆಂದನು ॥೮॥

ಈತನನಿತರ್ಥಮಂ ಕೊಂಬುದುಚಿತವೆ ಹೇಳು
ತಾತ ಪಕ್ಷೀಕರಿಸದೆಂದೆನಲು ನಾಲ್ಕೆರಡು
ಮಾತಂಗದುದ್ದದರ್ಥದ ಸಾಲವಂ ಬೇಡ ಬಂದವಂಗಿನಿತು ಘನವೇ ।
ಭೂತಳಾಧಿಪ ಮುನಿದು ಪೇಳೆನಿರ್ದುದನೆಂಬೆ
ನೀತಗಿದು ಮರಿಯಾದೆಯೆನೆ ಜಲವನುಳಿದಬುಜ
ಕಾ ತರಣಿ ಮುನಿವನೆನೆ ನೆಲೆಗೆಟ್ಟು ಬಂದವರ್ಗೆ ಮುನಿಯದವರಾರೆಂದನು ॥೯॥

ವಿನಯದಿಂ ಕಂಡುದಂ ನುಡಿದಡೆನ್ನಂ ನಿನಗೆ
ಮುನಿದನೆಂದೆಂಬೆ ನೀಂ ಮುನಿದು ಮಾಡುವುದೇನು
ಜನಪ ಎಮ್ಮೊಡವೆಯಂ ಕೊಂಡೀಗ ಹೋಹೆವೆಂದೇಳೆಲೆಗೆ ಸವುಡಿದೊತ್ತೆ।
ಮನೆಯ ಕೆಲಸಕ್ಕೆ ನಡೆ ಹುಲು ಹುಳ್ಳಿ ತರಲು ಕಾ
ನನಕೆ ಹೋಗೇಳೆಲವೋ ಚಿಣ್ಣ ಎಂದಕಟ ಮಾ
ನಿನಿಯಂ ಕುಮಾರನಂ ಜಱೆದನಾ ಕಪಟವಟು ವೇಷಮಯದನಿಲಸಖನು ॥೧೦॥

ಹೋಹೆನೇ ತಂದೆ ಬೊಪ್ಪಯ್ಯ ಎಂದೆಂದು ಕಡು
ನೇಹದಿಂದಪ್ಪಿ ಕರುಣಂದೋಱು ಕಂಬನಿಯ
ಕಾಹೊನಲೊಳದ್ದುವ ಕುಮಾರನಂ ಕಾಲ್ಗೆಱಗಿ ತಲೆವಾಗಿ ನಿಂದ ಸತಿಯ।
ಬೇಹೊಡೆಯ ನಾನಿರಲು ಮಾಱುದವನಂ ಕೇಳ್ವ
ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜ
ದೇಹಕ್ಕೆ ಜಱೆಯುತ್ತ ಕೊಂಡೊಯ್ದನವನಿಪನ ಮನ ಮಱುಗಬೇಹುದೆಂದು ॥೧೧॥

ಧುರದೊಳಗೆ ಕಾದಿ ಜೂಜಾಡಿ ಸೋಲದೆ ಸವಿ
ಸ್ತರಮಪ್ಪ ಸಿರಿ ಹೋಯ್ತು ಪುರ ಹೋಯ್ತು ಧರೆ ಹೋಯ್ತು
ಪರಿವಾರ ಹೋಯ್ತು ನಿಷ್ಕಾರಣಂ ನಾರಿ ಹೋದಳು ಕುಮಾರಂ ಹೋದನು।
ಉರಿ ಮಾರಿಯವಧಿ ಬಂದುದು ಋಣವನಿನ್ನಾವ
ಪರಿಯೊಳುತ್ತರಿಸಿ ಶುಚಿಯಹೆನು ದುಷ್ಕರ್ಮ ವಿ
ಚ್ಛೊರಸುತಿದೆ ಮೇಲೇನುಗತಿಯೆಂಬ ಭೂಪಂಗೆ ಮಂತ್ರೀಶನಿಂತೆಂದನು ॥೧೨॥

ಸಂಗರದೊಳೀರೇಳು ಲೋಕದರಸುಗಳ ಸ
ಪ್ತಾಂಗಮಂ ಕೊಂಬ ನಿನ್ನಂ ನುಡಿಯ ತೊಡಕಿನ ಬೆ
ಡಂಗಿನಿಂ ಸೋಲಿಸಿ ಸಮಸ್ತ ರಾಜ್ಯವನು ಬಡಮುನಿ ಕೊಂಡು ಮೇಲೆ ಋಣವ।
ಹೊಂಗಿಸಿ ತಗುಳ್ವುದಿದು ದೈವಿಕಂ ದುಷ್ಕರ್ಮ
ದಂಗವಲ್ಲೀಶ್ವರ ಮನಂ ನೋಡಿದಪನು ಧೈ ॥೧೩॥
ರ್ಯಂಗೆಡದೆ ನಡೆಯೆ ಲೇಸೊಡೆಯರಱಿಯದ ಬಿಟ್ಟಿಯಲ್ಲರಸ ಚಿತ್ತೈಸೆಂದನು

ಖಗ ವಂಶದಿಕ್ಷ್ವಾಕು ಭೂವರನ ಪೀಳಿಗೆಯೊ
ಳೊಗೆದ ತ್ರಿಶಂಕು ವಸುಧಾಧಿ ನಾಯಕನ ಹೆ
ಮ್ಮಗ ಹರಿಶ್ಚಂದ್ರನಂ ಮಾಱುಗೊಂಡೋಲೈಸಿಕೊಂಬರಿಲ್ಲಾ ಎನುತ್ತ।
ಬಗೆಬಗೆದು ಪುರದ ಕೇರಿಯ ಮನೆಯೊಳಡ್ಡ ಬೀ
ದಿಗಳ ಬೀದಿಯ ನಿಂದ ನೆರವಿಗಳ ಜನಮುಮಂ
ಮಿಗೆ ಕೇಳಿಸುತ್ತ ತೊಳಲಿದನು ಮಧ್ಯಾಹ್ನ ಮೊದಲಾಗಿ ಕಡೆ ಹಗಲ ತನಕ ॥೧೪॥

ಒಡವೆಯಂ ಕೊಡುವ ಮಾತಂತಿರಲಿ ವಸ್ತುವಿನ
ಕಡೆಗೇಳ್ವರಿಲ್ಲ ಕೇಳದೆ ಮಾಣ್ದಡಂ ಕೂಡೆ
ನುಡಿವರಿಲ್ಲಂ ಹೊಸಬರೆಂದು ನೋಡುವರಿಲ್ಲ ಪೇಳ್ವಡಾಲಿಸುವರಿಲ್ಲ।
ಕಡೆಯಲನ್ನರೆ ಜಾವದವಧಿಯಿದು ತಪ್ಪಿತಾ
ದೊಡೆ ಬಳಕ್ಕೇನು ಮಡಿಯಿತ್ತೊಡಂ ಮೂರ್ಖ ಮುನಿ
ಕೆಡೆನುಡಿವನೆನಲನ್ನು ಮಾಳ್ಪುದೇನೆಂದು ಬೀದಿಯೊಳು ಚಿಂತಿಸುವಾಗಳು ॥೧೫॥

ಮಡದಿಯುರನಿರಿಸಿಕೋ ಎಂದು ನಾಂ ಬೇಡಿಕೊಂ
ಡಡೆ ಮೀಱಿ ಹೊಲತಿಯುರ ನೊಲ್ಲೆನೆಂಬಣ್ಣನಂ
ಕಡೆಗನಾಮಿಕನ ಕಿಂಕರನಾಗಿ ಸುಡುಗಾಡ ಕಾವಂತೆ ಮಾಳ್ಪೆನೆಂದು।
ಕಡು ಮೂರ್ಖ ಕೌಶಿಕಂ ಕಾಲನಂ ಕರೆದು ನೀಂ
ಬಿಡದನಾಮಿಕನಾಗಿ ಧನವನಿತ್ತರಸನಂ
ತಡೆಯೆಂದು ಮುನ್ನೊಂದು ತಿಂಗಳೆನೆ ಕಳುಹೆ ಬಂದಾ ಹೊತ್ತ ಹಾರಿರ್ದನು ॥೧೬॥

ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುಱು ದಡದಡಿಸಿ ತರಹರಿಸು
ವಡಿಯ ಕೆದಱಿದ ತಲೆಯುನಡಸಿ ಸುತ್ತಿದ ಮುಪ್ಪುರಿಯ ಬಾರಿಕಡ್ಡಣಿಗೆಯು।
ಬಿಡದೆ ಥಟ್ಟನೆ ತೇಗಿ ನೆರವಿಯಂ ಬಯ್ವ ಬಿಱು
ನುಡಿಯ ಕಲವೀರಬಾಹುಕ ಬರುತ್ತಂ ಮಾಱು
ವೊಡೆ ಕೊಂಡು ಹೊಂಗೊಡುವೆ ನಾನೆಂದು ತನ್ನ ಹಡಪಿಗನಿಂದ ಕೇಳಿಸಿದನು ॥೧೭॥

ಕೊಡುವಾತನಾರು ಬೆಲೆಯೇನು ಮಾಱಿಸಿಕೊಂಬ
ಪೊಡವೀಶನೆಂಬನಾರೋ ವೀರಬಾಹು ಕೇ
ಳ್ವಡೆ ಕೊಂಬನೀಗಳೆಂದೆನೆ ನೃಪಂ ಬೆಱಗಾಗಿ ಸೂರ್ಯವಂಶದಲಿ ಹುಟ್ಟಿ।
ಮೃಡಮೂರ್ತಿ ವಾಸಿಷ್ಠಮುನಿಯ ಕಾರುಣ್ಯಮಂ
ಪಡೆದೆನ್ನನೀ ಹೊಲೆಯ ಮಾಱುಗೊಂಡಪನೆಂಬ
ನುಡಿವ ಬಲುಹಂ ನೋಡು ನೋಡೆಂದು ಕಡುಮುಳಿದು ಕೋಪಿಸಿದನವನೀಶನು ॥೧೮॥

ನಡುಗದಂಜದೆ ಹೆದಱದೋಸರಿಸದಕಟಕಟ
ಕಡೆಯ ಹೊಲೆಯಂ ಮೀರೆದಪ್ಪಿ ಬಂದೆನ್ನ ತ
ನ್ನೊಡೆಯಂಗೆ ದಾಸನಾಗೀಗಳೆಂದೆಂಬುದಿದು ಕಾಲಗುಣವೋ ಎನ್ನನು।
ಎಡೆಗೊಂಡ ಕರ್ಮಫಲವೋ ಕಡೆಗೆ ಮೆಣಸು ಹುಳಿ
ತಡೆ ಜೋಳದಿಂ ಕುಂದೆ ನೋಡು ನೋಡೆಂದು ಘುಡು
ಘುಡಿಸಿ ಕೋಪಾಟೋಪದಿಂ ಜಱೆದು ಝುಂಕಿಸಿದನವನಿಪನನಾಮಿಕನನು ॥೧೯॥

ಕೇಳಿ ಬಂದಾರ ಜಱೆದಪೆಯೆನಲು ನಿನ್ನ ಹಡ
ಪಾಳಿಯನದೇಕೆನ್ನನಱಿದಱಿದನಾವಿಕಂ
ಗಾಳಾದಪಾಯೆಂದು ನುಡಿದನಿಂತೆನಬಹುದೆ ಕೀಳು ಮೇಲಂ ನೋಡದೆ ।
ಕೀಳಾರು ಮೇಲಾರು ಹದುಳವಿಪ್ಪಾನು ಚಾಂ
ಡಾಳನೋ ಹುಸಿಯ ಹೊಲೆಯಂ ಹೊಱುವ ನೀನು ಚಾಂ
ಡಾಳನೋ ಹೇಳೆಂದೊಡಾನೀಗ ಹುಸಿದುದೇನೆಂದನು ಹರಿಶ್ಚಂದ್ರನು ॥೨೦॥

ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್
ಬನ್ನಿಯೆನ್ನಂ ಮಾಱುಗುಡುವೆನೆಂದೆನೆ ದಿಟಂ
ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮ ದ್ವಿಜರು ಕೊಂಬುದೆಂದು ।
ಮುನ್ನ ನೀನಾಡಿತುಂಟೇ ಹೇಳು ಭೂಪಾಲ
ನಿನ್ನ ನುಡಿ ನಿನಗೆ ಹಗೆಯಾಯ್ತು ಕಂಡುದನಲ್ಲ
ದೆನ್ನೆನೀ ಹೊಲೆ ಹುಸಿಯ ಹೊಱುವವಂ ಹೊಲೆಯನಲ್ಲದೆ ಬಳಕ್ಕಾರೆಂದನು ॥೨೧॥

ದೊರೆಗೆಟ್ಟು ಹುಸಿದೊಡಂ ನರಕ ರಾಜ್ಯಾಂತರಂ
ನರಕವರಸುಗಳಿಗಾದೇಶವೆಂದೆನೆ ನರಕಿ
ನರಕಕ್ಕೆ ತೆಕ್ಕುವನೆ ನಿನ್ನೊಡನೆ ನುಡಿದು ದೋಷವ ಹೊಱುವನಲ್ಲೆನುತ್ತ ।
ತಿರುಗಿ ಹೋಗುತ್ತಿರಲು ಕಂಡು ಬೆಱಗಾಗಿ ಭಾ
ಪುರೆ ವಿಧಿಯ ಗೊಡ್ಡಾಟಕಳವೆ ಕೌಶಿಕಮುನೀ
ಶ್ವರ ಮೊದಲನಾವಿಕಂ ಕಡೆ ಸಮಸ್ತರ ಮನಕೆ ಸತ್ಯನೆನಿಸುವೆನೆಂದನು ॥೨೨॥

ವಿತ್ತವುಳ್ಳವರ್ಗಳೆನ್ನಂ ಕೊಂಬುದೆಂದು ನುಡಿ
ಯಿತ್ತು ದಿಟವಿನ್ನು ನಾನೊಗಡಿಸಿದೆನಾದಡನಿ
ವಿತ್ತ ಹುಸಿ ಬಂದಪುದು ಅವಧಿಗೆಟ್ಟಡೆ ಹಿಂದೆ ಮುನಿಗೆ ನಾಂ ದಾನವಾಗಿ ।
ಇತ್ತ ರಾಜ್ಯಂ ನಿರರ್ಥಂಬೋಗಿ ಮೇಲೆ ಹುಸಿ
ಹೊತ್ತಪುದದಱಿಂದ ಮುನ್ನವೆ ಅನಾವಿಕನ
ಚಿತ್ತವಂ ಪಡೆವೆನೆಂದೋತು ಕರೆದಂ ವೀರಬಾಹುಕನನವನೀಶನು ॥೨೩॥

ಮತ್ತೇಕೆ ಹುಸಿಯ ಹೊಲೆ ಹೊಱೆಕಾಱ ಕರೆದೆಯೆನೆ
ತೆತ್ತ ಸಾಲದ ಭರದೊಳಱಿಯದಾಡಿದ ನುಡಿಗೆ
ಹೊತ್ತ ಹುಸಿಯುಳಿಯಬೇಕೆಂದೆನಲು ನಿನ್ನ ಕುಲವಳಿದಲ್ಲದಳಿಯದೆನಲು।
ಚಿತ್ತೈಸಿ ಕೇಳಿನ್ನು ನಾಡ ಮದ್ದಂ ತಿಂದು
ಕುತ್ತ ಕೆಡದಿರಬಹುದೆ ಸಾಲವಳಿಯಲು ಧನವ
ನಿತ್ತು ರಕ್ಷಿಸು ಸಾಕು ರವಿಕುಲಕೆ ಕುಂದಿಂದು ಬಂದಡಂ ಬರಲೆಂದನು ॥೨೪॥

ನೂಱಾರು ಸಾವಿರವೆ ಸಾಲವೇನೆನೆ ಕರಿಯು
ನೇಱಿ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ
ಹಾಱಿದನಿತುದ್ದಕ್ಕೆ ಸುರಿದ ಹೊಸ ಹೊನ್ನ ರಾಶಿಯನೀಯಬೇಹುದೆನಲು।
ಏಱಿದರ್ಥವನೀವೆ ನೀವಾಳ್ವುದೇನಾಡಿ
ತೋಱೆಂದಡಾವ ಹೊತ್ತಾವ ಕೆಲಸವನೀಯು
ಲಾಱೆನೆನ್ನದೆ ಮಾಳ್ಪೆನೆಂದಡೊಡವೆಯನೀವೆನೆಂದನಂತಾ ಧನಿಕನು ॥೨೫॥

ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ
ನಡೆವೆನೊಂದೊಬ್ಬರೊಬ್ಬರಿಗೆ ನಂಬುಗೆಯಿತ್ತು
ಒಡೆಯನಾದಂ ವೀರಬಾಹುವಾಳಾದನಿನಕುಲ ಹರಿಶ್ಚಂದ್ರನೃಪನು।
ಹೆಡಗೆ ಹೆಡಗೆಗಳೊಳಡಿಗಡಿಗಡಕಿ ಹಸ್ತಿಯಂ
ಪಿಡಿದು ಕವಡೆಯ ಮಿಡಿದು ನಡೆ ನೋಡಿ ನೋಡಿ ತಂ
ದೆಡೆವಿಡಿದೆ ಸುರಿದನರ್ಥವನು ಕೌಶಿಕಮುನಿಯ ತೆಱಕಾಱ ತಲೆದೂಗಲು ॥೨೬॥

ಕೊಡುವ ಕೊಂಬುವರಿಬ್ಬರುಂ ಬಿಡದೆ ನೋಳ್ಪಾಗ
ಳಡಸಿ ಬಲಗೊಂಬ ರವಿಶಶಿಗಳೋ ಅವರಿಬ್ಬ
ರೆಡೆಯೊಳೊಪ್ಪುವ ಮೇರುಗಿರಿಯೊ ಮೇಣಾ ರಾಶಿ ಹಿರಿಯತನಕೊಬ್ಬೊಬ್ಬರ।
ಜಡಿದು ವಾದಿಸುವ ಹರಿಬೊಮ್ಮರೋ ಅಂತವರ
ನಡುವೆ ಮೂಡಿದ ಜ್ಯೋತಿಲಿಂಗವೋ ಆ ರಾಶಿ
ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯಂ ಸರಿಯಾದುದು ॥೨೭॥

ಇತ್ತವಧಿಗಿನ್ನೆರಡು ಗಳಿಗೆ ಹೊತ್ತಿದೆ ಮುನಿಪ
ಚಿತ್ತೈಸು ವಸ್ತುವಿದೆ ಸಂದುದೇ ನುಡಿದು ಹುಸಿ
ಯಿತ್ತಿಲ್ಲಲೇ ತಂದೆ ಆಯಸಂಬಡಿಸಿದೆನು ತಡೆದೆನಳಲಿಸಿದೆ ನಾನು।
ಅತ್ಯಂತ ಮೂಢನೆನ್ನವಗುಣವನುಳಿದು ತ
ಮ್ಮುತ್ತಮಿಕೆಯಂ ಮೆಱೆದು ಕರುಣಿಸುವುದೆಂದೆಮ್ಮ
ಹೆತ್ತಯ್ಯ ಕೌಶಿಕಂಗೋವಿ ಬಿನ್ನೈಸೆಂದು ಭೂಭುಜಂ ಕೈಮುಗಿದನು ॥೨೮॥

ಇನ್ನೇಕೆ ನುಡಿದೆನ್ನ ನಾಚಿಸುವೆ ಭೂಪಾಲ
ನಿನ್ನಂತೆ ಸತ್ಯರುತ್ತಮರಧಿಕಧೀವಶಿಗ
ಳುನ್ನತ ಶಿವೈಕ್ಯರಿಳೆಯೊಳಗಿಲ್ಲ ನಿನ್ನಿಷ್ಟಸಿದ್ಧಿ ಕೈಸಾರಲೆಂದು।
ತನ್ನ ಮನವುಕ್ಕಿ ಹಾರೈಸಿ ಹರುಷದಿ ಹರಸಿ
ಹೊನ್ನನಡಕಲು ಹೋದನತ್ತಲಿತ್ತಲು ನಡೆದು
ನನ್ನಿಕಾಱಂ ಪತಿಯ ಹಿಂದೆ ಹೊಲಗೇರಿಗೆಯ್ತಂದನಮರರು ಮಱುಗಲು ॥೨೯॥

ಹೊಱಗೆ ಹಾಸಿದ ಹಸಿಯ ತೊಗಲ ಹೊದೆಯ ಮಾಣ
ದೊಱಲಿ ಕೂಗಿಡುವ ನಾನಾಪ್ರಾಣಿ ವರ್ಗಮಂ
ಕೊಱೆವ ಕೊಚ್ಚುವ ತಱಿವ ಮುಱಿವ ಕಾಸುವ ಕಡಿವ ಸೀಳ್ವ ಹರಹುವ ಹಿಂಡುವ।
ಹಱಿಯದೊಣಗಿಲುಗರಳ ಹಿಳಿಲ ತೋರಣದ ಚ
ಟ್ಟೆಱಿದ ಗೋಡೆಗಳ ರಕುತದ ಹೇಸಿಕೆಯನು ನೇ
ಸಱುಗುಲನ ಕಾಳಿಜಂ ಕರಿಟಣಿಸಬೇಕೆಂದು ನೆರೆಹಿದಂ ನಿಳಯದೊಳಗೆ ॥೩೦॥

ಹಲವೆಲುವಿನೆಕ್ಕೆಗಳ ಬಿಗಿದು ಬೀವಂ ನೆಯ್ದ
ನುಲಿಯ ಹಂದೊಗಲ ಹಾಸಿನೊಳು ಮಂಚದ ಮೇಲೆ
ಹೊಲೆಯನೋಲಗವಿತ್ತು ನರ ಕಪಾಲದೊಳು ತೀವಿದ ಹಸಿಯ ಗೋಮಾಂಸವ।
ಮೆಲುತ ಮದ್ಯವನೀಂಟುತಿರ್ಪ ಪತಿಯಾಂ ಕಂಡು
ನೆಲದಲ್ಲಿ ಕುಳ್ಳಿರ್ದ ರವಿಕುಲನ ಹೆಗಲಮೇ
ಲೆರೆಲ ನೀಡಿಧನು ಕಾಲಂ ಕಾಲನೊಂದೆರಡು ಕುಲಗಿರಿಯ ಭಾರವೆನಲು ॥೩೧॥

ಏಳಬುಧಿ ಕಡೆಯಾದ ಸರ್ವರಾಜ್ಯಶ್ರೀಯ
ಮೇಳದೊಳು ವೀರ ಸಿರಿಯಂ ವಿಜಯ ಸಿರಿಗಳಂ
ತಾಳಲಾರ್ಪದಟುಳ್ಳ ಭುಜವನಾಮಿಕನ ಪದಭಾರಕ್ಕೆ ಬಸವಳಿವುದೇ।
ಕಾಳಗದೊಳರಿ ನೃಪರ ಖಂಡಮಂ ರುಧಿರಮಂ
ಕಾಳಿಜವನಡಗನೊಗ್ಗರುಳ ಹಿಣಿಲಂ ಹೊಱುವ
ಬಾಳ ಪಡೆದಿಪ್ಪನೀ ಹೇಯಕ್ಕೆ ಹೇಸುವನೆ ಎನಿಸಿ ಲೆಕ್ಕಿಸದಿರ್ದನು ॥೩೨॥

ಎಲವೊ ನೀ ದಿಟ ರಾಯನಾದಡಳುಕದೆ ಬಂದು
ನೆಲದಲ್ಲಿ ಕುಳ್ಳಿರ್ಪೆ ಸತ್ಕುಲಜನಾದಡಂ
ಹೊಲೆಯನಾದೆನ್ನ ಕಾಲಂ ಹೊಱುವೆ ಮುನಿಮತೋಚಿತ ಶಿವಾರ್ಚಕ ನಾದಡೆ।
ಹೊಲಸಿನಟ್ಟುಳಿಗೆ ಕೊಕ್ಕರಿಸದಿಹೆ ರಾಜ್ಯ ಸಿರಿ
ತೊಲಗಿದಡೆ ಪೂರ್ವ ಗುಣವಳಿವುದೇ ಮುನ್ನ ಛವಿ
ನಿಳಯದೊಳು ತಲೆಮುಟ್ಟು ದುಡಿದ ಗಾವದಿಯ್ಯೆಸೆ ಭೂಪಾಲನಲ್ಲೆಂದನು ॥೩೩॥

ಹಸುವನಳಿ ಹಾರುವನನಿಱಿ ಮಾತೆ ಪಿತರ ಬಾ
ಧಿಸು ಸುತನ ತಿವಿ ಸತಿಯ ಕೊಲು ಮಾರಿಗೊಱೆಗಟ್ಟು
ವಿಷವ ಕುಡಿ ಹಾವ ಹಿಡಿ ಹುಲಿಗೆ ಮಲೆ ದಳ್ಳುರಿಯೊಳಡಗು ಹೋಗೆಂದೊಡೆಯನು।
ಬೆಸಸಿದಡೆ ನಾನಾಱೆನೆನಬಾರದೆಂಬಾಗ
ಳಸವಸದೊಳಿವಕಲಸಿ ಸೆಡೆದೆನಾದಡೆ ಕೊಟ್ಟ
ಬೆಸನ ನಡಸುವನೆಂಬ ನುಡಿ ಸಡಿಲವಾಗದೇ ಹೇಳೆಂದನವನೀಶನು ॥೩೪॥

ಏನನಾಂ ಬೆಸಸಿತ್ತೊಡದ ಬಿಡದೆ ನಡಸುವಾ
ನೀನೆನಲು ನಡಸದಿರ್ದಡೆ ನೀನು ಕೊಟ್ಟೊಡವೆ
ದಾನವೇ ಬಗೆಯೆ ಕರಿ ಹೂಳುವನಿತರ್ಥಮಂ ಕೊಂಡು ಮಾಡದೆ ಮಾಣ್ಬಡೆ।
ಈ ನೆಲಂ ಹೊಱುವುದೇ ನಾನಿತ್ತ ನಂಬುಗೆಗೆ
ಹಾನಿಯಾಗದೆ ಹೋಹುದೇ ಎನಲು ಸುಡುಗಾಡ
ನಾನಂದದಿಂ ಕಾದುಕೊಂಡಿರುತಿರೆಂದು ಬೆಸಸಿದನು ಮನದನುವಱಿಯಲು ॥೩೫॥

ಸುಡುಗಾಡ ಕಾಹವೆಂದೇನದಱ ಪಂಥಮಂ
ನುಡಿದು ಪೇಳೆನೆ ಸುಡುವ ನೆಲದೆಱೆಗೆ ಹಾಗ ಹಣ
ದುಡಿಗೆಯುಂ ತಂದೆನಗೆ ಕೊಡುವುದಾ ತಲೆಯಕ್ಕಿಯುಂ ನಿನ್ನ ಸಂಬಳಕ್ಕೆ।
ಪಡಿಯಾಗಿ ಕೊಂಡುಂಬುದಳುಪದಿರು ಹುಸಿಯದಿರು
ಬಿಡದಿರೆಂದುಡುಗೊಱೆಯ ವೀಳೆಯದ ಕೂಡೆ ತಾ
ಪಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ವನಧಿ ಮುದ್ರಿತ ಧರಾಧಿಪತಿಗೆ ॥೩೬॥

ಹೆಸರ ಹೇಳುತ್ತ ಸಾಱುತ್ತ ವ್ಯಾಗುಱುಹ ತೋ
ಱುಸುತ ಪುರದೊಳಗೆಯ್ದಿ ಜನವಱಿಯೆ ಹಱೆಯ ಮೊಳ
ಗಿಸುತ ಮೊಱೆಯುತ್ತ ಹೋಗೇಳೆಂದು ಕಳುಪೆ ಪೊಱಮಟ್ಟನೆಲ್ಲವ ಮಾಡುತ।
ನಸುಕುಸಿದ ದೇಹ ಕಂಕರಿಗೋಲನಿಱುದು ಬಾ
ರಿಸುತ ಕೈವಿಡದೆ ಸಂಬಳಿ ಸಂಬಳೆಂದೆಂದು
ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿದಂ ಸತ್ಯಸಂಪನ್ನನು ॥೩೭॥

ಸುಡುಗಾಡಿನಧಿಕಾರಮುದ್ರೆ ಕಟ್ಟಾಣೆ ಚಾ
ವಡಿ ಹಣನ ತಲೆಯಕ್ಕಿ ನೆಲದೆಱೆಯ ಹಾಗ ಶವ
ದುಡಿಗೆಯೆನಗಾಯ್ತೆನ್ನ ಮಱಹಿಕ್ಕಿ ರಾತ್ರಿಯೊಳು ಸುಟ್ಟಿರಾದಡೆ ತೆಱೆಯನು।
ಕೊಡದಿರ್ದಡೆನ್ನಾಣೆ ಪತಿ ವೀರಬಾಹುವಿನ
ಮಡದಿಯರ ಕಾಲಾಣೆ ಮೀಱುದಡೆ ಕೆಡಹಿ ತಡೆ
ಗಡಿವೆನೆಂದೂರೊಳಗೆ ಸಾಱುತ್ತ ತೋಱುತ್ತ ರುದ್ರಭೂಮಿಗೆ ನಡೆದನು ॥೩೮॥

ಎರಡನೆಯ ರುದ್ರನೆನಿಸುವ ವಸಿಷ್ಠನ ಶಿಷ್ಯ
ನರಿದೆನಿಪ ರುದ್ರಾರ್ಚಕಂ ಗಿರಿಜೆ ಗಣಕುಲಂ
ಬೆರಸು ರುದ್ರನನೆಳೆದು ತಂದು ಕೊಡಲಾರ್ಪ ಸತ್ಯಾಶ್ರಯಂ ತಾ ಕಾಶಿಯ।
ಅರಸನಹ ರುದ್ರದರ್ಶನತುಷ್ಟನೆಂದೆನಿಪ
ಧರಣಿಪಂ ತಾನಿನ್ನು ರುದ್ರಭೂಮಿಯೊಳಲ್ಲ
ದಿರಲಾರ್ಪನೇ ಎಂದು ಧರೆಗೆ ಪೇಳ್ವಂದದಿಂ ರುದ್ರಭೂಮಿಗೆ ಬಂದನು ॥೩೯॥

ಭುವನದೊಳು ಹುಸಿವವಂ ಹೊಲೆಯನವನಂ ಮುಟ್ಟು
ವವರೆಲ್ಲ ಹೊಲೆಯರೆಂಬಾಗಳಾರುವನು ಮು
ಟ್ಟುವದಿಲ್ಲದಿಪ್ಪೆನೆನೆ ಸರ್ವಜನ ವೈರವದಱಿಂದ ನಾಂ ಹೊಲೆ ವೇಷದ।
ನೆವವ ಹೊತ್ತಿರಲವಂ ಹೊಲೆಯನೆಂದೆಯ್ದೆ ಕಂ
ಡವರೆಲ್ಲ ತೊಲಗುವರಿದೇ ಬುದ್ಧಿಯೆಂದಾಗ
ರವಿಕುಲನನಾಮಿಕರ ಚೋಹಮಂ ತಳೆದನುತ್ತಮರಱಿದು ತಲೆದೂಗಲು ॥೪೦॥

ಕಂಗೆ ಭಯವೆನೆ ಬೇವ ಹೆಣನ ಹಿಂಡುಗಳ ಮೂ
ಗಿಂಗೆ ಹಗೆಯೆನೆ ಕವಿವ ಕರ್ಬೊಗೆಯ ಕಾಳಿಱ ಕ
ರ್ಣಂಗಳಿಗಮಂಗಲ ಧ್ವನಿಗಳಂ ನೆರಪುವಬಲೆಯರ ಮಲ್ಲಾಮಲ್ಲಿಯ।
ಹಿಂಗದೊತ್ತೊತ್ತೆಯಿಂ ಮೆಯ್ಯನೊತ್ತುವ ಜನದ
ಜಂಗುಳಿಯ ಕಾಲೂಱಲರಿದೆನಿಸಿ ನೆರೆದ ಹಲ
ವಂಗದಸ್ಥಿಗಳನಾರಯ್ಯುತ್ತ ಹೊಕ್ಕನಾ ಸುಡುಗಾಡನವನೀಶನು ॥೪೧॥

ನಡೆದು ಹರಿಹರಿದು ಸುಡದಿರು ಸುಡದಿರೆಲವೊ ಸು
ಟ್ಟಡೆ ನಿಮಗೆ ವೀರಬಾಹುಕನಾಣೆಯೆಂದು ಜಡಿ
ಜಡಿದು ನೆಲದೆಱೆಯ ಹಾಗವನುಟ್ಟ ಕಪ್ಪಡಂಗಳನು ತಲೆಯಕ್ಕಿಗಳನು।
ಸುಡುಗಾಡೊಳಲ್ಲಲ್ಲಿಗೆಯ್ದಿ ಬೇಡುವ ಭರದೊ
ಳೆಡಹುತ್ತ ತಾಗುತ್ತಲೆಲುಗಳಂ ಮೆಟ್ಟಿ ತ
ನ್ನಡಿಗಳಳುಕಿತ್ತನಱಿಯದೆ ಹಾಸುಹೊಕ್ಕು ಹರಿದಾಡಿದಂ ಭೂಪಾಲನು ॥೪೨॥

ಮತ್ತಾಗ ಸುಡುಗಾಡ ನಟ್ಟನಡುವಣ ದಡದ
ತುತ್ತತುದಿಯೊಳು ವಿಮಾನದ ಮರಂಗಳನು ಕಡೆ
ಹೊತ್ತಿ ಉರಿಕರಿಯಾದ ಕರಿಕೊಳ್ಳಿಗಳನಱಿಸಿ ಸಿದ್ದಿಗೆಯ ನುಲಿಯ।
ಒತ್ತಿ ಬಿಗಿಬಿಗಿದು ಹಂಜರಿಸಿ ತವಗವನಿಕ್ಕಿ
ಮತ್ತೆ ಮೇಲೊಂದು ತಲೆಗುಡಿಸಿಲಂ ಕಟ್ಟಿ ಕಾ
ಯುತ್ತಿರ್ದನಿರುಳು ಹಗಲೆನ್ನದೊಡೆಯಂ ಬೆಸಸಿದಂತೆ ವಸುಧಾಧೀಶನು ॥೪೩॥

ಮುಂದೆ ಜಾವದೊಳೆದ್ದು ಮಂತ್ರಿ ಗಂಗಾಬುವಂ
ಮಿಂದು ಕಾಶೀಪತಿಯನರ್ಚಿಸಿ ಮಹಾದೈನ್ಯ
ದಿಂದ ಕೈಮುಗಿದೆನ್ನಪತಿಗೆ ಬಂಧನ ಮೋಕ್ಷವಂ ಮಾಡಿ ಕರುಣಿಸೆಂದು।
ಬಂದು ಭೂವರನ ಮೈಕೈಕಾಲನೊತ್ತಿ ಮತಿ
ಗುಂದದಿರಿ ಮನೂದೊಳುಮ್ಮಳಿಸದಿರಿ ಭೂಪಾಲ
ಹಿಂದ ನೆನೆಯದಿರಿ ಹರ ಕರುಣಿಸುವನೆಂದು ಬೋಧಿಸಿ ಸಾಗಿಸುತ್ತಿರ್ದನು ॥೪೪॥

ಪಡಿಯಕ್ಕಿಯಂ ತಂದು ತನ್ನ ಮಂತ್ರಿಯ ಕೈಯ
ಕೊಡಲಾತನದನೊಂದು ವೃಷಭಂಗೆ ಮೇಯಲಿ
ತ್ತೊಡನೆ ಬಳಿವಿಡಿದದಱ ಗೋಮಯವನೆತ್ತಿ ತಂದೇಕಾಂತದಲ್ಲಿ ತೊಳೆದು।
ಕಡೆಗೆ ಜೀರ್ಣಸಿದಕ್ಕಿಯಂ ತಂದು ಕೊಟ್ಟೊಡಾ
ಪೊಡವಿಪಂ ಲಿಂಗಾರ್ಪಿತಂ ಮಾಡಿ ಸವಿದು ಸವಿ
ದಡಗಡಿಗೆ ಗಂಗಾಂಬುವನ್ನೀಂಟಿ ಪರಿಣಮಿಸಿ ದಿನವ ಕಳೆಯುತಿರ್ದನು ॥೪೫॥

ವರ ವಾರಣಾಸಿಮಧ್ಯವೆ ಲಾಳ ದೇಶವ
ಚ್ಚರಿಯ ಕಾಶೀಪುರವಯೋಧ್ಯೆ ಸ್ಮಶಾನ ಧರೆ
ಯರಮನೆ ಪ್ರೇತಗಾಹಿನ ತವಗ ಮಣಿಪೀಠ ಪರಿಣಾಮವಾರೋಗಣೆ।
ಪರಮಧೃತಿ ಚತುರಂಗಸೇನೆ ಸಂಬಳಿಗೋಲು
ಕರವಾಳಃ ಸತ್ಯ ಭಂಡಾರ ಪತಿಯಾಜ್ಞೆ ಭಾ
ಸುರತರ ಕ್ಷತ್ರಧರ್ಮಂಗಳೆಂದೇ ಕಾಣುತಿರ್ದನು ಹರಿಶ್ಚಂದ್ರನು ॥೪೬॥

---

## ೧೨

ಜನಪತಿ ಹರಿಶ್ಚಂದ್ರ ರಾಯನ ಕುಮಾರನಿಂ
ಧನಕೆ ಹೋದಲ್ಲಿ ಕಾಳೋರಗಂ ಪಿಡಿಯಲಾ
ಜನನಿ ಶೋಕಿಸಿದ ಮನದಳಲು ವಿಶ್ವಾಮಿತ್ರ ಮುನಿಯನೆಯ್ದದೆ ಮಾಣದು ॥ಸೂಚನೆ॥

ಒಡೆಯನಾಜ್ಞೆಯ ಸಲಿಸಿ ಪೊಡವಿಪಂ ನಡೆಯುತ್ತ
ಮೃಡಪದ ಧ್ಯಾನಾಮೃತವನೀಂಟಿ ತೇಗುತ್ತ
ಪಿಡಿದ ಚಿಂತೆಯನೆಲ್ಲವಂ ತೊಲಗಿಸುತ್ತಲತಿ ಪರಿಣಾಮಮಮಂ ಧರಿಸುತ।
ಪೊಡವಿಯೊಳಗೆಯ್ದೆ ಸತ್ಯವ ಮೆಱೆದು ತೋಱುತ್ತ
ಸುಡುವ ಹೆಣಗಳ ಕಮಱುಗಳನು ಅರಯ್ಯುತ್ತ
ಬಿಡದೆ ನೆಲದೆಱೆಯಕ್ಕಿ ಕಪ್ಪಡವ ಕೊಂಡರಸ ದಿನವ ಕಳೆಯುತ್ತಿರ್ದನು ॥೧॥

ಇಂತು ನೃಪನಿತ್ತ ದಿವಸಂ ಕಳೆಯುತಿರಲತ್ತ
ಲಂತವರನೊತ್ತಿಟ್ಟ ಮನೆಯನೇವೊಗಳ್ವೆನದು
ತಿಂತಿಣಿಯ ಸೂನೆಗಾಱರ ನಿಳಯ ರಕ್ಕಸಿಯ ಮಾಡ ಹಾವಿನ ಹೇಳಿಗೆ।
ಅಂತಕನ ನಗರ ಮೃತ್ಯುವಿನ ಬಲು ಬಾಣಸದ
ಹಂತಿ ಮಾರಿಯ ಮೂರಿಯಾಟದೆಡೆಯೆಂಬಾಗ
ಳೆಂತು ಜೀವಿಪರಕಟ ಮನೆಯವರ ದುರ್ಧರದೊಳವನಿಪನ ಸತಿ ಪುತ್ರರು ॥೨॥

ಒಡೆಯನತಿಕೋಪಿ ಹೆಂಡತಿ ಮಹಾ ಮೂರ್ಖೆ ಮಗ
ಕಡು ಧೂರ್ತ ಸೊಸೆಯಾದಡಧಿಕ ನಿಷ್ಠುರೆ ಮನೆಯ
ನಡೆವವರು ದುರ್ಜನರು ನೆರೆಮನೆಯವರು ಮಿಥ್ಯವಾದಿಗಳು ಪಶುಗಳಗಡು।
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಳ್ಗೆಡೆವ ಕರಕರಿಪ ಸೆಣಸುವ ತಪ್ಪ ಸಾಧಿಸುವ
ಕೆಡೆಯೊದೆವ ಮಾರಿಗಾಱದೆ ಸತ್ತು ಹುಟ್ಟುತಿಹರವನಿಪನ ಸತಿ ಪುತ್ರರು ॥೩॥

ಎಡೆವಿಡದೆ ಹಲವು ಸೂಳೊಡೆಯನರಮನೆಗೆ ನೀ
ರಡಕಿ ಕೊಟ್ಟನಿತು ಬತ್ತವ ಮಿದಿದು ಒಡಲಿಗೆ
ಯ್ದಡೆ ಯಿಕ್ಕಿದನಿತಮನೆ ಉಂಡು ಇರುಳುಂ ಹಗಲುಮೆನ್ನದೋಗಂತೆ ಕುದಿವ।
ಮಡದಿಯು ಕುಮಾರನುದಯದೊಳೆದ್ದು ಹೋಗಿ ಹೇ
ರಡವಿಯೊಳು ಹುಲು ಹುಳ್ಳಿಯಂ ಕೊಂಡು ನಿಚ್ಚ ತ
ನ್ನೊಡನಾಡಿಗಳ್ವೆರಸಿ ಬೈಗೆ ಬಂದಿಂತು ಕಾಲವನು ಸವೆಯಿಸುತಿರ್ದನು ॥೪॥

ಕಸ ನಡುಮನೆಯೊಳಿರಲು ದೈವನೊಡೆಯಂ ಕಱುವ
ಪಶುಗಳಗಡುಂ ಕಟ್ಟಹೋದಡೊದೆವುವು ಅವನ
ಸೊಸೆ ಬೆನ್ನನೊಱಸಲೆಂದಪ್ಪಳಿಸುವಳು ಗೃಹಸ್ಥನ ಪುತ್ರ ತನ್ನ ಕಾಲ।
ಸಸಿನದಲ ತೊಳೆಯಳಿವಳೆಂದೊದೆವ ನೆರೆ ಮನೆಯ
ಪಿಸುಣರಾದವರಿವಳು ಕಳ್ಳಿಯೆಂದೆಯ್ದೆ ಘೂ
ರ್ಮಿಸುತೊಡತಿ ಸದೆವಳೆನೆ ಪುತ್ರಶೋಕವು ಕೂಡಿ ಸಂಧಿಸಿತ್ತೇವೊಗಳ್ವೆನು ॥೫॥

ಓರಂತೆ ತಲ್ಲಣಿಸಿ ಹೆದಱಿ ಕಣ್ಗೆಟ್ಟೋಡ
ಬಾರದಿರ ಬಾರದುೞಿ ಸಾಯಬಾರದು ಬದುಕ
ಬಾರದೆಂಬಂತೆ ತನ್ನೊಡಲಿಂಗೆ ಬಪ್ಪ ದುಃಖಂಗಳಿಗೆ ಸಾಕ್ಷಿಯಾಗಿ।
ಧಾರಿಣಿಯೊಳವನಿಪನ ಸತ್ಯ ಸಲಬೇಹುದೆಂ
ಬಾರಯ್ಕೆವಿಡಿದು ನಡೆಯುತ್ತಿಪ್ಪ ನಾರಿಯು ಕು
ಮಾರಂಗೆ ಬಂದ ಸಂಕಟದ ಸಂವರಣೆಯನದಾವ ಜೀವರು ಕೇಳ್ವರು ॥೬॥

ಎಂದಿನಂತುದಯ ಕಾಲದೊಳೆದ್ದು ಹುಲುಹುಳ್ಳಿ
ಗೆಂದರಣ್ಯಕ್ಕೆ ನಡೆದಲ್ಲಲ್ಲಿ ಹೋಗಿ ಹಲ
ವಂದದಡುಗಬ್ಬನಾಯ್ದೊಟ್ಟಿ ಹೊಱೆಗಟ್ಟಿ ಹೊತ್ತೋರಗೆಯ ಮಕ್ಕಳೊಡನೆ।
ನಿಂದು ಮಧ್ಯಾಹ್ನದುರಿಬಿಸಿಲೊಳೆದೆ ಬಿರಿಯೆ ಜವ
ಗುಂದಿ ತಲೆ ಕುಸಿದು ನಡೆಗೆಟ್ಟು ಬಾಯಾಱಿ ಹಣೆ
ಯಿಂದ ಬೆಮರುಗೆನೆತ್ತಿ ಹೊತ್ತಿ ತೇಂಕುತ್ತ ಹರಿತಪ್ಪಾಗಳೇವೊಗಳ್ವೆನು ॥೭॥

ಕೆಲದ ಮೆಳೆಯೊತ್ತಿನೊಳಗಿರ್ದ ಹುತ್ತಿನೊಳು ನಳ
ನಳಿಸಿ ಕೋಮಲತೆಯಿಂ ಕೊಬ್ಬಿ ಕೊನೆವಾಯ್ದು ಕಂ
ಗಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು ಹಾರಯಿಸಿ ನಾನಿದನೆಲ್ಲವ ।
ಗಳಗಳನೆ ಕೊಯ್ದು ಕೊಂಡೊಯ್ವೆತ್ತಡೆನ್ನೊಡೆಯ
ಮುಳಿಯದಿಹನೆಂಬಾಸೆಯಿಂ ಹೊಱೆಯ ನಿಳುಹಿ ಮ
ತ್ತೆಳಸಿ ಕುಡುಗೋಲ್ವಿಡಿದು ಸಾರ್ದನಸ್ತಾದ್ರಿಯಂ ಸಾರ್ದ ಮಾರ್ತಾಂಡನಂತೆ ॥೮॥

ಹೊದೆಗಡಿದು ಹತ್ತಿ ಹುತ್ತನು ಸುತ್ತಿದೆಳ ಹುಲ್ಲ
ಹೊದಱ ಹಿಡಿದಡಿಸಿ ಬಿಡದರಿದು ಸೆಳೆಯಲ್ ಕಯ್ಯ
ಹದರನೊಡೆಗಚ್ಚಿ ಜಡಿಯುತ್ತ ಭೋಂಕನೆ ಬಂದ ರೌದ್ರ ಸರ್ಪನನು ಕಂಡು।
ಹೆದಱಿ ಹವ್ವನೆ ಹಾಱಿ ಹಾ ಎಂದು ಕೈ ಕಾಲ
ಕೆದಱಿ ತಲೆಕೆಳಕಾಗಿ ಕೆಡೆದನಕಟಕಟ ಮುದ
ಮುದಿತ ರಾಹುಗ್ರಸ್ತವಾದ ತರುಣೇಂದು ಬಿಂಬಂ ನೆಲಕೆ ಬೀಳ್ವಂದದೆ ॥೯॥

ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡೊಡನಿರ್ದ
ತತ್ತುಕಂಗಳು ಹೆದಱು ಬಿಟ್ಟೋಡಿ ಹೋದರೂ
ರತ್ತಲತ್ತಂ ತಾಯ್ಗೆ ಹಲುಬಿ ತಂದೆಯು ಕರೆದು ದೆಸೆದೆಸೆಗೆ ಬಾಯ್ಬಿಟ್ಟು।
ನೆತ್ತಿಗೇಱುದ ವಿಷದ ಕೈಯಿಂದ ಮಡಿದನೀ
ಹೊತ್ತೆನ್ನ ಕುಲದ ಕುಡಿ ಮುರುಟಿತೆಂದುಮ್ಮಳಂ
ಬೆತ್ತು ಬೀಳವೆ ಮಾಣನೆಂಬಂತೆ ರವಿ ಬಿದ್ದನಂದು ಪಡವಣ ಕಡಲೊಳು ॥೧೦॥

ತನಯುನೆಂದುಂ ಬಪ್ಪ ಹೊತ್ತಿಂಗೆ ಬಾರದಿರೆ
ಮನನೊಂದಿದೇಕೆ ತಳುವಿದನೆನ್ನ ಕಂದನೆಂ [ಕೊಳುತ।
ದೆನುತ ಸುಯ್ಯುತ್ತ ಮಱುಗುತ್ತ ಬಸುಱಂ ಹೊಸೆದು ಕೊನೆವೆರಳ ಮುರಿದು
ತನುವ ಮಱೆದಡಿಗಡಿಗೆ ಹೊಱಗನಾಲಸಿ ಮತ್ತೆ
ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ
ವನಿತೆಗಾದಾಪತ್ತನಾಲಸದೆ ಕೆಟ್ಟು ದಟ್ಟಿಸುವರದನೇನೆಂಬೆನು ॥೧೧॥

ಬಂದಿರನಲೇ ಎಂದು ಪೊಱಮಟ್ಟಡೋಡಿದಪ
ಳೆಂದೆಂಬರೊಯ್ಯನಳುತಿರಲಮಂಗಳಗಱೆದ
ಳೆಂದೆಂಬರೊಳಗೊಳಗೆ ಮಗನ ಗುಣಮಂ ಹಲುಬುತಿರಲು ಬೈದಪಳೆಂಬರು।
ನಿಂದು ಬೆಱಗಾಗಿ ಮಱೆದಿರೆ ಕೆಲಸಗಳ್ಳೆಯಿವ
ಳೆಂದೆಂಬರೊಮ್ಮೆಮ್ಮೆ ಬಿಸುಸುಯ್ಯೆ ಬೇಸತ್ತ
ಳೆಂದೆಂಬರಂದು ಬೈವರು ಬೈದು ಬಡಿವರಾ ಮನೆಯುವರು ಮಾನಿನಿಯನು ॥೧೨॥

ಒಳಗುಡಿದ ನಾರಾಚದೇಱುನಂದದಿ ಹೊಱಗ
ಬಳಸದೊಳಗೊಳಗೇಗುವಾವಗೆಯ ಶಿಖಿಯಂತೆ
ಕೆಳೆಗೊಂಡ ಹಗೆಗಳೊಳಗಣ ಮುಳಿಸಿನಂದದಿಂ ಮನೆಯುವರ ಮಾರಿಗಂಜಿ।
ಬೆಳೆದು ಬಿರಿವೆದೆ ಬಿಕ್ಕುವಳ್ಳೆ ಕಣ್ಣೊಳಗೊಱತ
ಜಲ ಸೆರೆಗಳೊಡೆದುಬ್ಬಿ ಬಿಗಿದ ಗಂಟಲಿನ ಮು
ಕ್ಕುಳಿಸಿದಕ್ಕೆಗಳೆಸೆವ ಸತಿಯುಳಲು ಸೀಗೆಯೊಳಗಣ ಬಾಳೆಗೆಣೆಯಾದುದು ॥೧೩॥

ಉರಿವ ಬಿಸಿಲೊಳು ಹಸಿದು ಬಳಲಿ ಬಸವಳಿದು ಕೆಡ
ದಿರುತಿಪ್ಪನೋ ಎಂದು ಕೀಳಿಲೊಳು ಮಿಗೆ ಕಟ್ಟು
ತಿರೆ ಹಸುಗಳಿಱುದು ಕೆಡೆದಿರುತಿಪ್ಪನೋ ಎಂದು ನೋಡುತ್ತ ಹುಲುಹುಳ್ಳಿಯು।
ದೊರಕದಿರೆ ಮನೆಗೆ ಬರಲಂಜಿ ಹೊಱಹೊಱಗಾಡು
ತಿರುತಿಪ್ಪನೋ ಎಂದು ಬೀದಿಯೊಳು ನೋಡಿ ತಡ
ವರಿಸಿ ಕಾಣದೆ ಮಱುಗುತಳಲಿಂದ ಮನದೊಳಗೊಳಗೆ ಸತ್ತುಹುಟ್ಟುತ್ತಿರ್ಪಳು॥೧೪॥

ಅಡವಿಯೊಳು ಹೊಲಬುಗೆಟ್ಟನೊ ಗಿಡುವಿನೊಳಗೆ ಹುಲಿ
ಹಿಡಿದುದೋ ಕಳ್ಳರೊಯ್ದರೊ ಭೂತ ಸಂಕುಲಂ
ಹೊಡೆದುವೋ ನೀರೊಳದ್ದನೊ ಮರದ ಕೊಂಬೇಱಿ ಬಿದ್ದನೋ ಫಣಿ ತಿಂದುದೊ।
ಕಡು ಹಸಿದು ನಡೆಗೆಟ್ಟು ನಿಂದನೋ ಎಂದಿಂತು
ಮಡದಿ ಹಲವಂ ಹಲುಬುತಂಗಣದೊಳಿರೆ ಹೊತ್ತು
ಹೊಡಕರಿಸಿದಳಲ ಕರ್ಬೊಗೆಯುಂತೆ ಕವಿವ ಕತ್ತಲೆಯೊಳಗೆ ನಿಂದಿರ್ದಳು ॥೧೫॥

ಉಟ್ಟಱುವೆಯಂ ಉರದ ಮೇಲಕ್ಕೆ ತೆಗೆಯುತ್ತ
ಬಿಟ್ಟ ಹಂಕಣಿದಲೆಯ ನಡಿಗಡಿಗೆ ತುಱುಸುತ್ತ
ನಟ್ಟ ದಿಟ್ಟಿಯೊಳು ತನಯನ ಬರವ ನೋಡುತ್ತ ಕದಪಿನೊಳು ಕೈಯನಿಟ್ಟು।
ಕೆಟ್ಟೆನಿನ್ನೇಗುವೆನು ಏನ ಮಾಡುವೆ ಮಗನ
ಬಟ್ಟೆಯಂ ನೋಡಿ ಬೆಱಗಾಗುವಿನಿತಕ್ಕೊಡತಿ
ಧಟ್ಟಿಸುವಳೆಂದು ಸಿಡಿಮಿಡಿಗೊಂಡು ಮಱುಗುತ್ತನಿಂದು ಸುಱ್ರನೆ ಸುಯ್ದಳು॥೧೬॥

ಬಂದರಂ ಲೋಹಿತಾಶ್ವಾ ಎಂದು ಬಟ್ಟೆಯೊಳು
ನಿಂದರಂ ಲೋಹಿತಾಶ್ವಾ ಎಂದು ಗಾಳಿಗಿಱಿ
ಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು ಬಿಡೆ ಬೀದಿಗವಿಱುನಂತೆ।
ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನೈ
ತಂದಿಂದು ಕೂಡೆ ಹೋಗಿರ್ದ ಕಂಡೆಂ ನಿನ್ನ
ಕಂದನೊಂದುಗ್ರ ಫಣಿ ತಿಂದು ಜೀವಂಗಳೆದನೆಂದು ಹೇಳಿದನಾಗಳು ॥೧೭॥

ಏಕೆ ಕಚ್ಚಿತ್ತಾವ ಕಡೆ ಯಾವ ಹೊಲನಕ್ಕ
ಟಾ ಕುಮಾರಂ ಮಡಿದ ಠಾವೆನಿತು ದೂರವೆನ
ಲೀ ಕಡೆಯೊಳೀ ಹೊಲದೊಳೀ ಮರದ ಕೆಲದ ಹುತ್ತಿನ ಹುಲ್ಲ ಕೊಯ್ಯೆ ಕೈಯ।
ನೂಕಿ ಫಣಿಯಗಿಯೆ ಕೆಡೆದಂ ದೂರವಲ್ಲಲ್ಲ
ಬೇಕಾದಡೀಗ ಹೋಗಲ್ಲದಿರ್ದಡೆ ಬಳಿಕ
ನೇಕ ಭಲ್ಲುಕ ಜಂಬುಕಂ ಘೂಕ ವೃಕಗಳೆಳೆಯದೆ ಬಿಡವು ಕೇಳೆಂದನು ॥೧೮॥

ನುಡಿಯಲರಿದೆನಿಸಿ ಮೇರೆಯ ಮಿಱುವಳಲನಳ
ವಡಿಸಿ ಬಂದೊಡೆಯನಡಿಗಳ ಮೇಲೆ ಕೆಡೆದು ಬಾ
ಯ್ವಿಡುತರಣ್ಯದೊಳೆನ್ನ ಮಗನುಗ್ರ ಕಾಳೋರಗಂ ಕಚ್ಚಿ ಮಡಿದನೆಂದು।
ನುಡಿಯೆ ಲೇಸಾಯ್ತು ಮಡಿದಡೆ ಮಡಿದನೆಂದು ಕೆಡೆ
ನುಡಿಯೆ ಬಂಟರನು ಕೊಟ್ಟಱಿಸಿಸೈ ತಂದೆ ಎನೆ
ನಡುವಿರುಳು ಬಂಟರುಂಟೇ ನಿದ್ದೆಗೆಯ್ಯಬೇಕೇಳು ಕಾಡದಿರೆಂದನು ॥೧೯॥

ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ
ಕರುಣಿಸೆನೆ ದುರ್ಮರಣವಟ್ಟ ಶೂದ್ರನನು ಸಂ
ಸ್ಕರಿಸುವವರಾವಲ್ಲವೆಂದನಲ್ಕಾನಾದಡಂ ಹೋಗಿ ಕಂಡು ಮಗನ।
ಉರಿಗಿತ್ತು ಬಪ್ಪೆನೇ ಎನೆ ಕೆಲಸಮಂ ಬಿಟ್ಟು
ಹರಿಯದಿರ್ದಪನೆಯ್ದೆ ಗೆಯ್ದು ಹೋಗೆನಲು ಚ
ಚ್ಚರದಿ ಮಾಡುವ ಕಜ್ಜವೆಲ್ಲವಂ ಮಾಡಿ ಹೊಱ ಹೊಂಟಳೊಯ್ಯನೆ ಮನೆಯನು ॥೨೦॥

ದಟ್ಟೈಸಿ ಮಡಲಱಿದ ಕಾಳದೊಳು ನಡುವಿರುಳು
ನಟ್ಟ ಮುಳ್ಳುಗಳ ನೆಡಹಿದ ಕಲ್ಲ ಹಾಯ್ದ ಮರ
ಮುಟ್ಟನೇಱಿದ ದಡನನಿಳಿದ ಕುಳಿಯಂ ಬಿದ್ದ ದರಿಗಳಂ ಹಿಡಿದ ಗಿಡುವ।
ಬಿಟ್ಟ ತಲೆಯಂ ಬಿಚ್ಚಿದುಡುಗೆಯಂ ಮಱೆದು ಗೋ
ಳಿಟ್ಟು ಬಾಯ್ಬಿಟ್ಟು ಮೊಱೆಯಿಡುತ ನಡೆತಂದು ಹುಲು
ವಟ್ಟೆಯೊಳು ಬೆಳೆದ ಹೆಮ್ಮರನ ಮಲಗಿಸಿ ನಿಂದ ಹುಳ್ಳಿ ಹೊಱೆಯಂ ಕಂಡಳು ॥೨೧॥

ಈಯೆಡೆಯೊಳಿನ್ನಿರದೆ ಮಾಣನೆನುತಂ ಬಂದು
ತಾಯಿ ಕರೆದಳು ಮಗನೆ ಮಗನೇ ಹರಿಶ್ಚಂದ್ರ
ರಾಯನ ಕುಮಾರ ಪೇಳಾವ ಠಾವೊಳಕೊಂಡುದಯ್ಯ ನೀನೆಲ್ಲಿರ್ದಪೆ।
ಓಯೆಂಬುದೇನು ಕಂದಾ ಬಾಯ ಬಿಡದಿತ್ತ
ಬಾಯೆಂಬುದೇನು ತಂದೇ ಎನ್ನನೊಲ್ಲದಡೆ
ನಾಯೆಂಬುದೇನುಸುರದಿರಲೇಕೆ ತರುಣ ಎಂದೊಱಲಿದಳು ಹಂಬಲಿಸುತ ॥೨೨॥

ತೊರೆದ ತವಕದ ಮಱುಕದಿಂದತ್ತಲಿತ್ತ ಹರಿ
ಹರಿದು ಕಂಬನಿಯ ಕೈಯಿಂದ ಮುಂಗಾಣದಾ
ತುರದೊಳಲ್ಲಲ್ಲಿ ತಡವರಿಸಿ ಕೆಡೆದೆದ್ದು ಕಟ್ಟಳಲುರಿಯ ಸರದೊಳೊಱಲಿ।
ಕರೆಯುತ್ತ ಹಳವಿಸುತ ಹಂಬಲಿಸಿ ಬಾಯ್ಬಿಡುತ
ದೊರೆಗೆಡುತ ಮೊಱೆಯಿಡುತಲಳಲುತ್ತ ಬಳಲುತ್ತ
ಹರಹರ ಮಹಾದೇವ ಮಗನ ನುಂಗಿದ ಹುತ್ತಿನೆಡೆಗೆ ಬಂದಳು ಬಂದಳು ॥೨೩॥

ವಿಷದ ಹೊಗೆ ಹೊಯ್ದು ಹಸುರಾದ ಮೈ ಮಿಱಿ ನೊರೆ
ಯೊಸರ್ವ ಗಲ್ಲಂ ಕಂದಿದುಗುರ್ಗಳರೆದೆಱೆದಗು
ರ್ವಿಸುವ ಕಣ್ ಹರಿದು ಹುಲುಪಿಡಿದ ಹರಹಿದ ಕೈಗಳುಂಬ ಹೊತ್ತುಣ ಹಡೆಯದೆ।
ಹಸಿದು ಬೆಂಗಡರ್ದ ಬಸುಱಕಟಕಟ ಮಡಿದ ಗೋಣ್
ದೆಸೆಗುರುಳಿ ಹುಡಿಹೊಕ್ಕ ಬಱತ ಬಾಯ್ವೆರಸಂದು
ಬಸವಳಿದ ನಿಜಸುತನ ಕಂಡಳು ಹರಿಶ್ಚಂದ್ರನರಸಿ ಹುತ್ತಿನ ಮೊದಲೊಳು ॥೨೪॥

ಕಂಡ ಕಾಣ್ಕೆಯೊಳು ಶಿವಶಿವ ನಿಂದ ನಿಲವಿನಲಿ
ದಿಂಡುಗೆಡೆದಳು ಮೇಲೆ ಹೊರಳಿದಳು ಬಿಗಿಯಪ್ಪಿ ದೊಱಲ।
ಕೊಂಡು ಹೊಟ್ಟೆಯನು ಹೊಸೆ ಹೊಸೆದು ಮೋಱೆಯ ಮೇಲೆ ಮೋಱೆಯಿಟ್ಟೋವ
ಮುಂಡಾಡಿ ಮುದ್ದುಗೆಯ್ದೋರಂತೆ ಕರೆದು ಕರೆ
ದಂಡಲೆದು ಲಲ್ಲೆಗಂದತ್ತತ್ತು ಬಲವಳಿದು
ಬೆಂಡಾಗಿ ಜೀವವಿಕ್ಕೆಂಬಾಸೆಯಿಂ ತೇಂಕುದಾಣಂಗಳಂ ಬಗೆದಳು ॥೨೫॥

ಲಲನೆ ಮೂಗಿನೊಳುಸುರನಳ್ಳೆಯೊಳು ಹೊಯ್ಲನುಗು
ರೊಳು ರಜವನೆದೆಯೊಳಲ್ಲಾಟಮಂ ಕೈಯ ಮೊದ
ಲೊಳು ಮಿಡುಕನಂಗದೊಳು ನೋವನಕ್ಷಿಯೊಳು ಬೆಳ್ಪಂ ಭಾಳದೊಳು ಬೆಮರನು।
ಲಲಿತ ಕಂಠದೊಳುಲುಕನಂಘ್ರಿಯೊಳು ಬಿಸಿಯನಂ
ಗುಲಿಗಳೊಳು ಚಿಟುಕನುಂಗುಟದೊಳ ರುಣಾಂಬುವಂ
ಸಲೆ ನಾಲಗೆಯೊಳಿಂಪ ರೋಮದೊಳು ಬಲ್ಪನಾರಯ್ದು ಕಾಣದೆ ನೊಂದಳು ॥೨೬॥

ಹಡೆದೊಡಲು ಹುಡಿಯಾಯ್ತು ಮಗನೆ ಮಗನುಂಟೆಂದು
ಕಡಗಿ ಹೆಚ್ಚುವ ಮನಂ ಹೊತ್ತಿ ಹೊಗೆಯಿತ್ತು ಬಿಡ
ದಡರಿ ನಿಟ್ಟಿಸಿ ನಲವ ದಿಟ್ಟಿ ಕೆಟ್ಟುವು ಸೋಂಕಿ ಪುಳಕಿಸುವ ಕರಣಂಗಳು ॥
ಕಡಿವಡೆದು ಮೊಸೆದು ಹೆಸರ್ಗೊಳುತಿಪ್ಪ ನಾಲಗೆಯ
ಕುಡಿ ಮುರುಟಿತೊಮ್ಮೆಮ್ಮೆ ನುಡಿಯ ನಾಲಿಪ ಕಿವಿಯ
ಹಡಿಗೆತ್ತುದೆಲೆ ಕಂದ ಎಂದೆನುತ್ತಿಂದುಮುಖಿ ಮಱುಗಿ ಬಾಯ್ಬಿಟ್ಟಳಂದು ॥೨೭॥

ಸಿರಿ ಹೋದ ಮಱುಕವನು ನೆಲೆಗೆಟ್ಟ ಚಿಂತೆಯನು
ಪರದೇಶಮಂ ಹೊಕ್ಕ ನಾಚಿಕೆಯನಱಿಯದ
ನ್ಯರ ಮನೆಯ ತೊತ್ತಾದ ಭಂಗವನು ನಿಮ್ಮಯ್ಯಗಜ್ಞಾತವಾದಳಲನು
ನೆರೆದು ಮನೆಯವರೆಯ್ದೆ ಕರಕರಿಪ ದುಃಖವನು
ತರಳ ನಿನ್ನಂ ನೋಡಿ ಮಱೆತು ಪರಿಣಾಮಮಂ
ಧರಿಸುತಿಪ್ಪೆನ್ನ ಗೋಣಂ ಕೊಯ್ದೆ ಇನ್ನಾರನೋಡಿ ಮಱೆದಪೆನೆಂದಳು ॥೨೮॥

ಅತಿಲಜ್ಜೆಗೆಟ್ಟನ್ಯರಾಳಾಗಿ ದುಡಿದು ದಾ
ವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂ
ಪತಿ ನಮ್ಮ ಬಿಡಿಸುವಾರ್ತದ ಮೋಹದಿಂ ಹಸಿವು ನಿದ್ರೆಯಂ ತೊಱೆದು ಬಂದು।
ಸುತನ ಕರೆಯೆಂದಡೇನೆಂಬೆನಾವುದ ತೋಱಿ
ಪತಿಯ ಮಱುಕವನು ಮಱೆಯಿಸುವೆನುಗ್ರಾಹಿಗಾ
ಹುತಿಯಾದನೆಂದು ಪೇಳ್ವೆನೆ ಎನ್ನ ಕಂದ ಎಂದಿಂದುಮುಖಿ ಬಾಯ್ಬಿಟ್ಟಳು ॥೨೯॥

ಅರಮನೆಯ ಮಣಿಗೃಹದ ಸೆಜ್ಜೆಯೊಳು ರಿಪು ನೃಪರ
ಕರಿದಂತದಿಂ ಕಡೆದ ಕಾಲ ಮಂಚದೊಳಿಟ್ಟು
ವರ ಹಂಸತೂಲತಲ್ಪದೊಳು ಮಣಿವೆಳಗಿನೊಳು ಸಾಗಿಸುವ ಜೋಗೈಸುವ ।
ತರುಣಿಯರ ನಡುವೆ ಪವಡಿಸುವ ಸುಕುಮಾರನೀ
ನರವರಿಸದೀ ಕಾಡೊಳಿರುತ ಕತ್ತಲೆಯೊಳಾ
ಸುರದ ಕಲು ನೆಲದೊಳೊಬ್ಬನೆ ಪವಡಿಸುವುದುಚಿತವೇ ಎಂದು ಬಾಯ್ಬಿಟ್ಟಳು ‖೩೦‖

ಮಂದಾನಿಲ ರಗಳೆ

ಏವೆನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇಱಿದೆಯೆಲಾ ಎನ್ನನು ಸುಕುಮಾರಾ
ಕೊಱೆದೆಯಲಾ ಕೊರಳನು ಜಿತಮಾರಾ
ವನಿತೆಯನಾಱಿಡಿಗೊಂಡೆಯೊ ವಿಧಿಯೇ
ಎನಗೀ ಪರಿಯಲಿ ಮಡಿವುದವಧಿಯೇ
ಶಿರದಲಿ ಬರೆದಕ್ಕರವೀ ಪರಿಯೇ
ಗರಳದ ಉರಿಯಲಿ ಒಱಗಿದೆ ಕಲಿಯೇ
ಎನುತ ಸುತನ ವದನವ ನೆಱೆ ನೋಡಿ
ವನಿತೆ ಮಹಾದುಃಖದೊಳೊಡಗೂಡಿ
ಪುತ್ರ ಶೋಕದುರಿ ಭುಗಿಲೆನೆ ನೆಗೆದು
ಗಾತ್ರವನಡರೆ ಕೊರಳ ಸೆರೆ ಬಿಗಿದು
ಹೊಟಹೊಟನೊಡೆಯಲು ದುಃಖದಿ ಕಾಯ
ತುಟಿಯೆಂತೆಂತಲುಗುತ್ತಿರೆ ಬಾಯ
ತೆಱೆದೊಱಲಿದಳೊಱಲಿದಳೋರಂತೆ
ಮೊಱೆಯಿಟ್ಟಳು ಹೊರಳಿದಳಾ ಕಾಂತೆ
ವಿಧು ಬಿಂಬಂ ರಾಹುವ ಪೋರ್ವಂತೆ
ವಧುವದನಂ ಸಿರಿಮುಡಿಯೋರಂತೆ
ಹುಡಿಯಾಗುತ್ತಿರೆ ಹೊರಳಿದಳಂದು
ಕಡುಶೋಕಾನಲನಿಂದುಱೆ ಬೆಂದು
ಉಕ್ಕುವಳಲ ಶಬ್ದಂ ಪೊಱಮಟ್ಟು
ಬಿಕ್ಕಿ ಬಿರಿದು ಹೊರಳುತ ಗೋಳಿಟ್ಟು
ಎತ್ತಣ ಬರಸಿಡಿಲೆಱಗಿತೊ ನಿನ್ನ
ಹುತ್ತಿನ ಹತ್ತಿರೆ ಒಱಗಿದೆ ಚೆನ್ನ
ಹಾವು ಹಿಡಿಯೆ ಹಾ ಎಂದೊಱಲಿದೆಯಾ
ಸಾವಾಗವ್ವಾ ಎಂದಳಲಿದೆಯಾ

ಅಯ್ಯಂಗಜುಟಿಯಯುಳುತ ನೀ ಕೆಡೆದಾ
ಕೈಯೆಡೆಗೆನ್ನನಿದಾರಿಗೆ ನುಡಿದಾ

ಮಟಮಂಟೆಯ ದೇಗುಲ ನಿನಗೆಂದು
ದಿಟದಿಂದೆನಗಿತ್ತೆಯೊ ನೀನಿಂದು

ಎಂಬ ನುಡಿಗೆಯಂಬರದಲ ಸುರರು
ಕಂಬನಿಯುಗಲಂದಾ ನಿರ್ಜರರು

ಹರನರಸಿಯುಂ ಸಿರಿಯುಂ ಕೋಪಿಸುತ
ಸರಸತಿಯುಂ ರತಿಯುಂ ತಾಪಿಸುತ

ಸಾವಿತ್ರಿಯು ಗಾಯತ್ರಿಯುರಳುತ
ಭಾವಿಸೆ ತ್ರೈಸಂಧ್ಯಾವಧುವಳುತ

ಪಾಪಿ ಕೌಶಿಕಂಗಂಜಿ ನಭದೊಳು
ಆಪೊಳ್ತಳಲುತ್ತಿರೆಯವನಿಯೊಳು

ಹೊರಳುತ್ತತ್ತಳು ಆತನ ಮಾತೆ
ಸರಳುರ್ಚಿದ ಮೃಗದೊಲು ವಿಖ್ಯಾತೆ

ರನ್ನದ ಕನ್ನಡಿ ಸಿಡಿದುದೊ ದೇವ
ಹೊನ್ನ ಕಳಸ ಕೆಡೆದೊಡೆದುದೊ ದೇವ

ಎನ್ನ ಕಡವರಂ ಸೂಱೆಹೋಯಿತೊ
ಹೊನ್ನ ಪ್ರತಿಮೆಯಸುಹಾಱಿ ಹೋಯಿತೊ

ಸಾಹಿತ್ಯದ ಸಾಗರವಱೆಯಿತ್ತೊ
ಅಹಾ ರತುನಸ್ತಂಭ ಮುಱಿಯಿತ್ತೊ

ಇನವಂಶದ ಲತೆ ಕುಡಿ ಮುರುಟಿತ್ತೊ
ಜನಪನಿಟ್ಟ ಸುರತರು ಮುಱಿಯಿತ್ತೊ

ಕಾಲ ಕರುಣವಿಲ್ಲದೆ ನೀನೊಯ್ದು
ಬಾಲನನಗಲಸಿ ಕೊರಳಂ ಕೊಯ್ದು

ಆರಿಗೆನ್ನನಪ್ಪಯಿಸಿದೆ ಕಂದ
ಆರಯ್ಯದೆ ಹೋಹರೆ ಗುಣವೃಂದ

ದೇಶಿಗಿತ್ತ ತನ್ನೊಬ್ಬಳನಿರಿಸಿ
ಬೇಸಱಿಸಿಯೆ ಹೋಹರೆ ಹೇವರಿಸಿ

ಪಾಪಿಯಾದೆನೆಲೆ ಮಗನೇ ಮಗನೆ
ಆಪತ್ತಡಸಿತು ರಿಪುಕರಿ ಮೃಗನೆ

ಮಣಿಮಕುಟವ ಧರಿಸುವ ಶಿರದಲ್ಲಿ
ಒಣಹುಲ್ಲಿಯ ಧರಿಸಿದೆ ಭರದಲ್ಲಿ

ಬಾಳುವಿಡಿದು ಜಡಿದೊಪ್ಪುವ ಭುಜದಿಂ
ತಾಳಿದೆ ಕೊಡಲಿಯ ಕರದಲಿ ನಿಜದಿಂ

ಚಂದನ ವಸ್ತ್ರಾಭರಣವನುಳಿದು
ಒಂದಱುವೆಯನುಡಿಸಿತು ವಿಧಿ ಮುಳಿದು

ದೇವಾನ್ನವನಾರೋಗಿಪ ನೀನು
ಗೋವಳರುಂಬಂಬಲಿಯುಣರಾನು

ಸೈರಿಸಲಾರದೆ ಬೆದಬೆದ ಬೆಂದು
ಧೈರಿಯದಿಂ ಪತಿಯಾಜ್ಞೆಗೆ ಸಂದು

ಏನೇನವಸ್ಥೆ ಬಂದಡೆಯಿಂಬಿಡಲು
ತಾನೇ ಬಂದುದು ಇಳೆ ನಾಂ ಬಿಡಲು

ಎಂತು ಸೈರಿಸಲು ಬಹುದೆಲೆ ದೇವ
ಕಂತುಹರನೆ ಕರುಣಿಸೆನಗೆ ಸಾವ

ಎನುತ ಸುತನ ಹಣೆಯೊಳು ಹಣೆವೆರಸಿ
ವನಿತೆ ಮಹಾದುಃಖವನುಱೆ ಧರಿಸಿ

ಆರ ಸಿರಿಯನೆಳೆಕೊಂಡೆನೊ ಮುನ್ನ
ಆರಳಲನು ಸೆಳೆಕೊಂಡೆನೊ ಮುನ್ನ

ಆರಿಕ್ಕಿದ ವನಮಂ ನಾಂ ಕಡಿದೆ
ಆರು ಸಲಹಿದೆಳಲತೆಗುಡಿಯುಡಿದೆ

ಆವನಮೃತ ಫಲವಳಲಿಸಿಕೊಂಡೆ
ಸಾವೆಯ್ದಿದ ಸುತನಳಿವಂ ಕಂಡೆ

ಅಲ್ಲದೊಡೀಯಳಲಪ್ಪುದೆ ಎನಗೆ
ಇಲ್ಲಿ ವೃಥಾ ಸಾವಪ್ಪುದೆ ನಿನಗೆ

ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ
ಎತ್ತಿದತೋಳನು ಕೆತ್ತಿದೆ ಮಗನೆ

ಹಾಡುವ ಬಾಯೊಳು ಮಣ್ಣನು ಹೊಯ್ದೆ
ನೋಡುವ ಕಣ್ಣೊಳು ಸುಣ್ಣವ ಹೊಯ್ದೆ

ಪಾಪಿಯೆನ್ನ ನೀನೊಮ್ಮೆಯು ನೋಡಾ
ಕೋಪವನುಳಿದೊಯ್ಯನೆ ಮಾತಾಡಾ

ಅಳಲದಿರವ್ವಾ ಎನ್ನೆಲೆ ಮಗನೆ
ಬಳಲನೆ ತಾಯೇ ಎನ್ನೆಲೆ ಮಗನೆ

ನಾನಿದ್ದಿಹೆನಂಜದಿರೆಂದೆನ್ನ
ಏನುವನುಮ್ಮಳಿಸದಿರೆಂದೆನ್ನ

ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೆ

ತಂದೆ ತಾಯಿಗಗ್ನಿಯ ನೀಕೊಡದೆ
ಮುಂದೆ ಹೋಗಲಹುದೇ ಮನಗುಡದೆ

ಇಕ್ಕಿದಗಲು ಹೊಲಸೇಳಲು ಬಿಟ್ಟು
ಮುಕ್ಕುಳಿಸಿದೆ ಜಲವಂ ಮರವಟ್ಟು

ಆರಿಗೆ ಪೇಳುವೆನೀ ಸಂಕಟವ
ಆರಿನ್ನುಂಟು ಮಗನೆ ನೀನಳಿಯೆ

ಹಂಸ ತೂಲ ತಲ್ಪವನೇಕೊಲ್ಲೆ
ವಂಶದ ನೃಪರ ಸಲಹಲೇಕೊಲ್ಲೆ

ಸುಪ್ರಭಾತ ಪಠನ ಧ್ಯಾನವನು
ವಿಪ್ರರ ಮಂತ್ರಾಶೀರ್ವಾದವನು

ಗಾನಾಮೃತ ಮಂಗಲ ಗೇಯುವನು
ಗಾಣರಿಗರಿದೆನಿಸುವ ಠಾಯುವನು

ಆಲಿಸಿ ಕೇಳೇಳೆಲೆ ಸುಕುಮಾರ
ಮೂರೋಕದ ಜಾಣರಿಗತಿವೀರ

ಮಂಗಳಾರತಿಗೆ ಮನಗೊಡು ಮಗನೆ
ಲಿಂಗಪೂಜೆಗೆಡೆಯಾಯಿತು ಮಗನೆ

ಮುಖಪ್ರಕ್ಷಾಳನಕೇಳೊಲವಿಂದ
ಮುಖರಕ್ಷೆಗೆ ಹೋಗೇಳೆಲೊ ಕಂದ

ಆಜ್ಯ ನಿರೀಕ್ಷಣೆಯನು ಮಾಡೇಳಾ
ಪೂಜ್ಯನಪ್ಪ ಶಿವನಂ ನೋಡೇಳಾ

ಕಪಿಲಾರ್ಚನೆ ಮಾಡೇಳೆಲೆ ತನುಜ
ತಪನರ್ಘ್ಯವ ಮಾಡಾತನ ಕುಲಜ

ನಿತ್ಯ ದಾನವೀಯದೆ ಇಹಗಿಹರೆ
ಅತ್ಯಧಿಕರ ಮನ್ನಿಸದಿಹಗಿಹರೆ

ಎಳಗನ ವೈಹಾಳಿಯ ಮಾಡೇಳ್ಕೆ
ಕೆಳೆಯರ ಮೇಳಕೆ ಮನಗುಡಲೇಳ್ಕೆ

ಮಲ್ಲರ ಕದನಕೆ ಕರೆದಹರೇಳಾ
ನಿಲ್ಲದೆ ಗರುಡಿಯು ಶ್ರಮಕಿದಿರೇಳಾ

ಹಲ್ಲಣಿಸಿದ ವಾರುವವಿದೆ ಮಗನೆ
ಮಲ್ಲಾಮಲ್ಲಿಯ ರಥವಿದೆ ಮಗನೆ

ಗಜಪಟೆ ಹಣ್ಣಿವೆಯೇಳೆಲೆ ಮಗನೆ
ನಿಜಪರಿವಾರಕೆ ಬೆಸಗೊಡು ಮಗನೆ

ಆವ ದಿಶಾಧಿಪರತ್ತ ನಡೆಯಲು
ಆವ ಹಗೆಯು ಸಪ್ತಾಂಗವ ಕೊಡಲು

ಬೆಸನುವೊಡೇಳೇಳೆಲೆ ಸುಕುಮಾರ
ವಸುಧಾ ಜನದಾಪತ್ತು ನಿವಾರ

ಮಲ್ಲವೇಷ ಯುದ್ಧವ ನೋಡೇಳಾ
ಬಿಲ್ಲಾಳ್ಗಳ ಭಾಷೆಯ ಬರಸೇಳಾ

ದೇಶಾಧಿಪರೀಪರಿ ಒಱಗುವರೆ
ಆಶಾಧಿಪರಳುಕದೆ ಬೀಳುವರೆ

ನೆತ್ತರ ಕಡಲೊಳಗಿಭಕುಲ ಬೀಳೆ
ವೊತ್ತದ ತುರಗಂಗಳು ಬೆಂಡೇಳೆ

ರಥತತಿ ವಾಜಿಯೊಳ್ಕೈತರೆ ಕವಿದು
ಮಥನದಿ ದೇವಾಸುರರೊಳು ಹೊಯಿದು

ಮಣಿಮಕುಟದ ಭಟರಟ್ಟೆಗಳಾಡೆ
ತಣಿದು ಭೂತಸಂಕುಳ ಕುಣಿದಾಡೆ

ಮಾರಿ ಮೃತ್ಯುಗಳಿಗೋಕರ ಹುಟ್ಟಿ
ಕ್ರೂರ ಜವಂಗತಿ ಭೀಕರ ಹುಟ್ಟಿ

ರಿಪು ಬಲವಂ ಕೊಂದಳಿದಡೆ ತಪ್ಪೆ
ತಪನ ಮಂಡಲ ವಿಭೇದವನೊಪ್ಪೆ

ಸುರಪತಿಯರ್ಧಾಸನವನ್ನೇಱದೆ
ನರಪತಿಗಳಿಗಚ್ಚರಿಯಂ ಬೀಱದೆ

ಧರೆಯನಾಳ್ವ ಸಿರಿಯಂ ಕಳೆದಿಂದು
ಉರಗನ ವಿಷದಗ್ನಿಯೊಳುಱೆ ಬೆಂದು

ಅಡವಿಯೊಳೀಪರಿ ಕೆಡೆವರೆ ವೀರ
ಪೊಡವಿಯೊಡೆಯನಗ್ಗದ ಸುಕುಮಾರ

ಏನು ಮಾಳ್ಪೆನಾ ಮಾಡಿರ್ದುದದನು
ತಾನುಂಬುದು ವಿಧಿ ಮಾಡಿದ ಹದನು

ಆರಿಗಱುಪುವೆನು ಹೇಳೆಲೆ ಮಗನೆ
ಸಾರಿನ್ನಳಲದಿರೆನ್ನೆಲೆ ಮಗನೆ

ಎನ್ನನೊಯ್ಯಲೇಕೊಲ್ಲೆಯೊ ಮಗನೆ
ನಿನ್ನನಗಲಯಿರಲಾಪೆನೆ ಮಗನೆ

ಎನಗಿನ್ನೆಂತೋ ಶಿವನೇ ಶಿವನೆ
ತನಯನನೊಯ್ಯನೆ ಕೊಂದೆಯೊ ಜವನೆ

ಕರುಣಿಸು ಪಾಪಿಗೆ ಪಂಪಾಪತಿಯೆ
ಕರುಣಿಸನಾಥೆಗೆ ಕಾಶೀಪತಿಯೆ

ಕರುಣಿಸಿ ಕಾಯ್ಯೆ ಗೌರೀರಮಣ
ನರಕಿಯಂ ನೋಡಲೆಯುಗಜಾರಮಣ ॥

ಇನ್ನಿನಿತಱುಂದ ಮೇಲೆವ್ಮೊಡೆಯನಱಿಸಿ ಬಂ
ದೆನ್ನನೊಯ್ವುಡೆ ಬಳಿಕ ಸುಡಹಡೆಯನೆಂಬುದಂ
ತನ್ನಲ್ಲಿ ತಾನೆ ತಿಳಿದೆದ್ದು ಪುತ್ರನನೆತ್ತಿಕೊಂಡು ದೆಸೆದೆಸೆಗ ತಿರುಗಿ ।
ಮುನ್ನೆಲ್ಲರುಂ ಸುಡುವ ಠಾವಾವುದೆಂದು ನೋ
ಳ್ಪನ್ನೆಗಂ ಹಲವು ಕೆಲಪುರಿಯ ಬೆಳಗಂ ಕಂಡು
ನನ್ನಿಕಾಱಂ ಕಾವ ಕಾಡತ್ತ ನಡೆವಾಗ ಬಟ್ಟೆಯೊಳದೇವೊಗಳ್ವೆನು ॥೩೧॥

ಬಿಡುದಲೆಯ ಬಿಟ್ಟ ಬಾಯ್ಗಳ ಬಱತ ಬಸುಱ ಕಳೆ
ದುಡುಗೆಗಳ ಕೆಂಗಣ್ಣ ಕೋರೆದಾಡೆಗಳ ಕಡು
ನಿಡಿಯೊಡಲ ಬತ್ತಿದಂಗದ ಸುಗಿದ ತೊಗಲ ಸುಕ್ಕಿದ ವೊಲೆಯ ಹೆಗಲ ಹೆಣನ ।
ಹಿಡಿದ ಕತ್ತಿಯ ಕಪಾಲದ ಭೂತವೇತಾಳ
ಪಡೆಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದ ವಾ
ನಡುವಿರುಳು ಮಾನಿನಿಯ ಮನ ಬೆದಱಬೇಕೆಂದು ಕೌಶಿಕ ಪ್ರೇರಣೆಯೊಳು ॥೩೨॥

ಹಸಿಯ ತೊಗಲುಡಿಗೆ ಹಿಂಡಿಲುಗರುಳ ಚಲ್ಲಣಂ
ಕುಸುರಿಗಂಡದ ತೊಂಗಲಸ್ಥಿಗಳ ತೊಡಿಗೆ ದ
ಟ್ಟಸಿದ ರಕ್ತದ ಭೂರಿಗಣ್ಣಾಲಿಗಳ ಸೊಡರು ಕಾಳಿಜದ ಸುರುಗುಗಡುಬು
ಸಸಿದು ಕೊಬ್ಬಿದ ಮಿದುಳ ರಾಸಿಗೂಳೆಸೆಯೆ ಮಾ
ಮಸಕದಿಂ ಕಾಮಾಕ್ಷಿ ಚಾಮುಂಡಿಯರ ಮುಂದೆ
ಹೊಸತನಿಕ್ಕುವ ಭೂತಭೇತಾಳರಾಡಿದರು ಕೌಶಿಕ ಪ್ರೇರಣೆಯೊಳು ॥೩೩॥

ಕೆಡೆದ ಮುಂಡದ ಬಿಟ್ಟ ತಲೆಯ ಚೆಲ್ಲಿದ ಕರುಳ
ಪಡಲಿಟ್ಟ ಕಾಳಿಜದ ಮಿದುಳ ಕೊಳ್ಗೆಸಱ ಹೊನ
ಲಡುವ ರಕುತದ ಕಡಲೊಳಡಿಯಿಡಲು ಬಾರದೆಂಬಂತೆ ವಿಶ್ವಾಮಿತ್ರನು ।
ಅಡವಿಯೊಳಗೆಯ್ದೆ ನಾನಾ ಭಯಂಕರವ ಸಾ
ಲಿಡಲದನು ಪುತ್ರಶೋಕಗ್ರಹಾ ವಿಷ್ಟತೆಯ
ಕಡುಪಿನಿಂ ಲೆಕ್ಕಿಸದೆ ಬಂದು ಸುಡುಗಾಡೊಳಿಳುಹಿದಳು ತನಯನ ಶವವನು ॥೩೪॥

ಗಳಗಳನೆ ಮುನ್ನ ಬೆಂದುಳಿದಿರ್ದ ಕರಿಗೊಳ್ಳಿ
ಗಳನೆಲ್ಲವಂ ಸಿದುಗಿ ತಂದೊಟ್ಟಿ ಮೇಲೆ ಮಂ
ಗಳಮಯ ಕುಮಾರನಂ ಪಟ್ಟಿರಿಸಿ ಕೆಲದೊಳುರಿವಗ್ನಿಯಂ ಪಿಡಿದು ನಿಂದು ।
ಬೆಳೆದಲ್ಲಿ ಬೆಳೆ ಹುಟ್ಟಿದಲ್ಲಿ ಹುಟ್ಟೆಂದು ನುಡಿ
ದಿಳುಹಲನುಗೆಯ್ದು ಳುಹಲಾಱದಳವಳಿದು ಬಾ
ಯಳಿದು ಮೊಱೆಯಿಟ್ಟೊಡಾ ದನಿಗೇಳ್ದು ನಿದ್ರೆ ತಿಳಿದೆದ್ದನಾ ಭೂಪಾಲನು ॥೩೫॥

ನಟ್ಟಿರುಳು ಸುಡುಗಾಡೊಳೊಬ್ಬಳೋರಂತೆ ಬಾ
ಯ್ಬಿಟ್ಟು ಹಲುಬುವ ವೀರನಾರಿಯಾವಳೊ ಮಾಱ
ಸುಟ್ಟೆಯಾದಡೆ ನಿನಗೆ ವೀರಬಾಹುಕನಾಣೆ ಕದ್ದು ಸುಡ ಬಂದೆ ನಿನ್ನ ।
ನಿಟ್ಟೆಲುವ ಮುಱಿವೆನೆಂದುರವಣಿಸಿ ಜಱೆಯುತ್ತ
ದಟ್ಟಿಸುತ ಬಂದು ಹಿಡಿದಿರ್ದ ಕಿಚ್ಚಂ ಕೆದಱ
ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ ಭೂಪನು ॥೩೬॥

ಬಿಸುಡದಿರು ಬಿಸುಡದಿರು ಬೇಡ ಬೇಡಕಟಕಟ
ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕಿಸಿಕೊಂಡು ಕುಲವ ನೋಡದೆ ಬೇಡಿಕೊಂಬೆನಿವನೆನ್ನ ಮಗನಲ್ಲ ನಿನ್ನ
ಶಿಶುವಿನೋಪಾದಿ ಸುಡಲನುಮತವನಿತ್ತು ರ
ಕ್ಷಿಸು ಕರುಣಿ ಎಂದೊಡೆಲೆ ಮರುಳೆ ಹೆಣನುಟ್ಟುದಂ
ಮಸಣವಾಡಗೆಯ ಹಾಗವನು ಕೊಟ್ಟಲ್ಲದೇನೆಂದಡಂ ಬಿಡೆನೆಂದನು ॥೩೭॥

ಕೊಡಲೇನುವಿಲ್ಲವಿಂದೆನಗೆ ಲೋಗರ ಮನೆಯ
ಬಡದಾಸಿ ಕರುಣಿಸೆನೆ ನಿನ್ನ ಕೊರಳಿನೊಳಿರ್ದ
ಕಡು ಚೆಲುವ ತಾಳಿಯನದನ್ನಡವನಿರಿಸಿ ನೀ ಬಿಡಿಸಿ ಕೋ ಬಳಿಕವೆನಲು ।
ಮಡದಿ ಕಡು ನೊಂದಕಟ ಪೊಡವಿಪತಿ ಮಡಿದ ಕೇ
ಡಡಸಿತಲ್ಲದೊಡೆನ್ನ ಗುಪ್ತಮಂಗಳ ಸೂತ್ರ
ದೆಡೆಯ ಹೊಳೆಹೊಳೆವ್ವೈದೆದಾಳಿಯುನಿದಂ ಶ್ವಪಚನೆಂತು ಕಂಡಪನೆಂದಳು ॥೩೮॥

ವಿಗತಸಪ್ತದ್ವೀಪಪತಿಯು ಬಸುಱಲಿ ಬಂದು
ಮಗನೆ ನಿನಗೊಮ್ಮೆಟ್ಟು ಸುಡುಗಾಡು ಹಗೆಯಾಯ್ತು
ಮಿಗೆ ಸಕಲ ಲೋಕದೊಳು ತನ್ನಾಣೆ ಸಲುವನ ಕುಮಾರನೆನಿಸುವ ನಿನ್ನನು ।
ಬಗೆಯದೀ ಚಾಂಡಾಲನಾಣೆಯಿಡುವಂತಾಯ್ತು
ಜಗದ ನವ ನಿಧಿಗೊಡೆಯುನಾತ್ಮಭವನೆನಿಸಿ ಮು
ಟ್ಟಿಗೆಯ ಸುಂಕದ ಹಾಗವಿರ್ದಾಲ್ಲಯ್ತು ಮಗನೆ ಎಂದಳಲದಳು ಹಂಬಲಿಸುತ ॥೩೯॥

ವನಿತೆಯಳಲಂ ಕೇಳ್ದು ನಡುಗಿ ವಿಶ್ವಾಮಿತ್ರ
ಮುನಿಯೆನೆಗೆ ಮತ್ತೆ ಮಾಡಿದ ತೊಡಕಿದಾಗದಿರ
ದೆನುತ ಮನದೊಳು ಮಱುಗುತಾವ ಲೋಕದೊಳಾಣೆ ಸಲುವುದೆನಿಸುವ ಭೂಪನ।
ತನಯನೀ ತರಳನೆಲೆ ತರುಣಿ ನೆಲದೆಱೆಯನಿ
ಕ್ಕೆನಲು ಕೊಡಲದಿಲ್ಲಧಿಕರ ಪೆಸರ್ಗೊಳಲು ಬಿಡು
ವೆನೆ ಶೋಕಿಸುವ ಹೊತ್ತು ಹುಸಿದು ಶೋಕಿಸುವೊಡೇನಹುದೆಂದನವನೀಶನು ॥೪೦॥

ಹಿಂದುಳಿದ ಸಂಪದವನೆಣಿಸುವುದು ಹುಸಿಯಲ್ಲ
ವಿಂದೀಗ ತೋಱೆ ಬಪ್ಪುದೆ ಹುಸಿಯದುಂಟೆ ತ
ಪ್ಪೆಂದಡದಕೇನಾತನಾರ ಮಗನಾವ ಪೆಸರಾವನಾದರಸನೆನಲು ।
ನಂದ ರವಿಕುಲ ತಿಲಕನೆನಿಪಾ ತ್ರಿಶಂಕುವಿನ
ನಂದನನಯೋಧ್ಯಾಧಿಪತಿ ಹರಿಶ್ಚಂದ್ರನೆನೆ
ನೊಂದಾತನಂಗನೆ ಕುಮಾರರೇನಾದರೆಲ್ಲಿರ್ದಪರು ಹೇಳೆಂದನು ॥೪೧॥

ಪೊಡವೀಶ್ವರಂ ಹಿಂದೆ ಹರಸಿ ಹಾಳಂಬಟ್ಟು
ಹಡೆದ ಸುತನೀತನಾತನ ವನಿತೆ ನಾನೆನಲು
ಮಡಿದ ಕಾರಣವಾವುದೀ ತನಯನೆಂದಡೆವ್ಮಿಬ್ಬರಂ ಮಾಱುಗೊಂಡ ।
ಒಡೆಯನರಮನೆಗೆ ಹುಲುಹುಳ್ಳಿಯಂ ತಪ್ಪೆನೆಂ
ದಡವಿಗೆಯ್ದಿದಡಲ್ಲಿ ಕಾಳೋರಗಂ ಕಚ್ಚಿ
ಮಡಿದನೀ ಕಂದ ನೀ ವಿಧಿಗೆ ಸೇರಿತು ಹರಿಶ್ಚಂದ್ರನಿರವೇನೆಂದಳು ॥೪೨॥

ನುಡಿಯಲಱಿಯದೆ ಸಕಲ ರಾಜ್ಯಮಂ ಹೋಗಾಡಿ
ಕಡೆಗಧಿಕ ಋಣಿಯಾಗಿ ನೆಲೆಗೆಟ್ಟು ಮಂತ್ರಿವೆರ
ಸಡವಿಗುಱಿಯಾಗಿ ಕೈವಿಡಿದ ಸತಿಪುತ್ರರಂ ಮಾಱಿ ಸುಕ್ಷೇತ್ರದೊಳಗೆ ।
ಕಡೆಗೆ ಚಂಡಾಲ ಕಿಂಕರನಾಗಿ ದೋಷಕ್ಕೆ
ನಡುಗದೆ ಕುಲಾಚಾರಮಂ ಬಿಟ್ಟು ಜಗಕೆ ನಗೆ
ಗೆಡೆಯಾದ ಪಾತಕ ಹರಿಶ್ಚಂದ್ರನವನನೇನೆಂದು ನೆನೆದಪೆಯೆಂದನು ॥೪೩॥

ಜಡೆವೊತ್ತಡಂ ಹಸಿಯತೊವಲುಟ್ಟಡಂ ನಾಡ
ಸುಡುಗಾಡಿನೊಳಗಿರ್ದಡಂ ನರಕಪಾಲಮಂ
ಪಿಡಿದಿರ್ದಡಂ ತಿರಿದು ವಿಷವುಂಡಡಂ ಶವಶಿರೋಮಾಲೆಗಟ್ಟಿರ್ದಡಂ ।
ಕಡು ಮರುಳ್ ಪಡೆಯ ಸಂಗಡ ಬತ್ತಲಿರ್ದಡಂ
ಮೃಡನಲ್ಲದಖಿಲಲೋಕಕ್ಕೊಡೆಯನಿಲ್ಲೆಂಬ
ನುಡಿಯಂತಿರೆನಗಾ ಹರಿಶ್ಚಂದ್ರನಲ್ಲದಿನ್ನಾರು ಗತಿಮತಿಯೆಂದಳು ॥೪೪॥

ಉಱುವಬಲೆಯುಚಿತ ವಚನಂ ಕರ್ಣ ಪಥದಿನೊಳ
ಗೆಱಗಿ ಚಿತ್ತವನು ತೊತ್ತಳದುಳಿದು ಧೈರ್ಯಮಂ
ಬಱಿಕೆಯ್ದು ಕರಣಂಗಳಂ ಕದಡಿ ಹೆಮ್ಮೆಯಂ ಹಱಿದಳಲನೊದೆದೆಬ್ಬಿಸಿ ।
ಮಱುಕಮಂ ಮಸೆದು ಕಂಬನಿವೊನಲ ಕೋಡಿಯಂ
ಕೊಱೆದು ಮತಿಗತಿ ಮಾಯೆಯಂ ತೋಱಿ ಮೀಱಿ ನೇ
ಸಱಿ ಕುಲಜನೋರಂತೆ ಸಿಗ್ಗಾಗಿ ತಾ ಮಾಡಿದಪರಾಧಮಂ ನೆನೆದನು ॥೪೫॥

ಈ ಸತಿಯನೀ ಶುಚಿಯನೀ ಪತಿವ್ರತೆಯ ನಾ
ನೀಸು ಧಾವತಿಗೊಳಗುಮಾಡಿದೆನು ನೀಚದ್ವಿ
ಜೇಶಂಗೆ ಮಾಱಿ ಮಱೆದೀ ಸುತನನೀ ಸುಖಿಯನೀ ಸೊಬಗ ಸುಕುಮಾರನ ।
ಓಸರಿಸದುರಗ ಕೊಲುವಂತೆ ಮಾಡಿದೆನೆಂಬ
ಹೇಸಿಕೆಯ ವಾರಾಶಿ ತುಂಬಿ ತುಳುಕಾಡಿ ಹೊಱ
ಸೂಸುವಳಲಂ ನಿಲಿಸಿ ನಿಲಿಸಲಾಱದೆ ಮಗನ ಮೇಲೆ ದೊಪ್ಪನೆ ಕೆಡೆದನು ॥೪೬॥

ತನಗೆ ಹೊಯ್ ಕೈಯಪ್ಪ ಭೂಭುಜರನೋಲೈಸಿ
ಧನವನಾರ್ಜಿಸಿ ತಂದು ಸೆಱೆಯ ಬಿಡಿಸುವನೆಮ್ಮ
ಜನಪನೆಂದಾನಿರಲು ಮಾದಿಗಂಗಾಳಾಗಿ ಸುಡಗಾಡ ಕಾವ ಭಾಗ್ಯ ।
ನಿನಗಾಯ್ತೆ ಭೂಪಾಲ ಎಂದು ದುಃಖಕ್ಕೆ ಪು
ತ್ರನ ಶೋಕದುರಿಗೆ ತನು ಹೇವರಿಸಿ ವನಿತೆ ತಾ
ಮನನೊಂದು ದೆಬಿಗಾಗಿ ಚಿಂತಿಸುತ ತೂಕದ ಕೋಲ ತೊಲೆಯಾದಳು ॥೪೭॥

ಪ್ರಕಟ ರಾಜ್ಯಭ್ರಷ್ಟನಾಗಿ ಚಂಡಾಲ ಸೇ
ವಕನಾದ ಪಾಪಿಯಂ ನೀಚನನನೂನ ಪಾ
ತಕನೆನ್ನಂ ಪೋಲ್ತು ಕೆಡವೆ ನಿಮ್ಮಜ್ಜ ತ್ರಿಶಂಕು ಭೂವರನಂದದಿ ।
ಸಕಲ ರಾಜ್ಯಕ್ಕೊಡೆಯನಾಗದಿರನೀ ಕುಮಾ
ರಕನೆಂಬ ನಂಬುಗೆಯರಾನಿರಲು ಕಂದ ನೀ
ನಕಟ ನಿಷ್ಕಾರಣಂ ಮಡಿವರೇ ತಂದೆ ಎಂದಳಲತೊಡಗಿದನರಸನು ॥೪೮॥

ಧರೆಗಧಿಕತರಮಪ್ಪ ವರ ಕಾಶಿಯಂ ಸಾರ್ದು
ಶರಣರೇನೆಂದುದಂ ಕೊಟ್ಟು ರಕ್ಷಿಸುವ ಶಶಿ
ಧರ ವಿಶ್ವಪತಿಯಂಘ್ರಿಕಮಲವನು ಭಕ್ತಿಯಿಂದೊಲಿದು ಪೂಜಿಸಿ ಮೆಚ್ಚಿಸಿ ।
ಪಿರಿಯ ಸಿರಿಗರನಾಗಿ ಧರೆಯೊಳಗೆ ಮೆಱೆದು ದಿನ
ಕರ ಕುಲದ ನೃಪರ ಹೆಸರಂ ನಿಲಿಸಿ ಬಾಳದೀ
ಪರಿಯುಲುರಗಂಗೆ ಸವಿದುತ್ತಾಗಿ ಹೋಹರೇ ಸುಕುಮಾರ ಹೇಳೆಂದನು ॥೪೯॥

ಮುಂದೆ ನೀನಾಳಲಹ ಧರೆಯನನ್ಯರಿಗಿತ್ತೆ
ನೆಂದು ನುಡಿಸೆಯೊ ಮತ್ತದಲ್ಲದೆಮ್ಮಿಬ್ಬರಂ
ತಂದು ರೋಗರಿಗೆ ಮಾಱಿದನೆಂದು ನುಡಿಸೆಯೋ ಚಾಂಡಾಲ ಸೇವೆಮಾಡಿ ।
ನಿಂದೆಯಿಲ್ಲದ ಸೂರ್ಯಕುಲಕೆ ಕುಂದಂ ತಂದ
ನೆಂದು ನುಡಿಸೆಯೊ ನುಡಿಯದಿಹ ಹದನನಱಿಪಬೇ
ಕೆಂದೊಱಲ ಬಾಯ್ಬಿಟ್ಟು ಕರೆದು ಹಾರಿದನು ಸುತನಲ್ಲಿ ಮಾಱುತ್ತರವನು ॥೫೦॥

ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾಯ್ದು ಮಡಿದಾತನಲ್ಲ ದೇ
ವರಿಗೆ ಹಿತವಾಗಿ ಮಡಿದವನಲ್ಲ ಮಾಂಸದಾನವ ಬೇಡಿದಗೆರ್ಡಲನು ।
ಅರಿದರಿದು ಕೊಟ್ಟು ಮಡಿದವನಲ್ಲ ಹುಳ್ಳಿಯಂ
ತರಹೋಗಿ ಕಾಡೊಳಗೆ ಬಡ ಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂಡ ಹೇಳೆಂದನು ॥೫೧॥

ಪೋಗೆ ಮಗನರಸಾಗಬೇಕೆಂಬ ಮಱುಕದಿಂ
ಯಾಗಕ್ಕೆ ಸತನನರಿದಿಕ್ಕಲಾಱದೆ ಲೋಭ
ಯಾಗಿ ಮುನಿ ಪುತ್ರನಂ ಮಾಱುಗೊಂಡಿತ್ತನೆಂಬಪಕೀರ್ತಿಯೇ ಉಳಿದುದು ।
ಲೋಗರ ಮಗನನಿಕ್ಕಿ ನೆಲೆಯ ನೋಡಿದನಕಟ
ಸಾಗುದುರೆಗಡಕಿದನು ಹುಲ್ಲನೊಣಗಿದ ಹಣ್ಣ
ಕಾಗೆ ಕದುಕಿತ್ತೆಂದು ಸಂದ ಜನ ನಿಂದೆಗೆಯ್ವಂದವಾಯ್ತೆನಗೆಂದನು ॥೫೨॥

ಸುರಪನ ಚರಂ ಚಿತ್ರವರ್ಮನಂದಧ್ವರದ
ತುರಗಮಂ ಕದ್ದು ಬರೆ ಹಿಂದಿಕ್ಕಿಕೊಂಡು ಪಿರಿ
ಯುರಗನೊಳು ಕಾದಿ ಕುದುರೆಯ ಕೊಂಡ ಸುಭಟನೀ ಹಾವಿಂಗೆ ಮೈಗೊಡುವರೆ।
ಕರ ಮುನಿದು ವರುಣಾದಿ ದೇವರ್ಗೆ ಬಿಲುಗೊಂಡು
ಮರಣಮಂ ಗೆಲದಾತನೀ ಪರಿಯೊಳಳಿವರೇ
ಸಿರಿ ಹೋದಡೊಡನೆ ಬಲುಹುಂ ಹೋಗಬೇಹುದೇ ಸುಕುಮಾರ ಹೇಳೆಂದನು ॥೫೩॥

ಸುತನ ರೂಪಿನ ಸೊಬಗ ನಂಗಸುಕುಮಾರ ದು
ನ್ನತಿಯ ಬಾಲ್ಯದ ಚೆಲುವನೆಲ್ಲಾ ಕಳಾ ಪ್ರವೀ
ಣತೆಯ ಗರುವಿಕೆಯ ಗಾಡಿಯ ಧೃತಿಯನೊಟ್ಟಜೆಯನಳವಟ್ಟ ನುಡಿಯ ಚದುರ ।
ನುತ ಲಕ್ಷಣಾವಳಿಯನಧಿಕ ಗುಣ ಗಣವನಾ
ಯತಿಗೆಟ್ಟು ನೆನೆದು ಶೋಕಿಪೆನೆಂದಡಾ ಕಲ್ಪ
ಶತವೆಯ್ದದರಸ ದುಃಖವನು ಸಂತೈಸಿಕೊಂಡೆನ್ನನವಧರಿಸೆಂದಳು ॥೫೪॥

ಪುದಿದಿರುಳು ಕಡೆಗಾಣ್ಬ ಕುಱುಹಾಗುತಿದೆ ಸೂರ್ಯ
ನುದಯಿಸಿದನಾದಡೆನ್ನವರೆನ್ನನರಱಿಸಿ ತಳು
ವಿದಳೆಂದು ಕೊಲ್ಲದಿರರೀ ಕುಮಾರನನೀಗ ದಹಿಸಬೇಕರಸ ಎಂದು।
ಸುದತಿ ನುಡಿಯಲು ನುಡಿದನವನೀಶ ತೆಱೆಯನಿ
ಕ್ಕದೆ ಸುಡಲ್ಬಾರದುಳ್ಳಡೆ ಕೊಡಿಲ್ಲದೊಡೆ ಬೇ
ಗದಿ ಹೋಗಿ ನಿನ್ನೊಡೆಯನಂ ಬೇಡಿ ತಾ ತಾರದಿರೆ ಸುಡಲ್ಬೇಡೆಂದನು ॥೫೫॥

ಒಡೆಯರೀವವರಲ್ಲವೆನೆ ಬೇಡಿ ನೋಡಿ ಕೊಡ
ದಡೆ ಋಣಂಬಡು ಋಣಂ ಪುಟ್ಟದಿರ್ದಡೆ ಸುಡುವ
ಗೊಡವೆ ಬೇಡನ್ನೆಗಂ ಬಂದನಿತು ಬರಲೆಂದು ತರುಣನುಟ್ಟುದನು ಕೊಂಡು ।
ಪೊಡವೀಶ್ವರಂ ತಿರುಗಿ ತನ್ನ ಕಾಪಿನ ಗುಡಿಗೆ
ನೆಡೆಗೊಂಡನತ್ತಲತ್ತಲ್ ಪುರಕೆ ಬರುತಿಪ್ಪ
ಮಡದಿಗೆಡೆವಟ್ಟೆಯೊಳು ಬಂದ ಸಂಕಟವ ನಿನ್ನಾವ ಜೀವರು ಕೇಳ್ವರು ॥೫೬॥

ಮುಂದೆ ಭೂಪನ ಸತಿಗುಪದ್ರವಂ ಮಾಡಬೇ
ಕೆಂದು ಕೌಶಿಕ ಮುನೀಂದ್ರಂ ನೆನೆದು ಚಿಂತಿಸು
ತ್ತೊಂದುಪಾಯಂಗಂಡು ಚೋರರಂ ಕೆಲಬರಂ ನಿರ್ಮಿಸುತವರ್ಗೆಂದನು ।
ಇಂದು ನೀವೀ ಪುರವನಾಳ್ವರಸನನಣುಗನಂ
ಕೊಂದಾಕೆ ಬಪ್ಪ ಬಟ್ಟೆಯೊಳಿರಿಸಿ ಬನ್ನಿ ಹೋ
ಗೆಂದು ಬೆಸಸಲು ಯತಿಪನಾಜ್ಞೆಯಿಂದವದಿರೆಯ್ತಂದು ಪೊಳಲಂ ಸಾರ್ದರು ॥೫೭॥

---

## ೧೩

ಪತಿಯಾಜ್ಞೆಗಂಜಿ ನಿಜ ಸುತನ ಸುಡಲಮ್ಮದಾ
ಸತಿ ಹೋಗುತಿರಲು ರಕ್ಕಸಿಯೆಂದು ಪಿಡಿದು ಧೂ
ಪತಿಯ ಕೈಯಲಿ ಕೊಡಲು ಹೊಡೆದ ದೃಢಕಾ ವಿಶ್ವಪತಿ ನಿಜವ ತೋಱಿಸಿದನು
। ಸೂಚನೆ ।

ಚೋರರೊಳಪೊಕ್ಕು ವಿಕ್ರಾ ಪುರದ ಭೂಪನ ಕು
ಮಾರನಂ ಕೊಂಡೋಡಿ ಬಂದು ಗೊಂದಿಯೊಳಲಂ
ಕಾರವಂ ಕೊಂಬ ಭರದಿಂ ಕೊರಳನರಿಯಲಾ ಶಿಶುವೊಱಲಲಾ ದನಿಯನು।
ದೂರದಿಂ ಕೇಳ್ದೆನ್ನ ಮಗನಾಗದಿರನೆನು
ತ್ತಾರೋ ನಿರೋಧಿಸುವರೆಂದೋಜೆ ಹುಟ್ಟದವಿ
ಚಾರದಿಂ ಹರಿದಳೆಂಬಾಗಳತಿ ದುಃಖಿಗುಂಟೇ ಬುದ್ಧಿ ಜಗವಱಿಯಲು ॥೧॥

ಸಾರಿ ಬರೆ ಬಿಟ್ಟೋಡಿ ಹೋದ ಚೋರರ ಖಡ್ಗ
ಧಾರೆಯಿಂ ಬಸದಳಿದ ಹಸುಳೆಯಂ ತನ್ನಯ ಕು
ಮಾರನೆಂದೇ ಬಗೆದು ಕರೆಕರೆದು ತಲೆದಡವಿ ತಡವರಿಸಿ ಮೆಯ್ಯುಗ್ಗುಱಿಹನು ।
ಹಾರುತಿರೆ ಬಾರಿಸುವ ಬೊಂಬುಳಿಯ ಕೊಂಬುಗಳ
ಭೇರಿಗಳ ಬೊಬ್ಬೆಗಳ ಕಳಕಳದೊಳಱಿಸಿ ಬಂ
ದಾರುತ್ತ ಹರಿತಂದು ಹಿರಿಯ ಹುಯ್ಯಲ ಭಟರು ಕಂಡು ಹಿಡಿದರು ಸತಿಯನು॥೨॥

ಎಲೆಲೆ ರಕ್ಕಸಿಯಾಗದಿರಳಿವಳು ನಾವಿಲ್ಲಿ
ಕೊಲಬೇಡವೀಯಂಗವೆರಸಿ ಕೊಂಡೊಯ್ದು ಭೂ
ತಲಪತಿಗೆ ಕೊಡುವೆವೆಂದಸುವಳಿದ ಹಸುಳೆಯಂ ಹೊಱಸಲಾಗೊಸರ್ವ ರಕುತ।
ತರೆಯಿಂದ ಸುರಿದುಟ್ಟ ಸೀರೆ ತೊಪ್ಪನೆ ತೋಯೆ
ಲಲನೆಯಂ ಕಿತ್ತಲಗುಗಳ ನಡುವೆ ಹೆಡಗೈಯ
ಬಲಿದ ನೇಣಂ ಪಿಡಿದು ಜಡಿ ಜಡಿದು ನಡೆಸಿ ತಂದರು ರಾಜ ಬೀದಿಯೊಳಗೆ ॥೩॥

ಎನ್ನನಿವರಾಡಿಸಿದಡೇನನಾಡುವೆನೆಂದು
ತನ್ನ ಮನದೊಳು ತಾನೆ ತಿಳಿದು ನಿಶ್ಚಯಿಸಿದಳು
ಮುನ್ನೀಗಳಾವಾವ ದುಃಖವುಂಟವನೆಯ್ದೆ ಕಂಡೆನುಂಡೆನು ತಣಿದೆನು ।
ಇನ್ನೇನ ಕಾಣಲರ್ದಪೆನರಸ ಕೇಳಿದೊಡೆ
ನಿನ್ನ ಮಗನಂ ಕೊಂದ ಪಾಪಿಯಾನೆಂದಾಡಿ
ಯನ್ಯಾಯದಿಂ ಸಾವೆನೆನುತ ಬರಲೋಲಗದ ಗಜಬಜವನೇವೊಗಳ್ವೆನು ॥೪॥

ಅಲ್ಲಿ ನೋಡಿಲ್ಲಿ ನೋಡುತ್ತ ಹರಿಯುತ್ತ ಹರಿ
ಹಲ್ಲಣಿಸು ತುರಗಮಂ ಕೈದುಗೊಳ್ಳೂರಮನೆ
ಯೆಲ್ಲವಂ ಸೋದಿಸುವುದೂರ ದಾರಿಗಳಲ್ಲಿ ಕಂಡಿರಾದಡೆ ಕಳ್ಳರ।
ಕೊಲ್ಲು ತಿವಿ ತಿದಿಯನುಗಿಯೆಂಬ ಕಳಕಳ ರವದ
ಫಲ್ಲಣೆಯ ಭಟರ ತಿಂತಿಣಿಯೊಳುಪ್ಪರಿಗೆ ಜಡಿ
ದಲ್ಲಾಡುವಂತೋಲಗಂ ಗೊಟ್ಟು ಕೋಪಾಗ್ನಿ ರೂಪಾದ ಭೂಪನಿರಲು ॥೫॥

ಹಸುಳೆಯಂ ಕದ್ದುಕೊಂಡೊಯ್ದು ನೋಯಿಸಿದ ರ
ಕ್ಕಸಿಯ ಹಿಡಿತಂದೆವವಧರಿಸೆನಲು ಕಂಡು ಶಂ
ಕಿಸುತ ನೀನಾರೆತ್ತಣವಳೇಕೆ ಕೊಂದೆ ಸುಕುಮಾರಕನನೆಂದರಸನು ॥
ಬೆಸಗೊಳಲು ದನುಜೆಯಲ್ಲಾಂ ಮನುಜೆಯಾನರ್ಥ
ವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನೀ
ಶಿಶುವ ನೀನೊಲಿದಂತೆ ಮಾಡೆನ್ನನೆಂದಳಾ ರಾಣಿ ವಸುಧಾಧಿಪತಿಗೆ ॥೬॥

ಹೆದಱದಿರು ತೆಕ್ಕದಿರು ಅಂಜದಿರು ಲೋಗರಿ
ಟ್ಟುದೊ ನಿನ್ನ ಕೃತಕವೋ ಹೇಳು ಧರ್ಮಾಧಿಕರ
ಣದವರಂ ಕರಸುವೆಂ ನುಡಿಸುವೆಂ ಕಾವೆನೆಂದನವನಿಪಂ ಬೆಸಗೊಂಡಡೆ ।
ಇದಕಿನ್ನು ಧರ್ಮಾಧಿಕರಣವೇಗುವುದು ಕೊಂ
ದುದು ದಿಟಂ ಸತ್ತಶಿಶು ಕೈಯಲಿದೆಯಿದಕೆ ತ
ಕ್ಕುದನೀಗ ಕಾಬುದೆಂದಾಡಿದಳು ಜೀವದಾಸೆಯನೇನುವಂ ಹಾರದೆ ॥೭॥

ಕೊಂದೆ ಕೊಂದೆಂ ಕೊಂದೆನೆಂದು ತನ್ನಿಂದ ತಾ
ನೆಂದಡಿನ್ನೇಕೆ ಲೋಕದ ಮಾತು ಕೊಂದರಂ
ಕೊಂದು ಕಳೆವುದೆ ಧರ್ಮ ಜಗವರ್ತಿಯಂ ಹೊತ್ತಿಸೆಳೆ ಹೂಟೆಯಂ ಹೂಡಿಸು ।
ಸಂದು ಸಂದಂ ಕಡಿಸು ಕಿವಿ ಮೂಗನರಿ ಬಹಳ
ದಿಂದ ತಿವಿಯೆಂದೊಬ್ಬರೊಂದೊಂದನೆಂದುದಾ
ಮಂದಿ ತನತನಗೆ ನುಡಿಯುತ್ತಿರಲು ವೀರಬಾಹುಕನ ಕರಸಿದನರಸನು ॥೮॥

ಭೂನುತ ಕುಮಾರನಂ ದಹಿಸಿ ದೂವೆಯು ಕೆಲದೊ
ಳೀ ನರಕಿ ವನಿತೆಯುನನಾಮಿಕನ ಕಯ್ಯೊಳನು
ಮಾನವಿಲ್ಲದೆ ಕೊಲಿಸು ಹೋಗೆಂದು ವೀರಬಾಹುಕನ ಕೈಯಲಿ ಕಳುಹಲು ।
ಏನೆಂದುದಂ ಮಾಳ್ಪೆನೆಂದು ಸುಡುಗಾಡನ
ತ್ಯಾನಂದದಿಂ ಕಾವ ಚಂಡುಗನ ಕಯ್ಯೊಳೀ
ಹೀನ ವನಿತೆಯ ಕೊಲಿಸುವೆಂ ಬೇಗ ಕರೆಯೆನಲ್ಕರರೆ ಭೂಪಂ ಬಂದನು ॥೯॥

ವಸುಧಾಧಿಪತಿಯ ನೇಹದ ಮಗನ ಕೊಂದ ರ
ಕ್ಕಸಿಗಂವಳನಾ ರುದ್ರಭೂಮಿಯೊಳಗೆಯ್ದಿ ತ
ಪ್ಪಿಸದೆ ಕೊರಳಂ ಕೊಱೆದು ಬಿಸುಡೆಂದು ಬೆಸನ ಕೊಡಲಡಸಿ ಮುಂದಲೆಯ ಪಿಡಿದು।
ಕುಸುಕಿ ಕೆಡೆಮೆಟ್ಟಿ ಕೈಗಳ ಸೇದಿ ಬೆಂಗೆ ಬಾ
ಗಿಸಿ ಬಿಗಿದು ಹೆಡಗಯ್ಯ ನೇಣಿಂದ ಹೊಡೆದು ದ
ಟ್ಟಿಸಿ ಪಾಪಿ ಹೊಲತಿ ನಡೆನಡೆಯೆಂದು ನಡೆಸಿ ತಂದಂ ತನ್ನ ತವಗದೆಡೆಗೆ ॥೧೦॥

ಇಂದೆನ್ನ ಕುಲಜನೆನಿಸುವ ಹರಿಶ್ಚಂದ್ರನಂ
ಹೆಂದದ ಚತುರ್ದಶ ಜಗಂಗಳಱಿವಂತು ತರು
ಣೇಂದುಧರನಹ ವಿಶ್ವಪತಿ ಮೆಱೆವ ಸಂಭ್ರಮದ ಸಡಗರವ ನೋಳ್ಪೆನೆಂದು ।
ಕುಂದದುದ್ಧವನೇಱಿ ನಿಂದಿಪ್ಪನೋ ಎನಿ
ಪ್ಪಂದದಿಂದುದಯಗಿರಿ ಶಿಖರಕ್ಕೆ ರಾಗದಿಂ
ಬಂದನಂಬುಜಮಿತ್ರನೆಂದೆನಿಪನಪವಿತ್ರ ತಿಮಿರ ಪಟಲಾ ಮಿತ್ರನು ॥೧೧॥

ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು ನಿಡು
ದಡದಲ್ಲಿ ಮೂಡ ಮುಂತಾಗಿ ಕುಳ್ಳಿರಿಸಿ ಹಿಂ
ದಡದಲ್ಲಿ ಕುಸಿದು ನೀಡಡಿಯಿಟ್ಟು ನಿಂದು ಖಡ್ಗವ ಸೆಳೆದು ಜಡಿದು ನೋಡಿ।
ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಱಿಯೆ
ಹೊಡೆಯಲನುವಾದೆನನುವಾದೆ ನನುವಾಗಾಗು
ಮಡದಿ ನೆನೆ ನಿನ್ನ ದೈವವನು ಬಿಡದೆನ್ನೊಡೆಯನಂ ಹರಸು ಹರಸೆಂದನು ॥೧೨॥

ಆ ಹೊಯ್ದನಾಹೊಯ್ದನೆಲೆಲೆ ಶಿವ ಶಿವ ಅಷ್ಟ
ದೇಹಿ ನೀನೇ ಶರಣು ರಕ್ಷಿಸಬಲೆಯನು ದು
ರ್ಮೋಹಿ ವಿಶ್ವಾಮಿತ್ರ ಪಾಪಿ ಇನ್ನಾದೊಡಂ ಸತಿಯ ಕೊಲೆಯಂ ನಿಲಿಸಲು ।
ಹೋಹುದೇನೆಂದೊೀವಿ ಬೇಡಿಕೊಳುತಂ ಸುರ
ವ್ಯೂಹಮಂಬರದಲ್ಲಿ ಹೂಮಳೆಗಳಂ ಹಿಡಿದು
ಮೋಹರಂಬೆತ್ತು ನೋಡುತ್ತಿರಲು ನಾರಿ ಹರಕೆಗಳನವಧರಿಸೆಂದಳು ॥೧೩॥

ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿದಂ
ಜಲಿವೆರಸಿ ಗುರು ವಸಿಷ್ಠಂಗೆಱಗಿ ಶಿವನ ನಿ
ರ್ಮಲ ರೂಪ ನೆನೆದು ಮೇಲಂ ತಿರುಗಿ ನೋಡಿ ಭೂಚಂದ್ರಾರ್ಕತಾರಂಬರಂ ।
ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ ಃಂಗಂ ಮುಕ್ತನಾಗಲಿ ಮಂತ್ರಿ ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ ಹರಕೆ ಹೊಡೆಯೆಂದಳು ॥೧೪॥

ಹರಕೆಯಂ ಕೇಳಿ ಹವ್ವನೆ ಹಾಱ ಬೆಱಗಾಗಿ
ಮರವಟ್ಟುನಿಂದು ಭಾಪುರೆ ವಿಧಿಯ ಮುಳಿಸೆ ಹೋ
ದಿರುಳೆನ್ನ ಸುತನ ದುರ್ಮರಣಮಂ ತೋಱ ಕಯ್ಯೊಡನೆ ಮತ್ತೀಗಳೆನ್ನ ।
ವರ ಸತಿಯ ತಲೆಯ ನಾನೆನ್ನ ಕಯ್ಯಾರೆ ಪಿಡಿ
ದರಿವಂತೆ ಮಾಡಿದೆಯಿದಕ್ಕೆ ನಾನಿನಿತು ಹೇ
ವರಿಸುವವನಲ್ಲ ಪತಿಯಾಜ್ಞೆಯುಳಿದಡೆ ಸಾಕೆನುತ್ತ ಕೊಲಲನುವಾದನು ॥೧೫॥

ಮನದ ಶಂಕೆಯನುಳಿದು ಹೊಡೆಯಲನುವಾದ ಭೂ
ಪನ ಭಾವಮಂ ಕಂಡು ಹೊಡೆಯಬೇಡೆನ್ನ ನಂ
ದನೆಯರಂ ಮದುವೆಯಾದಡೆ ಸತ್ತ ಮಗನನೆತ್ತುವೆನಿವಳ ತಲೆಗಾವೆನು ।
ವಿನಯದಿಂ ಕೊಂಡ ಧನಮಂ ಕೊಟ್ಟು ನಿನ್ನ ಬಂ
ಧನ ಮೋಕ್ಷಮಂ ಮಾಡಿ ರಾಜ್ಯಮಂ ಪೊಗಿಸಿ ಮು
ನ್ನಿನ ಪರಿಯಲಿರಿಸುವೆಂ ಕೇಳೆಂದನಂಬರದೊಳಿರ್ದ್ದ ವಿಶ್ವಾಮಿತ್ರನು ॥೧೬॥

ತಿರುಗಿ ಮೇಲಂ ನೋಡಿ ಕಂಡಿದೇಂ ಮುನಿ ನಿಮ್ಮ
ಹಿರಿಯತನಕೀ ಮಾತು ಯೋಗ್ಯವೇ ಕೇಳೆನ್ನ
ಸಿರಿ ಪೋದಡೇನು ರಾಜ್ಯಂ ಪೋದಡೇನು ನಾನಾರ ಸಾರಿರ್ದಡೇನು ।
ವರ ಪುತ್ರನಸುವಳಿದು ಪೋದಡೇಂ ನಾನೆನ್ನ
ತರುಣಿಯಂ ಕೊಂದಡೇಂ ಕುಂದೆ ಸತ್ಯವನು ಬಿ
ಟ್ಟರನೆನಿಸಿದಡೆ ಸಾಕು ಎಂದೆತ್ತಿ ಹಿಡಿದ ಖಡ್ಗವ ಜಡಿಯುತಿಂದೆಂದನು ॥೧೭॥

ಎನ್ನ ದುಷ್ಕರ್ಮವಶದಿಂದಾದ ಕರ್ಮವೆಂ
ದಿನ್ನೆಗಂ ಬಗೆದೆನಾನಿಂದುತನಕಂ ಕಡೆಗೆ
ನಿನ್ನಗೊಡ್ಡಾಟವೇ ಹೊಲೆಯನಾದವನಿನ್ನು ಸತಿಗಿತಿಯ ಕೊಲೆಗೆ ಹೇಸಿ।
ದೆನ್ನೀವೆನೇ ಇದಂ ತೋಱ ಸಿಕ್ಕಿಸಬಂದ
ಗನ್ನಗತಕಕ್ಕೆ ಸೆಡೆವೆನೆ ಸಡಿಫಡೆನುತಾರ್ದ್ದ
ನನ್ನಿ ಕಾಱ ವಧುವನೆಲೆಲೆ ಶಿವಶಿವಮಹಾದೇವ ಹೊಡೆದಂ ಹೊಡೆದನು ॥೧೮॥

ಹೊಡೆದ ಕಡುಗದ ಬಾಯ ಕಡೆಯ ಹೊಡೆಗುಳನಾಂತು
ಮಡದಿಯೆಡೆಗೊರಳ ನಡುವಡಸಿ ಮೂಡಿದನು ಕೆಂ
ಜೆಡೆಯ ಶಶಿಕಳೆಯ ಸುರನದಿಯ ಬಿಸಿಗಣ್ಣ ಫಣಿಕುಂಡಲದ ಪಂಚಮುಖದ।
ಎಡದ ಗಿರಿಜೆಯ ತಳಿತ ದಶಭುಜದ ಪುಲಿದೊಗಲ
ನುಡುಗೆಯ ಮಹಾವಿಷ್ಣುನಯನವೇಱಸಿದ ಮೆ
ಲ್ಲಡಿಯ ಕಾಶೀರಮಣ ವಿಶ್ವನಾಥಂ ಸುರರ ನೆರವಿ ಜಯಜಯವೆನುತಿರೆ ॥೧೯॥

---

## ೧೪

ಸುರಕುಲಂ ಹೊಗಳೆ ಮುನಿಕುಲವೆಯ್ದೆ ಕೊಂಡಾಡೆ
ಗುರುಕುಲಂ ಹರಸೆ ರವಿಕುಲವೆಯ್ದೆ ಹಾರಯಿಸೆ
ವರ ಹರಿಶ್ಚಂದ್ರ ಭೂಭುಜನಯೋಧ್ಯೆಯ ಪೊಕ್ಕು ಧರೆಯ ಪಾಲಿಸುತಿರ್ದನು। ಸೂಚನೆ॥

ಪುರಹರಂ ಕರುಣಿಸಿದ ಪುಣ್ಯವಾರ್ತೆಯ ಕೇಳ್ದು
ನೆರೆಯಿತದನೇನೆಂಬೆನಮಮ ಹರಹರಗಣೇ
ಶ್ವರರಷ್ಟಲೋಕೇಶರಷ್ಟಮೂರ್ತಿಗಳಷ್ಟವಸುಗಳು ನವಬ್ರಹ್ಮರು।
ಸುರರು ಮುನಿವರರು ಖೇಚರರು ಯಕ್ಷರು ಮಯೂ
ರರು ಚರಾಚರರು ಗರುಡರು ಗುಹ್ಯಕರು ಸಿದ್ಧ
ರುರಗ ಮುಖ್ಯರು ದನುಜರೆಯ್ದೆ ನೆರೆಯಿತು ತಮ್ಮ ಪರಿವಾರ ಸಹಿತಲಾಗ ॥೧॥

ಮುರಹರಂ ಬಂದನಬ್ಜಾಸನಂ ಬಂದನಮ
ರರ ವರಂ ಬಂದನಗಜಾಪಿತಂ ಬಂದನೀ
ಶ್ವರಸುತಂ ಬಂದನೀರಾಱುರವಿಗಳು ಬಂದರಿಕ್ಷುಕೋದಂಡ ಬಂದ।
ಸುರುಚಿರ ನವಗ್ರಹಂಗಳು ಬಂದರೆಯ್ದುವವ
ಸರದೊಳವರಿವರೆನ್ನಲೇಕಿನ್ನು ಸರ್ವದೇ
ವರು ಬಂದರಪ್ರತಿಮ ದೇವಾಧಿದೇವ ಪಂಪಾವಿರೂಪಾಕ್ಷನೆಡೆಗೆ ॥೨॥

ಕುಡಿದೌಷಧಂ ಭಾಯ್ಗೆ ನಿಗ್ರಹಂ ಮಾಡಿ ತಾ
ಳ್ದೊಡಲಂಗೆ ಸುಖವನೀವಂತೆ ಲೋಕದ ಕಣ್ಗೆ
ಕಡು ಮುಳಿದರಂತೆ ತೋಱಿಸಿ ಸತ್ಯಶುದ್ಧವಪ್ಪನ್ನೆಗಂ ಕಾಡಿ ನೋಡಿ।
ಕಡೆಯೊಳು ಹರಿಶ್ಚಂದ್ರ ರಾಯಂಗೆ ಗಣವೆರಸಿ
ಮೃಡನನೆಳತಂದಿತ್ತು ಕೀರ್ತಿಯಂ ಮೂಜಗದ
ಕಡೆಗೆ ಹರಹಿದ ಮುನಿವರೇಣ್ಯ ವಿಶ್ವಾಮಿತ್ರ ಬಂದನು ವಸಿಷ್ಠಸಹಿತ ॥೩॥

ಅಂಬರದ ಸುರರು ಪೂಮಳೆಗಱೆಯೆ ತುಱುಗಿದ ಕ
ದಂಬವೆಡೆವಿಡದೆ ಪೂರೈಪ ಶಂಖದ ಹೊಯ್ಲು
ತಂಬಟದ ಸೂಳೈದ ನಿಸ್ಸಾಳ ಪೊಡೆವ ಭೇರಿಗಳ ಬಿರುದೆತ್ತಿ ಕರೆವ।
ಕೊಂಬುಗಳ ಬಾರಿಸುವ ಹಲಕೆಲವು ವಾದ್ಯನಿಕು
ರುಂಬದ ಮಹಾರವದ ಸಡಗರದ ಸಂಭ್ರಮಾ
ಡಂಬರದ ನಡುವೆ ತೆಗೆದಪ್ಪಿಕೊಂಡಂ ಹರಿಶ್ಚಂದ್ರನಂ ಗಿರಿಜೇಶನು ॥೪॥

ನೆನೆದು ಚಂಡಾಲ ಕಿಂಕರನಾಗಿ ಹೊಲೆ ವೇಷ
ವನು ಹೊತ್ತು ಸುಡುಗಾಡ ಕಾದು ಶವಶಿರದಕ್ಕಿ
ಯನು ಹೇಸದುಂಡು ಜೀವಿಸುತ ವರ ಪುತ್ರನಳಿದುದನು ಕಣ್ಣಾರ ಕಂಡು।
ಘನಪವಿತ್ರೆಯೆನಿಪ್ಪ ನಿಜಸತಿಯ ಕೊಂದ ನೀ
ಚನು ಮೂರ್ಖನಾನೆನ್ನ ಠಾವಿಂಗಿದೇಕೆ ಪಾ
ವನಮೂರ್ತಿ ನೀವು ಬಿಜಯಂಗೆಯ್ದಿರೆಂದಭವನಂಘ್ರಿಯಲಿ ಸೈಗೆಡೆದನು ॥೫॥

ಘನಸತ್ಯವೇ ಜೀವವೆಂದಿರ್ದ ನಿನ್ನ ಹೊಲೆ
ಯನ ಸೇವೆ ಗುರುಸೇವೆ ಹೊತ್ತ ಹೊಲೆವೇಷ ಪಾ
ವನ ಪುಣ್ಯವೇಷ ಸುಡುಗಾಡ ರಕ್ಷಿಸುವಿರವು ತಾಯಜ್ಞ ರಕ್ಷೆಯಿರವು।
ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯು
ಲ್ಲನಪೇಯ ಚಾಂದ್ರಾಯಣಂ ಪುತ್ರನಳಿವು ಜ
ನ್ಮನಿಕಾಯದಳಿವಂಗನಾಹನನ ಮಾಯಾಹನನವಂಜಬೇಡೆಂದನು ॥೬॥

ಏಳು ಧೀರಮಣಿ ಎಂದಭವ ಪರಸುತ್ತ ಕ
ಣ್ಣಾಲಜಲಮಂ ತೊಡೆದು ಸಂತೈಸಿ ಭಸಿತಮಂ
ಭಾಳದೊಳಗಿಟ್ಟು ತೆಗೆದಪ್ಪಿ ಕೌಶಿಕನ ಕರೆದೆಲೆ ಮುನಿಪ ಸುಕುಮಾರನ।
ತೋಳಹಿಡಿದೆತ್ತಿ ತಾ ಬೇಗೆಂದೆನಲ್ಕೆ ಮುನಿ
ಪಾಳಕಂ ವಿಷವೇಱಿ ಸತ್ತರಸುಪುತ್ರನಂ
ಏಳೇಳು ರೋಹಿತಾಶ್ವಾಂಕ ಎನೆ ಬೆಬ್ಬಳಿಸುತೆದ್ದನೇವಣ್ಣಿಸುವೆನು ॥೭॥

ರಾಹುವಿನ ವದನದಿಂ ಪೊಱಮಟ್ಟ ಶಶಿಬಿಂಬ
ವಾಹಾ ಎನಲು ತೊಳಗಿ ಬೆಳಗುತೊಪ್ಪುವ ತೆಱದಿ
ಗಾಹಿ ಕೌಶಿಕನ ಕೃತ್ರಿಮ ಸರ್ಪದಷ್ಟದಿಂ ನಿದ್ರೆ ತಿಳಿದೇಳುವಂತೆ
ರೋಹಿತಾಶ್ವಂ ವಿರೂಪಾಕ್ಷ ಶರಣೆನುತೇಳೆ
ದೇಹದೊಳು ಪುಳಕದಿಂ ಗುಡಿಗಟ್ಟಿ ಮಾತೆಯು ಮ
ಹಾಹರುಷದಿಂದಪ್ಪಿ ಬಂದೆಱಗಿದನು ವಿಶ್ವಪತಿಯಂಘ್ರಿಕಮಲಯುಗಕೆ ॥೮॥

ಅತಿ ಹುಸಿವ ಯತಿ ಹೊಲೆಯು ಹುಸಿಯದಿಹ ಹೊಲೆಯನು
ನ್ನತ ಯತಿವರನು ಹುಸಿದು ಮಾಡುವ ಮಹಾಯಜ್ಞ
ಶತವೆಯ್ದೆ ಪಂಚಪಾತಕ ಸತ್ಯವೆರಸಿದ ನ್ಯಾಯುವದು ಲಿಂಗಾರ್ಚನೆ।
ಶ್ರುತಿಮತವಿದೆನ್ನಾಜ್ಞೆ ನಿನ್ನಂತೆ ಸತ್ಯರೀ
ಕ್ಷಿತಿಯೊಳಿನ್ನಾರುಂಟು ಹೇಳೆಂದು ಪಾರ್ವತೀ
ಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ ಕೌಶಿಕಂಗಿಂತೆಂದನು ॥೯॥

ನುಡಿಯೊಳನ್ಯತಂ ತೋಱಿದಂತೆ ನಿನ್ನಲೆಗೆ ನಿಂ
ದಡೆ ಮೆಚ್ಚಿ ಮೇಲೇನ ಕೊಡುವೆನೆಂದೆಂದೆಯುದ
ಕೊಡು ಬೇಗದಿಂದ ವಿಶ್ವಾಮಿತ್ರ ಎಂದಡಾನ್ಯೆವತ್ತುಕೋಟಿ ವರುಷ।
ಬಿಡದೆ ಮಾಡಿದ ತಪಃ ಫಲದೊಳರ್ಧವನಾಂತೆ
ಕಡು ಮುಳಿದು ಕಾಡಿ ನೋಡಿದೆನು ಮೆಚ್ಚಿದೆನಿನ್ನು
ಹಿಡಿಯೆಂದುಸಿರ್ದು ಫಲವೆಲ್ಲವಾ ಕೊಟ್ಟನರಸಂಗೆ ಮುನಿಗಳ ದೇವನು ॥೧೦॥

ಪೊಡವಿಯೊಡೆತನದ ಪಟ್ಟವನಯೋಧ್ಯಾಪುರದ
ನಡುವೆ ಕಟ್ಟುವೆನೇಳು ನಡೆ ರಥವನೇಱೆಂದು
ಮೃಡ ಸಮಕ್ಷದೊಳು ಕೌಶಿಕನೆನಲು ಕಡೆತನಕ ಮುಂಜೀವಿತವ ಕೊಂಡೆನು।
ಒಡೆಯನುಳ್ಳವ ನಾನು ಬರಬಾರದಯ್ಯನಿ
ಮ್ಮಡಿಗಳಿಗೆ ದಾನವಾಗಿತ್ತ ವಸುಮತಿಯತ್ತ
ಲಡಿಯನಿಡುವವನಲ್ಲ ಬೆಸಸ ಬೇಡಿದನೆಂದು ಭೂನಾಥ ಕೈಮುಗಿದನು ॥೧೧॥

ಆನೇಕೆ ರಾಜ್ಯವೇಕೆಲೆ ಜನಪ ಸತ್ಯಸಂ
ಧಾನಮಂ ನೋಡಲೆಂದುಳ್ಳುದೆಲ್ಲವ ಕೊಂಡ
ಡೇನೆಂಬನೋ ಎಂದು ಕಾಡಿ ನೋಡಿದೆನೈಸೆ ಸರ್ವರಾಜ್ಯಂ ನಿನ್ನದು।
ಕೀನಾಶನಂ ಕರೆದು ವೀರಬಾಹುಕನಾಗಿ
ಭೂನಾಥನಂ ನಿಲಿಸಿ ಬೇಡಿದರ್ಥವ ಕೊಟ್ಟು
ನೀನೆ ತಱುಬೆಂದು ಕಳುಹಿದೆನೈಸೆ ಕೃತಕವಲ್ಲೆಂದು ನಂಬುಗೆಯಿತ್ತನು ॥೧೨॥

ಪೊಡವಿಪನ ವಾಕ್ಯದೊಳು ಹುಸಿಯ ನೀಂ ಪಿಡಿದೆಯಾ
ದಡೆ ನಾನು ಮುನಿತನವನುಳಿದು ನರಶಿರದೋಡ
ಪಿಡಿದು ಮದ್ಯಪಿಯಾಗಿ ತೆಂಕಮುಖವಹೆನೆಂದು ದೇವಸಭೆಯೊಳಗೆ ನಾನು।
ನುಡಿದು ಭಾಷೆಯನಿತ್ತೆ ನೀನೆನ್ನ ಭಾಷೆಯಂ
ನಡಸಿ ರಕ್ಷಿಸಿದೆ ಸತ್ಯವ ಮೆಱೆದೆಯೆಂದು ತಲೆ
ದಡವಿ ತನ್ನಂ ಕೊಟ್ಟನೀಶನ ಸಮಕ್ಷದೊಳು ವಾಸಿಷ್ಠನವನಿಪತಿಗೆ ॥೧೩॥

ಕರುಣದಿಂ ಧರ್ಮಾರ್ಥಕಾಮಮೋಕ್ಷಂಗಳಂ
ಸುರಿದು ನಿನ್ನಯ ಪುಣ್ಯಕಥೆ ಸರ್ವಲೋಕದೊಳ
ಗಿರಲಿಯೆಂದಭವನಿಂ ಬೇಕಾದ ವರವ ನೀಂ ಬೇಡು ಭೂಪಾಲ ಎನಲು।
ಹರೆಯುದೀ ಕಾಶಿಯೊಳು ನಿನ್ನ ಮಂದಿರದ ಮೇ
ಲೆರಡು ಯೋಜನದೊಳೆನ್ನಯ ಕೀರ್ತಿಪುರ ಹೇಮ
ವಿರಚಿತದೊಳಿರಬೇಹುದೆಂದು ಬೇಡಿದಡದಂ ಕೊಟ್ಟನಂದಗಜೇಶನು ॥೧೪॥

ಅರಸನೀಂ ಪುರವೊಕ್ಕು ಸಕಲ ಪೃಥ್ವಿಯುನಧಿಕ
ತರ ಸುಖದೊಳಪರಿಮಿತ ದಿನವಾಳ್ದು ಮೇಲೆ ನೀಂ
ಸುರಪುರದೆ ಪಿರಿದೈಸಿರಿಯು ಪದವೊಳೈದಿ ಸೌಖ್ಯತೆವಡೆವುದಿಂದು ನೀನು।
ಗುರುಭಕ್ತನತಿಸತ್ಯಮುಕ್ತನೈವತ್ತು ಕೋಟಿ
ವರುಷ ಸುಖಮಂ ಸುಖಸುತಿಹುದೆಂದು ನೃಪಗಭಯ
ಕರವಿತ್ತು ಬೀಳುಕೊಟ್ಟಥವ ಮತ್ತಿತ್ತಲಾ ಮುನಿಪತಿಯು ಕಡೆಗೆ ನೋಡಿ ॥೧೫॥

ದಾರಿಯೊಳು ದಾವಾಗ್ನಿಯಾಗಿಯುಗ್ನಿ ದ್ವಿಜಾ
ಕಾರದಿಂ ಕಳುಹಿ ನಿನ್ನರಸಿಯಂ ಮಾಱುಗೊಂ
ಡಾರಣ್ಯದೊಳು ಸರ್ಪನಾಗಿ ನಿನ್ನ ಸುತನಂ ಕೊಂದು ಭೂಪನ ಪುತ್ರನ।
ಚೋರ ರೂಪಿಂ ಕದ್ದು ಸತಿಯು ಮೇಲಿಟ್ಟು ನಿ
ಷ್ಕಾರಣಂ ನಿಗ್ರಹ ಶತಂ ಮಾಡಿ ನಿನ್ನನುವ
ನಾರೈದು ಬಳಲಿಸಿದೆನಪರಾಧಿಯಾನೆಂದು ಕೌಶಿಕಂ ಕೈಮುಗಿದನು ॥೧೬॥

ನಡೆಯಲಱಿಯದೆ ಪರುಷದವನಿಪನ ಕಯ್ಯಲೊಡೆ
ಹಡೆದ ಲೋಹದ ಬಂಟನಂತಾದೆನೆರಡನೆಯ
ಮೃಡನೆನಿಪ ನೀಂ ಮುನಿದೆಯಾಗಿ ರವಿಕುಲ ಶುದ್ಧವಾಯ್ತು ಜಗದೊಳಗೆ ಕೀರ್ತಿ।
ಕುಡಿವರಿದುದಜಹರಿಗಳಾದ್ಯಂತಮಂ ಕಾಣ
ಹಡೆಯರೀಶ್ವರನ ನಿಜಮಂ ಕಂಡು ಕೈವಲ್ಯ
ದೊಡೆಯನಾದೆಂ ನಿಮ್ಮ ಕರುಣದಿಂದೆಂದರಸನಾ ಮುನಿಗೆ ಕೈಮುಗಿದನು ॥೧೭॥

ಎರಡಱ ಮನೋಮಲಿನ ಹೋಯಿತ್ತು ಕರಿಗೊಂಡು
ಹುರುಡು ಮುರುಟಿತ್ತು ಮುನಿಸನುಗೆಟ್ಟುದುಗ್ರಮ
ತ್ಸರ ಬಚ್ಚೆಯಾಯ್ತಿನ್ನು ಮರುಳಿ ರಾಜ್ಯಕ್ಕೆ ಪಟ್ಟವನು ಕಟ್ಟುವೊಡೆ ನಾವು।
ಪುರಕೊಯ್ಯಲೇಕೆ ಸಪ್ತದ್ವೀಪಮಂ ಸಲಹು
ವರಸುತಾನೆಂಬಾಗಳಿದ್ದುದೇ ಪುರವೆಂದು
ಹರಸಿ ಪಟ್ಟವನು ಕಟ್ಟಿದನು ಪಂಪಾ ವಿರೂಪಾಕ್ಷನಾ ಭೂಮಿಪತಿಗೆ ॥೧೮॥

ಲೀಲಾಸನದ ಮೇಲೆ ಭೂಪ ಭೂಪನ ತೊಡೆಯ
ಮೇಲೆ ನಿಜವನಿತೆ ವನಿತೆಯ ತೊಡೆಯ ಮೇಲೆ ನಿಜ
ಬಾಲಕಂ ಬಾಲಕನ ಕೆಲದಲುತ್ತಮ ಮಂತ್ರಿ ಮುಖ್ಯರೆನೆ ತುಱುಗಿ ಕವಿದು।
ಮೂರೋಕ ಹರಸಿ ಜಯಜಯಯೆನುತ ಶ್ಲೋಕಾನು
ಕೂಲದಾಶೀರ್ವಾದಮಂ ಮಾಡಿ ನವಪುಷ್ಪ
ಮಾಲೆಗಳನಿಕ್ಕಿ ಮಂತ್ರಾಕ್ಷತೆಗಳಂ ತಳಿದರಖಿಳ ಮನುಗಳು ಮುನಿಗಳು ॥೧೯॥

ಹರಸಿ ಹಾರೈಸಿ ತೂಪಿಱುದು ಜಯಸೇಸೆಯಂ
ಗಿರಿಜಾತೆ ವೀರಸೇಸೆಯ ರುದ್ರಕನ್ನಿಕೆಯ
ರರಿದಪ್ಪ ನಿತ್ಯ ಸೇಸೆಯನಮರ ವನಿತೆಯರು ಬಾಲಮಂಗಳ ಸೇಸೆಯು।
ಸಿರಿಸರಸ್ವತಿಯುರೊಲವಿಂ ಸತ್ಯ ಸೇಸೆಯಂ
ಪಿರಿಯರುಂಧತಿ ರಾಜ್ಯ ಸೇಸೆಯ ದಿಗಂಗನೆಯ
ರಿರದೆ ಸಂತೋಷ ಸೇಸೆಯ ನಿಖಿಳ ಸತಿಯರಿಕ್ಕಿದರಂದು ಭೂಮಿಪತಿಗೆ ॥೨೦॥

ಗಿರಿಸುತೆಯನಾಲಂಗಿಸುವ ಭುಜದೊಳಪ್ಪಿ ಮುಂರ
ಹರನ ಕಣ್ಣಿಟ್ಟ ಪದಮಂ ಶಿರದೊಳಿಟ್ಟು ನೆರ
ವರವೀವ ಕೈಯಿಂದ ಮೈದಡವಿ ಸಕಲ ವೇದಂಗಳಂ ಪಡೆದ ಬಾಯಿಂ।
ಹರಸಿ ಮೂಜಗದ ಪುಣ್ಯಂ ಬಳಸಿದಕ್ಷಿಯಿಂ
ಕರುಣದಿಂ ನೋಡಿ ನಾನಾ ಗಣೇಶ್ವರರು ಮ
ತ್ಸರಿಸುವ ಪಸಾಯತಂಗೊಟ್ಟು ಭೂಭುಜನನುಪಚರಿಸಿದಂ ಪುರಮಥನನು ॥೨೧॥

ಕ್ಷಿಪ್ರದಿಂದಂ ನೃಪನನೊಡಗೊಂಡಯೋಧ್ಯಾಪು
ರ ಪ್ರವೇಶವನು ಮಾಡಿಸಿ ಬಪ್ಪುದೆಂದು ಸಕ
ಲ ಪ್ರಮಥರಂ ಹರಿವಿರಂಚಿವಾಸವ ಮುಖ್ಯ ಸುರನಿಕರ ಮನುಮುನಿಗಳು।
ಅಪ್ರತಿಮನುಗ್ರನುದ್ದಂಡನತಿಬಳದರ್ಪ
ಕ ಪ್ರಹರಕನು ಪಂಪಾವಿರೂಪಾಕ್ಷ ಲಿಂ
ಗಪ್ರಭು ವಿಲಾಸದಿಂ ಕಳುಹಿ ತಾಂ ನಡೆಗೊಂಡನಂದು ಕೈಲಾಸಗಿರಿಗೆ ॥೨೨॥

ಇಳೆಯುವಳೆಯಂ ಮುಳುಗೆ ತುಳಿದ ದಳಭಾರದಿಂ
ದೊಳು ಗಗನದಗಲನುಂ ಬಗಿವ ನಾನಾ ತಳೆಯ
ಬಳಗದಿಂದೊಳಗೆ ದೆಸೆದೆಸೆಯ ವೀಥಿಯ ಮುಸುಕಿ ತಳತಳಿಪ ಶಸ್ತ್ರಚಯದಿಂ।
ಜಳಧಿಜಳ ತುಳುಕೆ ಮೊಳಗುವ ಭೇರಿ ನಿಸ್ಸಾಳ
ಕುಳದಿಂ ವಿಲಾಸವಡೆದೈತರುತಿಪ್ಪ ಭೂ
ತಳ ಪತಿಯನಿದಿರ್ಗೊಂಬ ಪುರಜನದ ಪರಿಜನದ ಸಂಭ್ರಮವನೇವೊಗಳ್ವೆನು ॥೨೩॥

ಶಶಿಯ ಬರವಂ ಬಯಸುವಂಬುನಿಧಿಯಂತೆ ಸಂ
ತಸದಿಂದ ಕಳಸಕನ್ನಡಿವಿಡಿದ ಸತಿಯರಿ]
ದ್ದೆಸೆಗಳಲ ಕೈಗೆಯ್ದು ಕೈಕೊಂಡು ಕವಿವ ನಾನಾ ಗಜಪದಾತಿಗಳಲ।
ಮಸಗಿ ಮಂಡಳಿಸಿ ತುಱುಗಿದ ರಥದ ಕೂಡೆ ಮಾ
ಮಸಕದಿಂ ಕುಣಿವ ಕುದುರೆಗಳ ಬಳಗದಿ ಭೂಮಿ
ಬೆಸರಾದುದೆಂಬಂತೆ ಪರಿಜನದ ತಿಂತಿಣಿಯೊಳಿದಿರ್ಗೊಂಡರವನಿಪನನು ॥೨೪॥

ಅನುನಯದಿ ವನಜವನಮಂ ದಿನಪ ಪೊಗುವಂತೆ
ವನಮಂ ವಸಂತ ಪೊಗುವಂತಯೋಧ್ಯಾಪುರವ
ನಿನಕುಲ ಹರಿಶ್ಚಂದ್ರ ಭೂವರಂ ಪೊಗಲು ಜಯಯೆಂಬ ಪಾಡುವ ಪರಸುವ ।
ಜನಕಭಯವೀಯುತ್ತ ಪರಿಪರಿಯ ತೋರಣದ
ಘನದ ಬಿನ್ನಣಕೆ ತಲೆದೂಗುತ್ತ ಬಿಡದೆ ಮನೆ
ಮನೆಯ ಗುಡಿಗಳ ನೋಡಿ ನಗುತ ನಲಿಯುತ್ತ ತನ್ನರಮನೆಗೆ ನಡೆತಂದನು ॥೨೫॥

ಮಡದಿಯರ ಮಂಗಳಾರತಿಗೆ ಭೂಸುರರೊಲಿದು
ಕೊಡುವ ಮಂತ್ರಾಕ್ಷತೆಗೆ ಕವಿಗಳಾಶೀರ್ವಾದ
ದಡಕಕ್ಕೆ ಪುಣ್ಯ ಪಾಠಕರ ಕೈವಾರಕ್ಕೆ ಗಾಯಕರ ಗೀತ ತತಿಗೆ ।
ಕಡೆಗೆ ಲೆಂಕರು ನಿವಾಳಿಸುವ ರಚನಾವಳಿಗೆ
ಯಡಿಗಡಿಗೆ ದನಿಗೊಡುವ ಶುಭವಾದ್ಯ ಜನವ ಮುಂ
ಗುಡಿಯ ಹರಕೆಗೆ ಮನಂಗೊಡುತ ಭೂಪಾಲಕಂ ಅರಮನೆಯನೊಳಪೊಕ್ಕನು ॥೨೬॥

ಜನಪತಿಯ ಕೈವಿಡಿದು ಮನೆಪೊಕ್ಕನತಿಮುದದಿ
ಘನವೆನಿಪ ಧರ್ಮಾರ್ಥಕಾಮಮೋಕ್ಷವನೀವ
ಮುನಿಪಿತಾಮಹನು ಮುನಿರಾಜಾಧಿರಾಜನು ಮುನೀಶ್ವರನು ಮುನಿಮುಖ್ಯನು ।
ಮುನಿವರನು ಮುನಿಪುಂಗವನು ಮುನೀಂದ್ರನು ಸರ್ವ
ಮುನಿವರೇಣ್ಯನು ಮುನಿಶ್ರೇಷ್ಠನು ಮುನೀಶನುಱೆ
ಮುನಿಗಳಾದಿತ್ಯನು ಮುನಿಸ್ತುತ್ಯನೆನಿಪ ವಿಶ್ವಾಮಿತ್ರ ಮುನಿನಾಥನು ॥೨೭॥

ಅರಸನೀವಿರಿಸಿಹೋದುದಱೊಳೇನುಂ ಕುಂದ
ದರೆಯಾಗದಳಿತುಳುಕದನುಗಿಡದೆ ಕೇಳಖಿಳ
ಕರಿಗಳಿವೆ ತುರಗವಿವೆ ಭಂಡಾರವಿವೆ ಕೊಠಾರಂಗಳಿವೆ ಹಲವಂಗದ ।
ಅರಮನೆಗಳಿವೆ ಸತಿಪ್ರತತಿಯಿವೆ ಸಿವುಡಿಯಿವೆ
ಕರಣವಿವೆ ಮುದ್ರೆಯಿದೆ ಕೀಲಾರವಿದೆ ಸರ್ವ
ಪರಿವಾರವಿದೆ ನೋಡಿಕೊಳ್ಳೆನುತೊಪ್ಪಿಸಿದ ಮುನಿನಾಥನವನಿಪತಿಗೆ ॥೨೮॥

ಏನೇನನೊಪ್ಪುಗೊಳಬೇಕಾದುದೆಲ್ಲವಂ
ತಾನೊಪ್ಪುಗೊಂಡು ಮುದದಿಂದ ನಡೆದಾ ಮಹಾ
ಸ್ಥಾನರಂಗದ ಸಿಂಹವಿಷ್ಟರವನೇಱಿ ಮಣಿಮಯುಮಲಗನಂಡುಗೊಂಡು ।
ದಾನಧರ್ಮಂಗಳಂ ಮಾಡಿ ಕಾಣಿಕೆಗೊಡುವ
ನಾನಾಜನಕ್ಕಭಯವಿತ್ತು ಮುರಹರ ಕಮಲ
ಸೂನು ವಾಸವ ಮುಖ್ಯದೇವರ್ಗೆ ನಮಿಸಿ ಕಳುಹಿದನು ನಿಜಲೋಕಗಳಿಗೆ ॥೨೯॥

ಪಾಲಿಸಿದೆ ರಕ್ಷಿಸಿದೆಯೆನ್ನ ನೀನೆಂದು ಭೂ
ಪಾಲಕಂ ಕೈಮುಗಿದು ಕೌಶಿಕ ಪ್ರಮುಖ ಮುನಿ
ಜಾಲಮಂ ಕಳುಹಿ ಬಳಿಕುಡುಗೊಱೆಯಕೊಟ್ಟನಂದವರಿವರ್ ತಾವೆನ್ನದೆ।
ಚೋಳ ಮಾಳವ ಮಗಧ ಗುರ್ಜರ ಕಳಿಂಗ ನೇ
ಪಾಳ ಬರ್ಬರ ಲಾಳ ಕೊಂಕಣದ ತುಳುವ ಮಲೆ
ಯಾಳ ಸೌರಾಷ್ಟ್ರಕ ಕರೂಷ ಕಾಶ್ಮೀರ ಹಮ್ಮೀರದ ಧರಾಧಿಪರನು ॥೩೦॥

ಸತ್ಯವನು ನುಡಿದು ಪಾಲಿಸಿ ಧರೆಗೆ ಮೆಱೆದು ಶಿವ
ಭಕ್ತಿಯಲಿ ನಡೆದು ಹರನಲಿ ವರಂಬಡೆದು ತ
ನ್ನುತ್ತಮದ ಗುರುವಶಿಷ್ಠನ ನುಡಿಯ ಗೆಲಿಸಿದನು ದೇವಮುನಿಸಭೆ ಮೆಚ್ಚಲು।
ಅತ್ಯಧಿಕ ಕೌಶಿಕ ಮುನೀಶ್ವರನು ಮಾಡಿದೈ
ವತ್ತುಕೋಟಿಗಳ ವರುಷದ ತಪಃ ಫಲವ ಪಡ
ದರ್ತಿಯಿಂದೊಲಿದು ಸುಖದಿಂ ರಾಜ್ಯಗೆಯ್ಯುತಿರ್ದನು ಹರಿಶ್ಚಂದ್ರನೃಪನು ॥೩೧॥

ಹರನ ಸಭೆಯೊಳಗೆ ಮುರಹರನ ಸಭೆಯೊಳಗೆ ವಾ
ಗ್ವರನ ಸಭೆಯೊಳಗೆ ಪವಿಧರನ ಸಭೆಯೊಳಗೆ ದಿನ
ಕರನ ಸಭೆಯೊಳಗ ಭಾಸುರ ಶಿಖಿಯ ಸಭೆಯೊಳಗೆ ಶಶಿಯೊಂದು ಸಭೆಯ ನಡುವೆ।
ಪರಮ ಮುನಿಸಭೆಯೊಳಗೆ ವರನೃಪರ ಸಭೆಯೊಳಗೆ
ಧರಣಿಪನ ಕಥನವೇ ಕಥನ ಮಾತೇ ಮಾತು
ಪರವಿಲ್ಲ ಬೇಱನ್ಯವಾರ್ತೆಗಳು ಹುಗಲಿಲ್ಲವೆಂಬಾಗಳೇವೊಗಳ್ವೆನು ॥೩೨॥

ಧರೆಯೊಳು ಹರಿಶ್ಚಂದ್ರ ಚಾರಿತ್ರಮಂ ಕೇಳ್ದ
ನರರೇಳು ಜನ್ಮದಿಂ ಮಾಡಿರ್ದ ಪಾತಕವು
ತರಣಿಯುದಯದ ಮುಂದೆ ನಿಂದ ತಿಮಿರದ ತೆಱದೆ ಹರೆಯುತಿಹುದೇಕೆಂದೊಡೆ।
ಹರನೆಂಬುದೇ ಸತ್ಯ ಸತ್ಯವೆಂಬುದೆ ಹರನು
ಎರಡಿಲ್ಲವೆಂದು ಶ್ರುತಿ ಸಾಱುತಿರಲಾ ವಾಕ್ಯ
ವರರೆ ನಿರುತವ ಮಾಡಿ ಮೂಜಗಕೆ ತೋಱಿದ ಹರಿಶ್ಚಂದ್ರಕಥೆಗೇಳ್ವಡೆ ॥೩೩॥

ಅನೃತವಱಿಯದ ಹೊಲೆಯುನಂ ನೆನೆಯೆ ಪುಣ್ಯವೆಂ
ದೆನೆ ಸೂರ್ಯಕುಲಜ ಕಲಿ ದಾನಿ ಸತ್ಯಂ ವಸಿ
ಷ್ಠನ ಶಿಷ್ಯನಧಿಕ ಶೈವಂ ಕಾಶಿಯೊಳ್ ಮೆಱೆದ ವೇದ ಪ್ರಮಾಣಪುರುಷ।
ಘನನೃಪಹರಿಶ್ಚಂದ್ರನೆಂದಡಾತನ ಪೊಗಳ್ದು
ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದ
ನನುಪೇಕ್ಷೆಯಿಂದ ಕವಿ ರಾಘವಾಂಕಂ ಮಹಾಲಿಂಗಭಕ್ತರ ಭಕ್ತನು ॥೩೪॥

---

WD 203—GPB—2,000—28-5-57

